ಶ್ರೀಮದ್ವಿಶಿಷ್ಟಾದ್ವೈತ ಸಿದ್ಧಾನ್ತ ರತ್ನಮಾಲಾ
ದ್ವಿತೀಯ ರತ್ನವು—ಹನ್ನೆರಡನೆಯ ಸಂಚಿಕೆಯು

ಶ್ರೀಮನ್ನಿಗಮಾನ್ತ ಮಹಾದೇಶಿಕಪ್ರಣೀತ

# ಶ್ರೀಮದ್ರಹಸ್ಯತ್ರಯಸಾರದ

ಸಿದ್ಧೋಪಾಯ ಸಾಧನಾಧಿಕಾರೋ ತ್ರಯೋವಿಂಶಃ

ವಿದ್ಯಾಭ್ಯಾಸದ
**ಸಿ. ಯಂ. ವಿಜಯರಾ**
ರಚಿಸಲ್ಪಟ್ಟ

**ಆಚಾರ್ಯಹೃದಯಾನ್ವೇಷಿಣೀ**

ಎಂಬ ಕನ್ನಡ ಅರ್ಥ ತಾತ್ಪರ್ಯಗಳೊಂದಿಗೆ ಮುದ್ರಿಸಲ್ಪಟ್ಟಿರುತ್ತದೆ.

---

ಬೆಂಗಳೂರು ಸಿಟಿ

ಬೆಲೆ ೦—೧೪—೦

ಶ್ರಿಯೈ ನಮಃ

ಶ್ರೀನಿವಾಸಾಯ ನಮಃ

ಶ್ರೀಮತೇ ರಾಮಾನುಜಾಯ ನಮಃ 

ಶ್ರೀಮತೇ ನಿಗಮಾಂತ ಮಹಾದೇಶಿಕಾಯ ನಮಃ



ಅಥ ಶ್ರೀಮದ್ರಹಸ್ಯತ್ರಯಸಾರೇ

# ಸ್ಥಿರೀಕರಣಾಖ್ಯ ದ್ವಿತೀಯಭಾಗಃ

## ಸಿದ್ಧೋಪಾಯ ಶೋಧನಾಧಿಕಾರಃ ೨೩.

**ಯುಗಪದಖಿಲಂ ಪ್ರತ್ಯಕ್ಷೇಣ ಸ್ವತಸ್ಸತತಂ ವಿದನ್ ।**
**ನಿರವಧಿ ದಯಾನಿತ್ಯೋ (ದಿವ್ಯೋ) ದನ್ವಾನಶಕ್ಯ ವಿವರ್ಜಿತಃ ।**

---

ಶ್ರೀಮತೇ ಶ್ರೀನಿವಾಸ ಮಹಾದೇಶಿಕಾಯ ನಮಃ

---

**ಅವತಾರಿಕೆ.** ಹಿಂದಿನ ೨೨ ಅಧಿಕಾರಗಳಿಂದ ಅರ್ಥಾನುಶಾಸನವೆಂಬ ಪ್ರಥಮಭಾಗದಲ್ಲಿ ತತ್ತ್ವಹಿತ ಪುರುಷಾರ್ಥಗಳನ್ನು ಸವಿಸ್ತರವಾಗಿ ಉಪದೇಶಿಸಿ, ಈ ದ್ವಿತೀಯ ಭಾಗದಲ್ಲಿ, ಅರ್ಥಾನುಶಾಸನ ವಿಷಯದಲ್ಲಿ ತೋರಿಬರುವ ಅನೇಕ ಪೂರ್ವಪಕ್ಷಗಳನ್ನೆಲ್ಲಾ ಖಂಡಿಸಿ, ಆ ಬೋಧಿಸಿದುದನ್ನೇ ಸ್ಥಿರಪಡಿಸುವದರಿಂದ ಇದಕ್ಕೆ ಸ್ಥಿರೀಕರಣ ಭಾಗವೆಂದು ಹೆಸರು. ಈ ಭಾಗಕ್ಕೆ ಸೇರಿದವು ನಾಲ್ಕು ಅಧಿಕಾರಗಳು —(೧) ಸಿದ್ಧೋಪಾಯ ಶೋಧನಾಧಿಕಾರಃ, (೨) ಸಾಧ್ಯೋಪಾಯ ಶೋಧನಾಧಿಕಾರಃ, (೩) ಪ್ರಭಾವ ವ್ಯವಸ್ಥಾಧಿಕಾರಃ, (೪) ಪ್ರಭಾವ ರಕ್ಷಾಧಿಕಾರಃ. ಇದರಲ್ಲಿ ಸಿದ್ಧೋಪಾಯನು ಶ್ರಿಯಃಪತಿಯಾದ ಸರ್ವೇಶ್ವರನೆಂದು ಹೇಳುವ ಸಂದರ್ಭದಲ್ಲಿ ಉಂಟಾಗಬಹುದಾದ ಪೂರ್ವಪಕ್ಷಗಳಿಗೆ ಸಮಾಧಾನವು ಈ ಭಾಗದ ಮೊದಲಿನ ಅಧಿಕಾರದಲ್ಲೂ, ಸಾಧ್ಯೋಪಾಯಗಳು ಪರಿಕರಗಳಿಂದ

ಸೇರಿದ ಭಕ್ತಿಪ್ರಪತ್ತಿಗಳೆಂದು ಹೇಳುವದರಲ್ಲಿ ತೋರಿಬರುವ ಪೂರ್ವಪಕ್ಷಗಳಿಗೆ ಸಮಾಧಾನವು ಎರಡನೆಯ ಅಧಿಕಾರದಲ್ಲೂ, ಈ ಭರನ್ಯಾಸಕ್ಕೆ ಇಲ್ಲದಿರುವ ಹೆಚ್ಚು ಮಹಿಮೆಗಳನ್ನಾರೋಪಿಸುವ ಪೂರ್ವಪಕ್ಷಗಳಿಗೆ ಸಮಾಧಾನವು ಈ ಮೂರನೆಯ ಅಧಿಕಾರದಲ್ಲೂ, ಭರನ್ಯಾಸಕ್ಕೆ ಇರುವ ಮಹಿಮೆಗೆ ನ್ಯೂನತೆಯನ್ನು ಕಲ್ಪಿಸುವ ಆಕ್ಷೇಪಣೆಗೆ ಸಮಾಧಾನವು ಈ ನಾಲ್ಕನೆಯ ಅಧಿಕಾರದಲ್ಲೂ, ಉಪಪಾದಿತ ಗಳಾಗಿವೆ.

ಸಿದ್ಧೋಪಾಯ ವಿಷಯವಾದ ಆಕ್ಷೇಪಣೆಗಳ ನಿರಸನವು ಪ್ರಧಾನವಾದುದ ರಿಂದ ಪ್ರಥಮತಃ ಸಿದ್ಧೋಪಾಯ ಶೋಧನವು ಮಾಡಲ್ಪಡುತ್ತದೆ ಈ ಸಂದರ್ಭ ದಲ್ಲಿ ಕೆಲವು ಪೂರ್ವಪಕ್ಷಗಳನ್ನು ತರಬಹುದು ಹೇಗೆಂದರೆ —

೧ ಸರ್ವೇಶ್ವರನೇ ತಂದೆಯೂ ಮತ್ತು ತಾಯಿಯೂ ತಾನೇ ಸ್ತನ್ಯವನ್ನು ಕೊಟ್ಟು ಕಾಪಾಡುವದು ನ್ಯಾಯವಾಗಿರುವಾಗ ಬೇರೆ ಸಾಧ್ಯೋಪಾಯಾಪೇಕ್ಷೆ ಏತಕ್ಕೆ ?

೨ ಭಗವಂತನು ಹಾಗೆ ಯಾವುದರ ಸಾಪೇಕ್ಷತ್ವವೂ ಇಲ್ಲದೆ ರಕ್ಷಿಸದಿದ್ದರೆ ಆತನ ಸ್ವಾತಂತ್ರ್ಯಕ್ಕೆ ನೈಷ್ಫಲ್ಯವನ್ನು ಕಲ್ಪಿಸಿದಹಾಗಾಗುವದಿಲ್ಲವೇ ?

೩ ಭಗವಂತನೇ ಮುಖ್ಯೋಪಾಯವಾಗಿರುವಾಗ ಬೇರೆ ಉಪಾಯ ಸಾಪೇಕ್ಷತ್ವವು ಆತನ ಮಹಿಮೆಗೆ ಕುಂದಕವಲ್ಲವೇ ?

೪. ಅನೇಕ ಕಡೆಗಳಲ್ಲಿ ಸಿದ್ಧೋಪಾಯನು ಸರ್ವೇಶ್ವರನೆಂದು ಹೇಳಿರು ವಾಗ ಲಕ್ಷ್ಮಿಗೂ ಕೂಡ ಉಪಾಯಕೋಟಿಯಲ್ಲಿ ಅನ್ವಯವು ಹೇಗೆ ? ಸರ್ವೇಶ್ವರನ ಅನನ್ಯೋಪಾಯತ್ವಕ್ಕೆ ಹಾನಿ ಉಂಟಾಗುವದಿಲ್ಲವೇ ? ಏಕಾಂತ್ಯಕ್ಕೆ ಭಂಗ ವಲ್ಲವೇ ? ಚರಮಶ್ಲೋಕದಲ್ಲಿ ಮಾಮೇಕಂ ಎಂದು ಹೇಳಿರುವದಕ್ಕೆ ವಿರೋಧ ವಲ್ಲವೇ ? ಇವೇ ಮೊದಲಾದ ಆಕ್ಷೇಪಣೆಗಳಿಗೆ ಸಮಂಜಸವಾದ ಸಮಾಧಾನ ಗಳು ಈ ಅಧಿಕಾರದಲ್ಲಿ ಹೇಳಲ್ಪಟ್ಟು ಸಿದ್ಧೋಪಾಯ ಲಕ್ಷಣವನ್ನು ಶೋಧನೆ ಮಾಡುವದರಿಂದ ಇದಕ್ಕೆ ಸಿದ್ಧೋಪಾಯ ಶೋಧನಾಧಿಕಾರವೆಂದು ಹೆಸರು.

**ಅರ್ಥ :— ಅಖಿಲಂ** - ಸಮಸ್ತವನ್ನೂ, ಉಭಯವಿಭೂತಿಯ ಸಮಸ್ತ ವಸ್ತುಗಳನ್ನೂ, **ಯುಗಪತ್** - ಕ್ರಮಕ್ರಮವಾಗಿ ಅಲ್ಲದೆ ಏಕಕಾಲದಲ್ಲೇ **ಸ್ವತಃ**- ಇತರಾಪೇಕ್ಷೆ ಇಲ್ಲದೆ ತಾನೇ ತನ್ನ ಸ್ವರೂಪ ಮಾಹಾತ್ಮ್ಯದಿಂದಲೇ, **ಸತತಂ**- ಯಾವಾಗಲಾದರೂ ಒಂದು ಕಾಲದಲ್ಲಿಲ್ಲದೆ ಎಲ್ಲಾ ಕಾಲದಲ್ಲೂ, **ಪ್ರತ್ಯಕ್ಷೇಣ** - ಅನುಮಾನ ಶಾಬ್ದಪ್ರಮಾಣಗಳ ಅವಶ್ಯಕತೆ ಇಲ್ಲದೇನೇ ಪ್ರತ್ಯಕ್ಷದಿಂದಲೇ, **ವಿದನ್** - ತಿಳಿಯುವವನಾಗಿ, ಸಾಕ್ಷಾತ್ಕರಿಸುವವನಾಗಿ, **"ಯಸ್ಸರ್ವಜ್ಞಸ್ಸರ್ವವಿತ್"** ಎಂದು ಶ್ರುತಿಯಲ್ಲಿ ಹೇಳಿರುವ ಹಾಗೆ ಸರ್ವಜ್ಞನಾಗಿಯೂ ಸರ್ವವಿತ್ತಾಗಿಯೂ ಇರು

**ಜಲಧಿಸುತಯಾ ಸಾರ್ಧಂ ದೇವೋ ಜಗತ್ಪರಿಪಾಲಯನ್ ।**
**ಪರಮ ಪುರುಷಸ್ಸಿದ್ಧೋಪಾಯಃ ಪ್ರತೀಷ್ಟ ಭರಸ್ಸತಾಂ ॥ ೫೧ ॥**

---

ವವನಾಗಿ, **ನಿರವಧಿದಯಾದಿವ್ಯೋದನ್ವಾನ್** - ಎಲ್ಲೆ ಇಲ್ಲದಿರುವ ಕರುಣೆಗೆ ದಿವ್ಯ ಸಮುದ್ರನಾಗಿರುವ, ಸಾರಾಸ್ವಾದನಿಯುವರು **ಸ್ತುತಃ** - ಎಂಬುವದನ್ನು ಇದಕ್ಕೂ ಕಾಕಾಕ್ಷಿನ್ಯಾಯದಿಂದ ಸೇರಿಸಿ ಅನ್ವಯಿಸಿರುತ್ತಾರೆ; **ನಿರವಧಿದಯಾನಿತ್ಯೋದನ್ವಾನ್** ಎಂದು ಪಾಠಾಂತರವು, ಆಗ ಎಲ್ಲೆ ಇಲ್ಲದ ಕರುಣೆಗೆ ಶಾಶ್ವತವಾದ ಸಮುದ್ರಪ್ರಾಯನೆಂಬರ್ಥವು **ಅಶಕ್ಯವಿವರ್ಜಿತಃ** - ತನಗೆ ಅಶಕ್ಯವಾದುದೇ ಇಲ್ಲದವನಾಗಿ, ಸರ್ವಶಕ್ತನಾಗಿ, **ಜಲಧಿಸುತಯಾ ಸಾರ್ಧಂ** – ಕ್ಷೀರಸಾಗರ ಕನ್ಯಕೆಯಾದ ಲಕ್ಷ್ಮಿಯೊಂದಿಗೇನೆ, ಏಕಾಕಿಯಾಗಿಯಲ್ಲದೆ ತನ್ನ ಪತ್ನಿಯೊಂದಿಗೇನೇ ಎಂಬರ್ಥವು, **ದೇವಃ** - ಲೀಲಾಪರನಾದ, **ಪರಮಪುರುಷಃ** - ಪುರುಷಸೂಕ್ತದಲ್ಲಿ ಸರ್ವಶ್ರೇಷ್ಠನೆಂದು ಹೇಳಲ್ಪಟ್ಟಿರುವ ಪುರುಷಶಬ್ದವಾಚ್ಯನಾದ ನಾರಾಯಣನು, **ಜಗತ್ಪರಿಪಾಲಯನ್**-ಜಗತ್ತುಗಳನ್ನೆಲ್ಲಾ ಚನ್ನಾಗಿ ಪಾಲಿಸುವನಾಗಿ, **ಪ್ರತೀಷ್ಟಭರಸ್ಸನ್** - ಆತನ ವಿಧ್ಯುಕ್ತಿಗಳನುಸಾರವಾಗಿ ಅನುಷ್ಠಿಸಿದ ಭರನ್ಯಾಸವ್ಯಾಜಮೂಲಕವಾಗಿ, ಅಂಗೀಕರಿಸಿದ ಭರವುಳ್ಳವನಾಗಿ, **ಸತಾಂ**-ಪರಮಾತ್ಮನಲ್ಲಿ ಸಕ್ತವಾದ ಮನಸ್ಸುಳ್ಳವರಾಗಿ ಸತ್ತರ್ಕದಿಂದ ವೇದಾಂತ ವಿಚಾರ ಮಾಡುವ ಪ್ರಪನ್ನ ಜನರಿಗೆ **ಸಿದ್ಧೋಪಾಯಃ** - ಸಿದ್ಧೋಪಾಯನಾಗಿರುತ್ತಾನೆ ಸರ್ವಜ್ಞನಾಗಿಯೂ ಸರ್ವಶಕ್ತನಾಗಿಯೂ, ಕರುಣಾಸಾಗರನಾಗಿಯೂ, ಲಕ್ಷ್ಮೀ ವಿಶಿಷ್ಟನಾಗಿ ಲೀಲಾಪರನಾಗಿ ಸಮಸ್ತ ಜಗದ್ರಕ್ಷಕನಾಗಿ ಹೀಗೆ ಸರ್ವವಿಧ ಆಶ್ರಯೋಚಿತ ಸ್ವರೂಪ ಸ್ವಭಾವಪರಿಕರಾದಿಗಳಿಂದ ಯುಕ್ತನಾದ ಶ್ರಿಯಃಪತಿಯೇ ನಮಗೆ ಪರಮಪದ ಸೋಪಾನವನ್ನು ಹತ್ತಿಸುವ ಸಿದ್ಧೋಪಾಯನೆಂದು ಇಲ್ಲಿ ಹೇಳಲ್ಪಟ್ಟಿತು.

**ತಾತ್ಪರ್ಯ**—ಇಲ್ಲಿ ಪರಮ ಪುರುಷನಾದ ಶ್ರೀಮನ್ನಾರಾಯಣನೇ ದ್ವಯ ಮಂತ್ರದ ಪೂರ್ವಖಂಡದಲ್ಲಿ ವ್ಯಕ್ತವಾಗಿರುವ ಹಾಗೆ ಸಿದ್ಧೋಪಾಯನು **ಈತನು** ಅನಾದಿಯಾಗಿ ಸಿದ್ಧನಾಗಿರುವ, ತನ್ನ ಪ್ರಾಪ್ತಿಗೆ ತಾನೇ ಮುಖ್ಯ ಸಾಧನನಾಗಿ ಸಿದ್ಧವಾದ ಉಪಾಯ ಭೂತನಾಗಿರುವದರಿಂದ ಸಿದ್ಧೋಪಾಯನೆಂದು ಹೇಳಲ್ಪಟ್ಟಿತು. ಗೀತೆಯಲ್ಲಿ ಪ್ರತಿಯೊಂದು ಕಾರ್ಯಕ್ಕೂ ಐದು ಅಂಶಗಳು ಆವಶ್ಯಕವೆಂದು ಹೇಳುವ ಸಂದರ್ಭದಲ್ಲಿ **ದೈವಂ ಚೈವಾತ್ರ ಪಂಚಮಂ**, ಪರಮಪುರುಷನೇ ಸರ್ವಕ್ಕೂ ಮುಖ್ಯ ಕಾರಣವೆಂದು ಹೇಳುವದರಿಂದ, ಮೋಕ್ಷಪ್ರಾಪ್ತಿಗೂ ಆತನು ಮುಖ್ಯವಾದ ಉಪಾಯಭೂತನೆಂದು ಹೇಳುವದು ಸರ್ವಸಮಂಜಸವಾದ ಉಕ್ತಿಯು.

**ಈ ಉಕ್ತಿಯು ಶ್ರುತಿಪ್ರಮಾಣವನ್ನನುಸರಿಸಿದುದಾಗಿರುತ್ತದೆ:—**

"ನಾಯಮಾತ್ಮಾ ಪ್ರವಚನೇನ ಲಭ್ಯೋ ನ ಮೇಧಯಾ ನ ಬಹುನಾ ಶ್ರುತೇನ । ಯಮೇವೈಷ ವೃಣುತೇ ತೇನ ಲಭ್ಯಃ ತಸ್ಯೈಷ ಆತ್ಮಾ ವಿವೃಣುತೇ ತನೂಂಸ್ವಾಂ ॥" (ಮುಂ. ೩ ೧ ೩) ಕೇವಲ ಶ್ರವಣ ಮನನ ನಿದಿಧ್ಯಾಸನಗಳಿಂದಲೇ ಆ ಪರಮಾತ್ಮನು ಹೊಂದಲ್ಪಡುವದಿಲ್ಲವು, ಈ ಪರಮಾತ್ಮನು ಯಾವನನ್ನು ವರಿಸುವನೋ ಅವನಿಂದ ಹೊಂದಲ್ಪಡುವನು ಹಾಗೆ ಪರಮಾತ್ಮನು ಈತನನ್ನು ವರಿಸಬೇಕಾದರೆ ತನಗೆ ಯಾರು ಪ್ರಿಯತಮನೋ ಅಂಥಾವನನ್ನು ವರಿಸುವನು. ಹಾಗೆ ಪರಮಾತ್ಮನಿಗೆ ಪ್ರಿಯತಮನಾಗುವದಕ್ಕೆ ಆ ಪರಮಾತ್ಮನಲ್ಲಿ ನಿರತಿಶಯ ಭಕ್ತಿರೂಪವಾದ ಪ್ರೀತಿಯನ್ನು ಇಟ್ಟಿರಬೇಕು. ಆದುದರಿಂದ ಶ್ರಿಯಃಪತಿಯು ಪ್ರೀತಿದ್ವಾರಾ ಭಗವತ್ಪ್ರಾಪ್ತಿಯು

ಹೀಗೆ ಸಿದ್ಧೋಪಾಯನಾಗಬೇಕಾದರೆ ಸರ್ವೇಶ್ವರನಲ್ಲಿ, ಶ್ರುತಿಯು "ಯಸ್ಸರ್ವಜ್ಞಸ್ಸರ್ವವಿತ್" ಎಂದು ಹೇಳಿರುವ ಹಾಗೆ, ಸರ್ವಜ್ಞತೆ ಬೇಕು, ಸರ್ವ ವಿಷಯವನ್ನೂ ತಿಳಿಯುವ ಯೋಗ್ಯತೆ ಇದ್ದರೇನೇ ಪ್ರಪನ್ನನಾದ ಈ ಅಕಿಂಚನನ ಮನೋಭಿಪ್ರಾಯವನ್ನೂ, ಈತನು ಮಾಡುವ ವ್ಯಾಜರೂಪ ಸಾಧನನನ್ನೂ ಅರಿತವನಾಗಿ ಈತನ ಇಷ್ಟಾರ್ಥವನ್ನು ಸಲ್ಲಿಸಬಹುದು. ಸರ್ವಜ್ಞತ್ವ ಎಂಥಾದ್ದೆಂಬುದನ್ನು ವಿಶದೀಕರಿಸಿರುತ್ತಾರ **ಯುಗಪದಖಿಲಂ ಪ್ರತ್ಯಕ್ಷೇಣ ಸ್ವತಸ್ಸತತಂವಿದನ್** ಎಂಬುದರಿಂದ ತಿಳಿಸುತ್ತಾರೆ ಸಮಸ್ತವನ್ನೂ ಏಕಕಾಲದಲ್ಲೇ ತಾನೇ ಇತರ ಸಹಾಯಾಪೇಕ್ಷೆಯಿಲ್ಲದೆ ಸದಾ ಪ್ರತ್ಯಕ್ಷದಿಂದ ಸಾಕ್ಷಾತ್ಕರಿಸುವ ಶಕ್ತಿಯು ಒಂದನ್ನು ಒಂದು ಸಲವೂ ಇನ್ನೊಂದನ್ನು ಇನ್ನೊಂದು ಸಲವೂ ಸಾಕ್ಷಾತ್ಕರಿಸುವುದು ಸರ್ವಜ್ಞತೆಯಾಗುವದಿಲ್ಲವು ಸಾಕ್ಷಾತ್ಕರಿಸಿದುದು ಗತಿಸಿಹೋಗಿ ಪುನಃ ಪ್ರತ್ಯಕ್ಷವಾಗುವದೂ ಸರ್ವಜ್ಞತೆಯಲ್ಲವು ಊಹೆಯಿಂದ ತಿಳಿಯುವದಾಗಲಿ ಶಾಸ್ತ್ರಮೂಲಕವಾಗಲಿ ತಿಳಿಯುವದೂ ಸಹ ಸರ್ವಜ್ಞತೆಯಾಗುವುದಿಲ್ಲವು. ಪ್ರತ್ಯಕ್ಷೀಕರಿಸುವದೇ ಸರ್ವಜ್ಞತೆಯು ಶ್ರೀ ಯಾಮುನೇಯರು ತಾವು ರಚಿಸಿದ ನ್ಯಾಯತತ್ವದ ಮಂಗಳಶ್ಲೋಕದಲ್ಲಿ

"ಯೋವೇತ್ತಿ ಯುಗಪತ್ಸರ್ವಂ ಪ್ರತ್ಯಕ್ಷೇಣ ಸದಾಸ್ವತಃ ।
ತಂ ಪ್ರಣಮ್ಯ ಹರಿಂ ಶಾಸ್ತ್ರಂ ನ್ಯಾಯತತ್ವಂ ಪ್ರಚಕ್ಷ್ಮಹೇ॥ "

ಎಂದು ಹೇಳಿದ ಅಭಿಪ್ರಾಯವನ್ನೇ ಇಲ್ಲಿ ಉಪಪಾದಿಸಿ ಹೇಳಿರುತ್ತಾರೆ ಮುಕ್ತರಿಗೂ ಕೂಡ ಸರ್ವಜ್ಞತೆಯು ಪ್ರಾಪ್ತವಾಗುವದರಿಂದ ಅವರೂ ಭಗವಂತನ ಹಾಗೆಯೇ ಏಕಕಾಲದಲ್ಲೇ ಸದಾಸ್ವತಃ ಎಲ್ಲವನ್ನೂ ಪ್ರತ್ಯಕ್ಷೀಕರಿಸುತ್ತಾರೆ ಆದುದರಿಂದಲೇ ಮುಕ್ತರಿಗೆ ಶಾಸ್ತ್ರವು ಬೇಕಾಗಿಲ್ಲವು. ಇನ್ನು ಪರಮಾತ್ಮನಿಗೆ ಶಾಸ್ತ್ರದ ಅವಶ್ಯಕತೆಯುಂಟೇ? ಆತನೂ ಮುಕ್ತರೂ ಸಹ ನೋಡುವದು

ಎಂಬುದು ಅಪರೋಕ್ಷರೂಪಜ್ಞಾನದಿಂದ ಮಾತ್ರವೇ ನಮ್ಮ ಹಾಗೆ ಅವರುಗಳಿಗೆ ಚಕ್ಷುರಿಂದ್ರಿಯದಾವಶ್ಯಕತೆಯಿಲ್ಲವು ಆದುದರಿಂದಲೇ ಶ್ರುತಿಯು "ಅಪಾಣಿಪಾದೋ ಜವನೋಗ್ರಹೀತಾ ಪಶ್ಯತ್ಯ ಚಕ್ಷುಸ್ಸಶೃಣೋತ್ಯಕರ್ಣಃ" ಎಂದು ಕಣ್ಣಿನಾವಶ್ಯಕತೆಯಿಲ್ಲದೆ ಸಾಕ್ಷಾತ್ಕರಿಸುವನೆಂದು ಹೇಳುತ್ತದೆ. ಬದ್ಧರಾದರೋ ಹಾಗಲ್ಲವು. ಕ್ರಮೇಣ ಅನೇಕ ಜನ್ಮಗಳಲ್ಲೆಲ್ಲಾ ಆಗುವ ಸಾಕ್ಷಾತ್ಕಾರವೆಲ್ಲಾ ಒಟ್ಟುಕೂಡಿಸಿದರೆ ಸ್ವಲ್ಪ ಹೆಚ್ಚಿನ ಸಾಕ್ಷಾತ್ಕಾರ ಉಂಟಾಗಬಹುದು. ಆದರೂ ಎಲ್ಲಾದರ ಸಾಕ್ಷಾತ್ಕಾರವೂ ಉಂಟಾಗುವದಿಲ್ಲವು ಒಂದೇ ಕಾಲದಲ್ಲಂತೂ ಎಂದಿಗೂ ಉಂಟಾಗುವದಿಲ್ಲವು ಕೆಲವು ಸಂದರ್ಭಗಳಲ್ಲಿ ಪ್ರತ್ಯಕ್ಷವಾಗಿ ನೋಡಲಿಕ್ಕಾಗದೇ ಇರುವಾಗ ಅನುಮಾನ ಶಾಬ್ದಪ್ರಮಾಣಗಳಿಂದ ಗ್ರಹಿಸತಕ್ಕದ್ದಾಗಿರುತ್ತದೆ. ಆದರೆ ಅತೀಂದ್ರಿಯವಾದ ವಿಷಯವನ್ನು "ಶಾಸ್ತ್ರೈಕ್ಯವಸೇಯ" ವೆಂದು ಹೇಳಿರುವುದರಿಂದ ಶಾಸ್ತ್ರಮೂಲಕವಾಗಿಯೇ ಗ್ರಹಿಸತಕ್ಕದ್ದಾಗಿರುತ್ತದೆ. ಬದ್ಧರಿಗಾದರೋ ಒಂದು ಕಾಲದಲ್ಲಿ ಪ್ರತ್ಯಕ್ಷವಾಗಬಹುದು, ಇನ್ನೊಂದರಿಂದ ಆ ಪ್ರತ್ಯಕ್ಷಜ್ಞಾನವು ವ್ಯಾವರ್ತಿಸಬಹುದು. ಸುಷುಪ್ತಿದಶೆಯಲ್ಲಿ ಜ್ಞಾನವೇ ಇಲ್ಲದೇ ಇರುತ್ತದೆ. ಹೀಗಲ್ಲವೆಂದು ತಿಳಿಸುವದಕ್ಕಾಗಿ ಸರ್ವಜ್ಞನಿಗೆ ಯಾವಾಗಲೂ ಪ್ರತ್ಯಕ್ಷವೆಂದು ಹೇಳುವದಕ್ಕಾಗಿ ಸತತಂ ಎಂಬ ಪ್ರಯೋಗವು, ಕೆಲವು ಮಹಾಜ್ಞಾನಿಗಳಾದ ನಾರದಾದಿಗಳಿಗೆ ಸರ್ವಜ್ಞತೆಯಿರಬಹುದು. ಇದು ಯೋಗಮಾಹಾತ್ಮ್ಯಯಿಂದ ಉಂಟಾಗಿರಬಹುದು ಹಾಗೆಯೇ ವಸಿಷ್ಠ, ವ್ಯಾಸ, ಶುಕ, ವಿಶ್ವಾಮಿತ್ರಾದಿ ಋಷಿಗಳಿಗಿರಬಹುದು. ಆದರೆ ಪರಮಾತ್ಮನ ಸರ್ವಜ್ಞತೆಯೂ ಸರ್ವವಿತ್ತಾಗಿರುವ ಭಾವವೂ ಸಹ ಸ್ವತಃ ಪ್ರಾಪ್ತವಾದುದು. ಆದರೆ ನಿತ್ಯಮುಕ್ತರುಗಳಿಗೂ ಸರ್ವಜ್ಞತೆ ಇದೆಯಲ್ಲಾ ಎಂದರೆ, ಅವು ಸ್ವಾಮಿಸಂಕಲ್ಪದಿಂದುಂಟಾದವು ಅದೂ ಅಲ್ಲದೆ ಅವುಗಳು ಸತತಂ ಯಾವಾಗಲೂ ಎಂದರೆ ಬದ್ಧದೆಶೆಯಲ್ಲಿರಲಿಲ್ಲವು. ಚತುರ್ಮುಖಾದಿಗಳಿಗೆ ಯಾವಾಗಲೂ ಎಂದರೆ ತ್ರಿಕಾಲದಲ್ಲೂ ಸಾಕ್ಷಾತ್ಕಾರ ಉಂಟಲ್ಲವೇ ಎಂದರೆ ಅವರಿಗೂ ಕೂಡ ಪರಮಾತ್ಮನ ಹಾಗೆ ಅಖಿಲ ಸಾಕ್ಷಾತ್ಕಾರವಿಲ್ಲವು. ಹೀಗೆ ಪರಮಾತ್ಮ ಸಾಕ್ಷಾತ್ಕಾರವು ವಿಲಕ್ಷಣವಾದುದರಿಂದ **ಯುಗಪತ್, ಅಖಿಲಂ, ಪ್ರತ್ಯಕ್ಷೇಣ, ಸ್ವತಃ, ಸತತಂ** ಎಂಬ ಐದು ಪದಗಳೂ, ಈ ವೈಲಕ್ಷಣ್ಯವನ್ನು ತೋರಿಸಲು ಆವಶ್ಯಕವು. ಆದುದರಿಂದ ಶ್ರೀ ಯಾಮುನೇಯರೇಯಾಗಲಿ, ಶ್ರೀ ದೇಶಿಕರೇಯಾಗಲಿ, ಈ ಸರ್ವೇಶ್ವರ ಸರ್ವಜ್ಞತೆಯ ಲಕ್ಷಣವನ್ನು ಬೋಧಿಸಲು ಈ ಐದು ಪದಗಳೂ ಆವಶ್ಯಕವೆಂದು ತೋರ್ಪಡಿಸಿರುತ್ತಾರೆ. ಹೀಗೆ ಶ್ರಿಯಃಪತಿಯು ಸರ್ವಜ್ಞನಾದುದರಿಂದಲೇ ತನಗೆ ತುಂಬಾ ಬೇಕಾದ ಬದ್ಧಾತ್ಮರೆಲ್ಲಾ ದುಃಖಪೀಡಿತರಾಗಿರುವುದನ್ನೂ, ಯಾರು ಆ ದುಃಖ

ದಿಂದ ತಪ್ಪಿಸಿಕೊಳ್ಳಲು ಯತ್ನ ಮಾಡುತ್ತಿರುವರು, ಯಾರು ಪರಿತಾಪಪಡುತ್ತಿರುವರು, ಯಾರು ಯಾರು ಇವುಗಳಿಂದ ವಿಮುಖರಾಗಿರುವವರು, ಎಂಬುದನ್ನೆಲ್ಲಾ ಅರಿತು ಅವರವರ ಸುಕೃತ ದುಷ್ಕೃತಗಳಿಗನುಸಾರವಾಗಿ ಅನುಗ್ರಹ ನಿಗ್ರಹಗಳನ್ನು ಮಾಡುವನು.

ಪ್ರಪನ್ನನ ವಿಷಯದಲ್ಲಿ ಅನುಗ್ರಹಿಸಲು ಸರ್ವಜ್ಞತೆ ಮಾತ್ರವೇ ಅವಶ್ಯಕವಲ್ಲದೆ, ಸರ್ವಶಕ್ತತೆಯೂ ಬೇಕು. ಅವನಿಗೇನಾದರೂ ಆರ್ತಿಯುಂಟಾದರೆ ತಪ್ಪಿಸುವ ಸಾಮರ್ಥ್ಯವಿರಬೇಕು. ಪಾಂಡವರಿಗೂ, ದ್ರೌಪದಿಗೂ, ಗಜೇಂದ್ರನಿಗೂ ಇಂದ್ರನಿಗೂ, ಸುಗ್ರೀವನಿಗೂ, ವಿಭೀಷಣನಿಗೂ, ವಿಶ್ವಾಮಿತ್ರರಿಗೂ, ದಂಡಕಾರಣ್ಯ ಋಷಿಗಳಿಗೂ ಹೀಗೆಯೇ ಇತರ ಭಕ್ತರುಗಳಿಗೂ ಉಂಟಾದ ಆರ್ತಿಯನ್ನು ತಪ್ಪಿಸುವ ಸಾಮರ್ಥ್ಯವಿರಬೇಕು ಇದೂ ಅಲ್ಲದೆ ಶರಣಾಗತನಾದವರಿಗೆ ಬೇಡಿದುದನ್ನೆಲ್ಲಾ ಕೊಡುವ ಸಾಮರ್ಥ್ಯವಿರಬೇಕು. ವಿಭೀಷಣನಿಗೆ ಲಂಕಾರಾಜ್ಯವನ್ನು ಕೊಡುತ್ತೇನೆಂದು ಪ್ರತಿಜ್ಞೆಯನ್ನು ಮಾಡಿಬಿಟ್ಟು ನಡೆಸಿಕೊಡದಿರಬಹುದೇ? ಅದನ್ನು ಹೇಗಾದರೂ ನಡೆಸಿಬಿಟ್ಟು ತಾನು ಕೃತಕೃತ್ಯನಾಗಿ ವಿಜ್ವರನಾದವನಾಗಿ ಭಾವಿಸುವನು. ಅಂತಹ ಅಘಟಿತಘಟನಾರೂಪ ಸರ್ವಶಕ್ತಿಯುಳ್ಳವನೆಂದು ತಿಳಿಸುವದಕ್ಕಾಗಿ **ಅಶಕ್ಯವಿವರ್ಜಿತಃ** ಎಂದು ಪ್ರಯೋಗಿಸಿರುತ್ತಾರೆ. ಪ್ರಪನ್ನನಿಗೆ ಬೇಕಾದುದು ಪರಮಪದಪ್ರಾಪ್ತಿಯು ಸಿದ್ಧೋಪಾಯನಾಗಿ ಅದನ್ನುಂಟುಮಾಡುವ ಶಕ್ತಿಯು ಆತನಿಗಿಲ್ಲವಾದರೆ, ಆತನನ್ನು ಯಾರುತಾನೇ ಆಶ್ರಯಿಸುವರು. ದಾನ ಮಾಡಲು ಶಕ್ತಿ ಇಲ್ಲದ ದರಿದ್ರನನ್ನು ಯಾಚಕನು ಆಶ್ರಯಿಸುವುದಿಲ್ಲವಷ್ಟೇ

ಆಗಲಿ, ಸಿದ್ಧೋಪಾಯನಾಗಲು ಸ್ವಾಮಿಯಲ್ಲಿ ಸರ್ವಜ್ಞತ್ವವೂ ಸರ್ವಶಕ್ತಿತ್ವವೂ ಉಂಟೆಂದೇನೋ ಒಪ್ಪತಕ್ಕದ್ದೇ ಆದರೂ ಈ ಪ್ರಪನ್ನನಿಗೆ ಹಿತವಾದುದು ಯಾವುದು ಎಂಬುದನ್ನರಿತು ಆತನಿಗೆ ದಿವ್ಯವೈಕುಂಠ ಮಾರ್ಗದರ್ಶಿಯಾಗಿರಬೇಕೆಂಬುದೇನು ? ಒಬ್ಬನಲ್ಲಿ ತುಂಬಾ ದ್ರವ್ಯವಿದ್ದು ಮಹಾ ಧನಿಕನೆಂಬ ಪ್ರಖ್ಯಾತಿ ಇರಬಹುದು ಅದರಿಂದ ಇತರರಿಗೆ ಬಂದ ಭಾಗ್ಯವೇನು? ಎಂದರೆ ಸರ್ವೇಶ್ವರನು ಮಹಾ ಕರುಣಾಶಾಲಿಯು ಯಾವಾಗ ಈ ಬಂಧದಲ್ಲಿದ್ದು ಕ್ಲೇಶಪಡುತ್ತಿದ್ದವನು, ಸರ್ವೇಶ್ವರನೇ ತನಗೆ ಬಂಧವಿಮೋಚಕನೆಂದು ಆಶ್ರಯಿಸುವನೋ, ಆಗ ಆ ಮಹಾನುಭಾವನು ಕರುಣಾಮಹೋದಧಿಯಾದುದರಿಂದ, ತಾನು ತನ್ನ ಉದಾರ ಭಾವದಿಂದ ಈತನು ಯಾವಾಗ ಆಶ್ರಯಿಸುವನೋ ಎಂಬ ಅವಸರ ಪ್ರತೀಕ್ಷೆಯನ್ನು ಮಾಡುತ್ತಿರುವವನಾಗಿ ಒಡನೇ ಸಿದ್ಧೋಪಾಯನಾಗಿ ಬಂದು ಪರಮಪದವನ್ನು ಸೇರುವಹಾಗೆ ಮಾಡುವನು. ಈ ಅಭಿಪ್ರಾಯವನ್ನು ತಿಳಿಸುವದಕ್ಕಾಗಿಯೇ **ದಯಾದಿವ್ಯೋದನ್ವಾನ್** ಸರ್ವೇಶ್ವರನು ಎಂದು ಹೇಳಿರುತ್ತಾರೆ

ಅನುಗ್ರಹಕ್ಕೆ ದಯಾಸಾಮರ್ಥ್ಯವೆರಡೂ ಅವಶ್ಯಕವು; ದಯೆಯಿಲ್ಲದ ಸಾಮರ್ಥ್ಯವೂ, ಸಾಮರ್ಥ್ಯವಿಲ್ಲದ ದಯೆಯೂ, ಔದಾರ್ಯವಿಲ್ಲದ ಸೌಭಾಗ್ಯದಂತೆಯೂ, ದ್ರವ್ಯಸಹಾಯವಿಲ್ಲದ ಕರುಣೆಯಂತೆಯೂ, ಕಾರ್ಯಕಾರಿಯಾಗುವದಿಲ್ಲವು.

ಹೀಗೆ ಸರ್ವಜ್ಞನಾಗಿಯೂ ಸರ್ವಶಕ್ತನಾಗಿಯೂ ಪರಮಕಾರುಣಿಕನಾಗಿಯೂ ಆಶ್ರಯೋಪಯುಕ್ತ ಮಹಾಕಲ್ಯಾಣಗುಣಗಳಿಂದ ಯುಕ್ತನಾಗಿಯೂ ಇರುವ ಪುಹನೀಯನಿಗೆ ಈ ರೀತಿಯಲ್ಲಿ ಪ್ರಪನ್ನನಿಗೆ ಸಿದ್ಧೋಪಾಯನಾಗಿ ಅನುಗ್ರಹಿಸಬೇಕೆಂಬ ಸದುದ್ದೇಶದಲ್ಲಿ,ಸಹಧರ್ಮಚಾರಿಣಿಯಾಗಿ, ಅನುಗ್ರಹಮಯಳಾಗಿ,"ಕಾರ್ಯಂ ಕರುಣಮಾರ್ಯೇಣ ನಕಶ್ಚಿನ್ನಾಪರಾಧ್ಯತಿ" ಎಂದು ಸಮಾಧಾನವನ್ನು ಆಂಜನೇಯನಿಗೆ ಹೇಳಿದ. ಅಜ್ಞಾತನಿಗ್ರಹಳಾದುದರಿಂದ "ದೇವಜುಷ್ಟಾಮುದಾರಾಂ" ಎಂದು ಶ್ರುತಿಯಲ್ಲಿ ಕೊಂಡಾಡಲ್ಪಟ್ಟವಳಾಗಿರುವ, ಶ್ರೀಮಹಾಲಕ್ಷ್ಮಿಯು ಸಹಾಯಕಳೆಂದು ತಿಳಿಸುವದಕ್ಕಾಗಿ ಜಲಧಿಸುತಯಾಸಾರ್ಧಂ ಎಂದು ಪ್ರಯೋಗಿಸಿರುತ್ತಾರೆ. ಶ್ರೀಮಹಾಲಕ್ಷ್ಮಿಯು ಯಾವಾಗಲೂ ನಿತ್ಯಾನಪಾಯನಿಯಾಗಿ ಸರ್ವೇಶ್ವರನ ಸರ್ವವಿಧ ದಿವ್ಯವ್ಯಾಪಾರಗಳಲ್ಲೆಲ್ಲಾ ಸಹಾಯಮಾಡುವಂಥಾವಳು. ಅವತಾರ ಕಾಲಗಳಲ್ಲೂ "ರಾಘವತ್ವೇ ಭವೇತ್ಸೀತಾ" ಎಂದು ಹೇಳಿರುವ ಹಾಗೆ ಸ್ವಾಮಿಯೊಂದಿಗೇ ಇದ್ದುಕೊಂಡು ಆತನಿಗೆ ಸಹಾಯಕಳು. ಆಶ್ರಿತ ರಕ್ಷಣೋಪಾಯದಲ್ಲಿ ತನ್ನ ವಾತ್ಸಲ್ಯಾತಿಶಯದಿಂದುಂಟಾದ ಪುರುಷಕಾರತ್ವಮಾತ್ರವೇ ಅಲ್ಲದೆ ಸರ್ವೇಶ್ವರನ ಹಾಗೆಯೇ ಉಪಾಯ ಭೂತಳು. ಜಲಧಿಯು ರತ್ನಾಕರವು. ಅದರಲ್ಲಿ ಐಶ್ವರ್ಯಕ್ಕನುಗುಣವಾದ ಕಲ್ಪವೃಕ್ಷ ಕಾಮಧೇನುಗಳೂ ಉಂಟು. ಇವುಗಳಿಗೂ ಉತ್ಕೃಷ್ಟವಾದ ಅಮೃತವೂ ಉಂಟು. ಹಾಗೆಯೇ ಶ್ರೀಮಹಾಲಕ್ಷ್ಮಿಯು ಐಹಿಕೋಪಭೋಗಗಳನ್ನೂ ಪಾರಲೌಕಿಕಗಳನ್ನೂ ಕಲ್ಪಿಸುವಂಥಾವಳು ಆದುದರಿಂದ ಲಕ್ಷ್ಮೀವಿಶಿಷ್ಟನಾಗಿಯೇ ಪ್ರಪನ್ನರಿಗೆ ಉಪಾಯಭೂತನೆಂಬುದು ಏರ್ಪಟ್ಟಿತು "ಲಕ್ಷ್ಮ್ಯಾ ಸಹ ಹೃಷೀಕೇಶೋ ದೇವ್ಯಾ ಕಾರುಣ್ಯರೂಪಯಾ। ರಕ್ಷಕಸ್ಸರ್ವಸಿದ್ಧಾನ್ತೇ ವೇದಾನ್ತೇಷುಚ ಗೀಯತೇ॥" ಎಂಬ ಲಕ್ಷ್ಮೀತಂತ್ರ ಪ್ರಮಾಣವು ಈ ಅಭಿಪ್ರಾಯವನ್ನೇ ಉದ್ಘೋಷಿಸುತ್ತದೆ ಶ್ರೀಮನ್ನಾರಾಯಣನು ದೇವಃ ಲೀಲಾಸಕ್ತನು, ಲಕ್ಷ್ಮಿಯು ದೇವಿಯು, ಆತಿಯು ಹಾಗೆಯೇ ಲೀಲಾಸಕ್ತಳು. ಹೃಷೀಕೇಶನು ರಕ್ಷಕನಾಗಬೇಕಾದರೆ, ಇಂತಹ ಲೀಲಾಪರಳಾಗಿ ಕರುಣಾಮಯಳಾದ ಲಕ್ಷ್ಮಿಯೊಂದಿಗಿದ್ದುಕೊಂಡೇ ಉಪಾಯಭೂತನಾಗಿ ಈ ಚೇತನನಿಗೆ ರಕ್ಷಕನೆಂದು ಎಲ್ಲಾ ಶಾಸ್ತ್ರಗಳಲ್ಲೂ ಹೇಳಲ್ಪಟ್ಟಿರುತ್ತದೆ "ಸ ಏಕಾಕೀ ನರಮೇತ" ಎಂದು ಹೇಳಿರುವ ಹಾಗೆ ನಾರಾಯಣನೊಬ್ಬನೇ ಲಕ್ಷ್ಮಿಯೊಂದಿಗಿಲ್ಲದೆ ಜಗದ್ವ್ಯಾಪಾರಗಳನ್ನೆಸಗುವದು ಲೀಲಾರಸವೆಂದಿಗೂ ಆಗಲಾರದು "ಲೋಕವತ್ತು

ಲೀಲಾಕೈವಲ್ಯಂ" ಎಂಬ ಸೂತ್ರದಲ್ಲಿ ಉಪಪಾದಿಸಿರುವ ಹಾಗೆ ತನ್ನ ಪತ್ನಿಯಾದ ಲಕ್ಷ್ಮಿಸಹ ಎದ್ದು ಜಗದ್ವ್ಯಾಪಾರಗಳನ್ನು ನಡೆಸಿದರೇನೇ ಲೀಲಾರಸವು ಉಪಪನ್ನತರವು ಇದನ್ನು ಶ್ರೀ ದೇಶಿಕರವರು ಶ್ರೀ ಸ್ತುತಿಯ "ಪಶ್ಯಂತೀಷು" ಎಂಬ ಶ್ಲೋಕದಲ್ಲಿ ನಿಪುಣತರವಾಗಿ ಉಪಪಾದನೆ ಮಾಡಿರುತ್ತಾರೆ. ಇದರಭಿಪ್ರಾಯಕ್ಕೆ ದಾಸನು ಬರೆದ ಅರ್ಥ ತಾತ್ಪರ್ಯದ ೫೪—೬೦ ಪುಟಗಳನ್ನು ಪರಾಂಬರಿಸಿ ಈ ಜಗದ್ವ್ಯಾಪಾರಗಳಿಂದ ಸೃಷ್ಟಿಸ್ಥಿತಿ ಪಾಲನ ನಿಯಮನ ಸಂಹಾರಾದಿ ಕಾರ್ಯಗಳಲ್ಲೆಲ್ಲಾ ನಾರಾಯಣನೊಂದಿಗೆ ಲಕ್ಷ್ಮಿಗೂ ಅನ್ವಯವಿರುವದರಿಂದ (ಶ್ರೀಗುಣ ೨—೪ ಶ್ಲೋಕಗಳನ್ನು ನೋಡಿ) ಸಿದ್ಧೋಪಾಯನಾಗಿ ಈ ಲೋಕ ದಂಪತಿಗಳಿರುವದು ಶ್ರುತ್ಯುಕ್ತವಾಟುದರಿಂದ, "ಜಲಧಿಸುತಯಾ ಸಾರ್ಧಂ ಜಗತ್ಪರಿಪಾಲಯ" ಎಂದು ಪ್ರಯೋಗಿಸಿರುತ್ತಾರೆ

ಹೀಗೆ ಶ್ರೀಮನ್ನಾರಾಯಣನೇ ಸಿದ್ಧೋಪಾಯನೆಂಬುದು ಶ್ರುತಿಯಲ್ಲಿ ಅನೇಕ ಕಡೆ ಹೇಳಿರುತ್ತದೆ ಶ್ರುತಿಯಲ್ಲಿ ಅಲ್ಲೆಲ್ಲಾ ಲಕ್ಷ್ಮೀವಿಶಿಷ್ಟತೆಯು ಕಂಠೋಕ್ತವಾಗಿ ಹೇಳದಿದ್ದರೂ ಯಾವಾಗಲೂ ನಿತ್ಯಾನಪಾಯಿನಿಯಾದ ಸಹಧರ್ಮಚಾರಿಣಿಯಾದ ಪತ್ನಿಯೊಂದಿಗೆ ತನ್ನ ದಿವ್ಯ ಚೇಷ್ಟಿತಗಳನ್ನು ನಡೆಸುವದರಿಂದ "ನ ಪೃಥಗಭಿಧತ್ತೇ ಶ್ರುತಿರಪಿ" ಶ್ರುತಿಯು ಅವಳನ್ನೂ ಕೂಡ ಬೇರೆಯಾಗಿ ಹೇಳಲಿಲ್ಲವು ಶ್ರುತಿಯು ವಶೀಕರಣೋಪಾಯಗಳನ್ನುಚ್ಚರಿಸುವಾಗ ಎಲ್ಲಾದಕ್ಕಿಂತಲೂ ಪರಮಪುರುಷನನ್ನು ವಶೀಕರಿಸುವದೇ ಸರ್ವೋತ್ಕೃಷ್ಟವಾದ ಉಪಾಯವೆಂದು ತಿಳಿಸುವ ಸಂದರ್ಭದಲ್ಲಿ (೧) "ಮಹತಃ ಪರಮವ್ಯಕ್ತಮವ್ಯಕ್ತಾತ್ಪುರುಷಃ ಪರಃ । ಪುರುಷಾನ್ನ ಪರಂ ಕಿಂಚಿತ್ಸಾ ಕಾಷ್ಠಾ ಸಾ ಪರಾ ಗತಿಃ ॥" ಎಂದು ಹೇಳಿರುತ್ತದೆ. ಹೀಗೆ ಉಪಾಯಭೂತನಾದ ಸರ್ವೇಶ್ವರನು ನಮ್ಮ ಹೃದಯದಲ್ಲೇ ಇರುತ್ತಾನೆಂದು ಗೀತೆಯಲ್ಲಿ (೨) "ಈಶ್ವರಸ್ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ । ಭ್ರಾಮಯನ್ ಸರ್ವಭೂತಾನಿ ಯಂತ್ರಾರೂಢಾನಿ ಮಾಯಯಾ ॥" ಎಂದು ಹೇಳಿರುವ್ಪದರಿಂದ ಪರಮಾತ್ಮನೇ ಸಿದ್ಧೋಪಾಯನೆಂಬುದು ಸ್ಥಾಪಿತವಾಯಿತು. ಇದನ್ನು ತಿಳಿಸುವದಕ್ಕಾಗಿಯೇ ಈ ಮೇಲಿನ ಶ್ರುತಿಯ ಪದಗಳಾದ ಪುರುಷಃ ಪರಃ ಎಂಬುವುಗಳನ್ನನುಸರಿಸಿ ಪರಮಪುರುಷಸ್ಸಿದ್ಧೋಪಾಯಃ ಎಂದು ಹೇಳಿರುತ್ತಾರೆ. ಆ ಸಿದ್ಧೋಪಾಯನಾದ ಪರಮಪುರುಷನನ್ನು ನಾವು ಕೋರಿದ ಫಲವನ್ನು ಕೊಡುವಹಾಗೆ ವಶೀಕರಿಸಿಕೊಳ್ಳಬೇಕಾದರೆ ಒಂದು ವ್ಯಾಜವು ಬೇಕು ಅದನ್ನೇ ಗೀತೆಯಲ್ಲಿ ಮುಂದಿನ

(೧) ಕಠ. ೧. ೩ ೧೧. (೨) ಗೀ. ೧೮. ೬೧ ೬೨

## ಅರ್ಥಾನುಶಾಸನಭಾಗಸ್ಯಾನುಸಂಧಾನಂ

ಅನಾದಿಕಾಲಮ್ ಸಂಸರಿತ್ತುಪ್ಪೋನ್ದ ಕ್ಷೇತ್ರಜ್ಞರ್ ಅವಸರ ಪ್ರತೀಕ್ಷೈಯಾನ ಭಗವತ್ಕೃಪೈಯಾಲೇ ಪಿರಿನ್ದು ಸಮೀಚೀನ ಶಾಸ್ತ್ರಮುಖ

---

ಶ್ಲೋಕವಾದ "ತಮೇವ ಶರಣಂ ಗಚ್ಛ ಸರ್ವಭಾವೇನ ಭಾರತ" ಎಂಬದಾಗಿ ಆತನನ್ನೇ ಶರಣವನ್ನು ಹೊಂದು ಎಂದು ಹೇಳಿರುವದರಿಂದಲೂ, ಅದನ್ನೇ ಶ್ರೀ ಭಾಷ್ಯಕಾರರೂ "ತಸ್ಯಚ ವಶೀಕರಣಂ ತಚ್ಛರಣಾಗತಿರೇವ" ಎಂದು (ಬ್ರ ಸೂ. ೧. ೪. ೧.) ಉಪಪಾದಿಸಿರುವದರಿಂದ ಶರಣಾಗತಿರೂಪ ಒಂದು ವ್ಯಾಜಮಾತ್ರ ಬೇಕೆಂಬುವದು ತೋರಿಬರುತ್ತದೆ. ಈ ಅಭಿಪ್ರಾಯವನ್ನೇ "ಪ್ರತೀಷ್ಟ ಭರಸ್ಸತಾಂ" ಎಂಬುವದರ ಮೂಲಕ ವ್ಯಕ್ತಪಡಿಸಿರುತ್ತಾರೆ ಪ್ರಪನ್ನರಿಗೆ ಸತಾಂ ಎಂಬ ಪ್ರಯೋಗವು ಏಕೆಂದರೆ ಅಸ್ತಿಬ್ರಹ್ಮೇತಿಚೇದ್ವೇದ ಸಂತಮೇನಂತತೋ ವಿದುಃ ಎಂಬ ಶ್ರುತ್ಯನುಸಾರವಾಗಿ ಬ್ರಹ್ಮವಿತ್ತುಗಳಾದುದರಿಂದ ಹಾಗೆ ಪ್ರಯೋಗವು ಅಂಥಾವರ ಭರವನ್ನು ಅಙ್ಗೀಕರಿಸುತ್ತಾನೆಂಬ ಭರವಸೆ ಹೇಗೆ ಎಂದರೆ ಹಾಗೆ ಅಂಗೀಕರಿಸುವದಾಗಿ ಬಹಳ ಸಲ ಪ್ರತಿಜ್ಞೆಮಾಡಿರುತ್ತಾನೆ. "ಸರ್ವಧರ್ಮಾನ್ ಪರಿತ್ಯಜ್ಯಮಾಮೇಕಂಶರಣಂವ್ರಜ" "ಅಪ್ಯಹಂ ಜೀವಿತಂಜಹ್ಯಾಂತ್ವಾಂ ವಾಸೀತೇಸಲಕ್ಷ್ಮಣಾಂ। ನಹಿಪ್ರತಿಜ್ಞಾಂ ಸಂಶ್ರುತ್ಯಬ್ರಾಹ್ಮಣೇಭ್ಯೋವಿಶೇಷತಃ" "ಅಭಯಂಸರ್ವಭೂತೇಭ್ಯೋದದಾಮ್ಯೇತದ್ವ್ರತಂಮಮ" ಇತ್ಯಾದಿ ಪ್ರಮಾಣಗಳು ಆತನ ಸುಸಙ್ಕಲ್ಪವನ್ನು ಸ್ಥಾಪಿಸುತ್ತವೆ.

ಆದುದರಿಂದ ಸರ್ವೇಶ್ವರನು ಸರ್ವಜ್ಞನಾಗಿ ಸರ್ವಶಕ್ತನಾಗಿ ಕಾರುಣ್ಯಮಹೋದಧಿಯಾಗಿ ಶ್ರಿಯಃಪತಿಯಾಗಿರುವದರಿಂದಲೇ ಪ್ರಪನ್ನರಿಗೆಲ್ಲಾ ಆತನು ಸಿದ್ಧೋಪಾಯನಾಗಿರಲು ಸಮರ್ಥನು ಇಂತಹ ಸರ್ವೇಶ್ವರನ ವಿಶೇಷಣಗಳನ್ನುದ್ದಿಶ್ಯಮಾಡಿಕೊಂಡು ಅನೇಕ ಪೂರ್ವಪಕ್ಷಗಳು ಉಂಟಾಗುವದರಿಂದ ಅವುಗಳನ್ನೆಲ್ಲಾ ಈ ಅಧಿಕಾರವಲ್ಲಿ ನಿರಾಕರಿಸಿ ಸಮಾಧಾನಗಳನ್ನು ಹೇಳುತ್ತಾರೆ.

ಮೇಲಿನ ಸಂಗ್ರಹ ಶ್ಲೋಕದಲ್ಲಿ, "ಇಷ್ಟಂ ಹಿ ವಿದುಷಾಂ ಲೋಕೇ ಸಮಾಸವ್ಯಾಸಧಾರಣಮ್" ಎಂಬುವ ನ್ಯಾಯ ಪ್ರಕಾರ ಸಙ್ಗ್ರಹಿಸಿದುದನ್ನು ಈ ಅಧಿಕಾರದಲ್ಲಿ ವಿಸ್ತರಿಸುವವರಾಗಿ ಹಿಂದೆ ಹೇಳಿದ ಇಪ್ಪತ್ತೆರಡು ಅಧಿಕಾರಾರ್ಥಗಳನ್ನು "ಸಂದೃಷ್ಟಸ್ಸಾರವಾಗ್ಮಿತ್" ಎಂಬ ಶ್ಲೋಕದಲ್ಲಿ ಹೇಳಿದಹಾಗೆ ಒಂದು ವಾಕ್ಯದ ಮೂಲಕ ಸಂಗ್ರಹವಾಗಿ ಅನುವಾದ ಮಾಡುತ್ತಾರೆ:—

ತ್ತಾಲೆ ತತ್ವಹಿತ ಪುರುಷಾರ್ಥ (ಙ್ಗಳಿಲ್) ವಿಶೇಷಙ್ಗಳೈತ್ತೆಳಿನ್ದು, ಮುಮುಕ್ಷುವಾಯ್, ಸ್ವಾಧಿಕಾರಾನುರೂಪಮಾ, ಯಿರುಪ್ಪದೋರು ಉಪಾಯ ವಿಶೇಷತ್ತೈ ಪರಿಗ್ರಹಿತ್ತು, ಕೃತಕೃತ್ಯನಾಯ್, ತನ್ನಿಷ್ಠೈಯ್ಯೆತೆಳಿನ್ದು, ಅದಕ್ಕೆ

---

## ಅರ್ಥಾನುಶಾಸನ ಭಾಗದ ಅನುಸಂಧಾನವು.

**ಅನಾದಿಕಾಲಮ್** – ಯಾವಾಗಲಿಂದ ಎಂದು ಹೇಳಲಸಾಧ್ಯವಾದುದರಿಂದ ಅನಾದಿಕಾಲ ಎಂದು ಹೇಳಿಸಿಕೊಳ್ಳುವ ಕಾಲದಿಂದ, **ಸಂಸರಿತ್ತುಪ್ಪೋನ್ನ** – ಸಂಸಾರಬಂಧಕ್ಕೆ ಸಿಕ್ಕಿದ, **ಕ್ಷೇತ್ರಜ್ಞನ್**-ದೇಹಯುಕ್ತನಾದ ಆತ್ಮನು, **ಅವಸರ ಪ್ರತೀಕ್ಷೈಯಾನ ಭಗವತ್ಕೃಪೈಯಾಲೆ** ಜೀವಾತ್ಮನು ತನ್ನನ್ನು ಯಾವಾಗ ಆಶ್ರಯಿಸುವನೋ ಎಂದು, ಅಂತಹ ಸಮಯವನ್ನು ನಿರೀಕ್ಷಿಸುವ, ಸ್ವಾಮಿ ಕೃಪಾ ಮೂಲಕವಾಗಿ, **ಪಿರಿನ್ದು** – ತನಗೆ ಬಂಧಕವಾಗಿದ್ದ ಈ ಸಂಸಾರದಿಂದ ಬಿಡುಗಡೆಯನ್ನು ಹೊಂದಿದವನಾಗಿ, ಇದರಿಂದ ಉಪೋದ್ಘಾತಾಧಿಕಾರಾರ್ಥವು ತಿಳಿಸಲ್ಪಟ್ಟಿತು, **ಸಮೀಚೀನ ಶಾಸ್ತ್ರಮುಖತ್ತಾಲೆ** ಸರ್ವೋತ್ಕೃಷ್ಟ ಶಾಸ್ತ್ರದ ಮೂಲಕವಾಗಿ ಇದರಿಂದ ಸಮೀಚೀನವಾದ ದು ಸಾರತಮವಾದ ಶ್ರೀಮದ್ರಹಸ್ಯತ್ರಯವಾಗಿ ಆ ಮಂತ್ರಗಳ ಜ್ಞಾನವು ಅತ್ಯಾವಶ್ಯಕವೆಂಬ ಸಾರನಿಷ್ಕರ್ಷಾಭಿಪ್ರಾಯವು ಬೋಧಿಸಲ್ಪಟ್ಟಿತು. **ತತ್ವಹಿತ ಪುರುಷಾರ್ಥ ವಿಶೇಷಙ್ಗಳೈತ್ತೆಳಿನ್ದು** – ಈ ಮೂರು ರಹಸ್ಯಗಳಲ್ಲೂ ಮುಖ್ಯವಾಗಿ ತಿಳಿಯತಕ್ಕದ್ದು, ತತ್ವವ್ಯಾವುದು, ಹಿತವಾದ ಉಪಾಯಾನುಷ್ಠಾನವು ಯಾವುದು, ಅದರಿಂದುಂಟಾಗುವ ಪುರುಷಾರ್ಥಸ್ವರೂಪವೆಂಥಾದ್ದು, ಈ ಮೂರನ್ನೂ ಮುಖ್ಯವಾಗಿ ತಿಳಿದು; ಪ್ರಧಾನವಾಗಿ ತಿಳಿಯತಕ್ಕದ್ದಾದುದರಿಂದ ವಿಶೇಷಗಳೆಂದು ಇಲ್ಲಿ ಹೇಳಲ್ಪಟ್ಟಿರುತ್ತದೆ, ಈ ಮೂರೂ ಅರ್ಥಪಂಚಕಾಧಿಕಾರದಲ್ಲಿ ಉಪಪಾದಿತವು; ತತ್ವಸ್ವರೂಪವು ತತ್ವತ್ರಯಾಧಿಕಾರದಲ್ಲೂ ಪರದೇವತಾಪಾರಮಾರ್ಥ್ಯಾಧಿಕಾರದಲ್ಲೂ ಸಂಗ್ರಹೀತವು ಹಿತವು ಉಪಾಯವಿಭಾಗಾಧಿಕಾರದಲ್ಲಿ ಉಪಪಾದಿತವು. **ಪುರುಷಾರ್ಥವು** ಪರಿಪೂರ್ಣಬ್ರಹ್ಮಾನುಭವಾಧಿಕಾರದಲ್ಲಿ ಸುವ್ಯಕ್ತವು; **ಮುಮುಕ್ಷುವಾಯ್**-ಮೋಕ್ಷಾರ್ಥಿಯಾಗಿ, ಮುಮುಕ್ಷುತ್ವಾಧಿಕಾರಾಭಿಪ್ರಾಯವು ಜ್ಞಾಪಿಸಲ್ಪಟ್ಟಿತು ; **ಸ್ವಾಧಿಕಾರಾನುರೂಪಮಾಯ್**-ತನ್ನ ಅಧಿಕಾರಕ್ಕೆ ಅನುಗುಣವಾದ, ಅಧಿಕಾರವಿಭಾಗಾದಿಕಾರಾರ್ಥವೂ ಪ್ರಪತ್ತಿಯೋಗ್ಯಾಧಿಕಾರವೂ ಸಹ ದ್ಯೋತಿತವು, **ಇರುಪ್ಪದು** - ಇರುವಂಥಾ, **ಒರು ಉಪಾಯ ವಿಶೇಷತ್ತೈ ಪರಿಗ್ರಹಿತ್ತು**-ಒಂದು ಉಪಾಯ

**ನುರೂಪಮಾಗವಿರುಙ್ಗಿನ್ರನಾಳ್ ಯಥಾಶಾಸ್ತ್ರಮ್, ನಿರ (ಪಾಯಮಾಗ) ಪರಾಧಮಾಗೆಪ್ಪಣ್ಣುಮ್ ಕೈಙ್ಕರ್ಯರೂಪ ಪುರುಷಾರ್ಥಮಿರುಕ್ಕುಮ್ ಪಡಿಯುಮ್, ಶರೀರಪಾತಾನಂತರಮ್ ಅರ್ಚಿರಾದಿಗತಿಯಾಲೇ ಅಪ್ರಾಕೃತ ದೇಶವಿಶೇಷತ್ತಿಲೇ ಶೆನ್ರಾಲ್ ಇವನುಕ್ಕು ಅನವಚ್ಛಿನ್ನ ಭಗವದನು**

---

ವಿಶೇಷವನ್ನು ಅಙ್ಗೀಕರಿಸಿ, ಪರಿಕರವಿಭಾಗಾಧಿಕಾರ ಮತ್ತು ಸಾಙ್ಗ ಪ್ರಪದನಾಧಿಕಾರಗಳ ಅರ್ಥವು ಉಪದೇಶಿಸಲ್ಪಟ್ಟವು, **ಕೃತಕೃತ್ಯನಾಗಿ** - ಯಾವುದನ್ನು ಮಾಡಬೇಕೋ ಅದನ್ನನುಷ್ಠಿಸಿದವನಾಗಿ, ಇದು ಕೃತಕೃತ್ಯಾಧಿಕಾರಾರ್ಥವು, **ತನ್ನಿಷ್ಠೈಯೈತ್ತೆಳಿನ್ದು** - ಸ್ವನಿಷ್ಠಾಭಿಜ್ಞಾನವನ್ನು ಹೊಂದಿದವನಾಗಿ, ಇದು ಸ್ವನಿಷ್ಠಾಭಿಜ್ಞಾನಾಧಿಕಾರಾರ್ಥವು, **ಅದಕ್ಕನುರೂಪಮಾಕವಿರುಙ್ಗಿನ್ರನಾಳ್**- ಆ ನಿಷ್ಠೆಗೆ ಯೋಗ್ಯವಾಗಿ ಇಲ್ಲಿರುವಕಾಲದಲ್ಲೂ, ಉತ್ತರಕೃತ್ಯಾಧಿಕಾರ ಪುರುಷಾರ್ಥಕಾಷ್ಠಾಧಿಕಾರಗಳ ಭಾವವು ಸೂಚಿಸಲ್ಪಟ್ಟವು, **ಇರುನ್ದನಾಳ್** ಎಂಬುವದರಿಂದ ಸ್ಥಾನವಿಶೇಷಾಧಿಕಾರದ ಅಭಿಪ್ರಾಯವನ್ನೂ ಗ್ರಹಿಸಬಹುದು, **ಯಥಾಶಾಸ್ತ್ರಮ್** - ಶಾಸ್ತ್ರಾನುಗುಣವಾಗಿ, ಶಾಸ್ತ್ರೀಯನಿಯಮನಾಧಿಕಾರಾಭಿಪ್ರಾಯವು ಹೇಳಲ್ಪಟ್ಟಿತು, **ನಿರಪರಾಧಮಾಗಪ್ಪಣ್ಣುಮ್** - ಬುದ್ಧಿಪೂರ್ವಕವಾದ ಅಪರಾಧಗಳ ಸಂಬಂಧವೇನೂ ಇಲ್ಲದಹಾಗೆ ಮಾಡುವ ಇದು ಅಪರಾಧಪರಿಹಾರಾಧಿಕಾರಾರ್ಥವು; **ಕೈಙ್ಕರ್ಯರೂಪ ಪುರುಷಾರ್ಥಂ** ಭಗವತ್ಕೈಙ್ಕರ್ಯರೂಪವಾದ ಪುರುಷಾರ್ಥವು, **ಇರುಕ್ಕುಮ್ ಪಡಿಯುಮ್** - ಇರುವ ಸ್ಥಿತಿಯನ್ನೂ, ಎಂದರೆ ಅದು ಭಾಗವತಕೈಙ್ಕರ್ಯಪರ್ಯಂತವಾಗಿದ್ದುಕೊಂಡು, ಅದೇ ಪುರುಷಾರ್ಥಕಾಷ್ಠೆ ಎಂದು ಹೇಳಿಸಿಕೊಳ್ಳುವ ಪ್ರಕಾರವನ್ನೂ, ಇದರಿಂದ ಪುರುಷಾರ್ಥಕಾಷ್ಠಾಧಿಕಾರಾರ್ಥವೂ ಬೋಧಿತವಾಯಿತು, ಅಂತಹ ಪುರುಷಾರ್ಥಕಾಷ್ಠೆಯು ದಿವ್ಯ ದೇಶಗಳಲ್ಲಿ ಭಗವದ್ಭಾಗವತ ಸಾನ್ನಿಧ್ಯವೂ ಕೈಙ್ಕರ್ಯವೂ ದೊರೆಯುವದರಿಂದ, ಸ್ಥಾನವಿಶೇಷಾಧಿಕಾರಾಭಿಪ್ರಾಯವೂ ಇದರಲ್ಲೂ ದ್ಯೋತಿತವು ಈಗ ಇಷ್ಟು ದೂರ ಹೇಳಿದುದೆಲ್ಲಾ ಶರೀರಪಾತಕ್ಕೆ ಪೂರ್ವಭಾವಿಯಾಗಿ ಮುಮುಕ್ಷುವು ಪ್ರಪನ್ನನೆನಿಸಿ ಮಾಡತಕ್ಕವುಗಳಾಗಿವೆ ಮುಂದೆ, ಶರೀರಾವಸಾನಾನಂತರ ನಡೆಯುತಕ್ಕದ್ದೆಲ್ಲಾ ಹೇಳಲ್ಪಡುತ್ತದೆ. **ಶರೀರಪಾತಾನಂತರಂ** - ಸ್ಥೂಲ ಶರೀರವು ಬಿದ್ದುಹೋದ ನಂತರ ಎಂದರೆ ದೇಹಾವಸಾನಾನಂತರ, **ಅರ್ಚಿರಾದಿಗತಿಯಾಲೇ**-ಅರ್ಚಿರಾದಿಮಾರ್ಗಮೂಲಕವಾಗಿ, ನಿರ್ಯಾಣಗತಿಚಿಂತನಾಧಿಕಾರಾಭಿಪ್ರಾಯವು ಜ್ಞಾಪಿಸಲ್ಪಟ್ಟಿತು, **ಅಪ್ರಾಕೃತದೇಶ ವಿಶೇಷತ್ತಿಲೆ ಶೆನ್ರಾಲ್** - ಶುದ್ಧ ಸತ್ವಮಯವಾದ ಪ್ರದೇ

**ಭವ ಪರೀವಾಹವೂಕ ವರುಮ್ ಪರಿಪೂರ್ಣ ಕೈಙ್ಕರ್ಯರೂಪ ಪರಮ ಪುರುಷಾರ್ಥ ಸಿದ್ಧಿ ಇರುಕ್ಕುಮ್ ಪಡಿಯುಮ್ ಶೊನ್ನೋಮ್.**

---

ಶವು, ದಿವ್ಯ ವೈಕುಂಠ ಲೋಕವು, ಅದನ್ನು ಹೋಗಿ ಸೇರುವದರಿಂದ, ಇವನುಕ್ಕು - ಈ ಪ್ರಪನ್ನನಾದ ಅಧಿಕಾರಿಗೆ, ಅನವಚ್ಛಿನ್ನ - ಅಪರಿಮಿತವಾದ, ಭಗವದನುಭವ - ಪ್ರಾಚುರ್ಯನಾದ ಶ್ರಿಯಃಪತಿಯನ್ನನುಭವಿಸುವದರ, ಪರೀವಾಹವೂಕವರುಮ್ - ಪ್ರವಾಹರೂಪದಲ್ಲಿ ಬರುವ ಪರಿಪೂರ್ಣ ಕೈಙ್ಕರ್ಯರೂಪ ಸರ್ವದೇಶ ಸರ್ವಕಾಲ ಸರ್ವಾವಸ್ಥೋಚಿತಗಳಾಗಿ ಹೀಗೆ ಸರ್ವವಿಧಗಳಾಗಿ ಪರಿಪೂರ್ಣವೆಂದೆನಿಸಿದ ಕೈಙ್ಕರ್ಯರೂಪವಾದ, ಪರಮಪುರುಷಾರ್ಥ ಸಿದ್ಧಿ - ಸರ್ವೋತ್ಕೃಷ್ಟವಾದ ಪುರುಷಾರ್ಥದ ಸಿದ್ಧಿಯು, ಇರುಕ್ಕುಮ್ ಪಡಿಯುಮ್ - ಇರುವ ರೀತಿಯನ್ನೂ, ಶೊನ್ನೋಮ್ - ಹಿಂದಿನ ಅರ್ಥಾನುಶಾಸನದ ಇಪ್ಪತ್ತೆರಡು ಅಧಿಕಾರಗಳ ಮೂಲಕ ಹೇಳಿದೆವು ಇದು ಬರೀ ಹೇಳಿಕೆಯಲ್ಲವು, ಪರಮ ಹಿತೋಪದೇಶವಾದುದರಿಂದ ಸ್ವಾಮಿ ಸುಸಙ್ಕಲ್ಪದಿಂದ ದೊರೆತ ಮಹಾಭಾಗ್ಯೋದಯವೆಂದು ಪ್ರತಿಯೊಬ್ಬ ಮೋಕ್ಷಾರ್ಥಿಯಾದ ಜ್ಞಾನಿಯು ಭಾವಿಸತಕ್ಕದ್ದು.

**ತಾತ್ಪರ್ಯ**—ಮಹಾಪಂಡಿತರ ಉಪದೇಶ ಲಕ್ಷಣವೆಂಥಾದ್ದೆಂದರೆ.— ತಾವು ವಿಶದವಾಗಿಯೂ, ವಿಸ್ತರವಾಗಿಯೂ ಉಪದೇಶಿಸುವ ಭಾಗವನ್ನು ಪ್ರಥಮತಃ ಸಂಕ್ಷೇಪವಾಗಿ ಹೇಳಿಬಿಟ್ಟು, ಅದನ್ನೇ ಚೆನ್ನಾಗಿ ವಿಸ್ತರಿಸಿ, ಉಪಪಾದಿಸಿ ಪ್ರಮಾಣಗಳೊಂದಿಗೆ ಬಲಪಡಿಸಿ ಹೇಳಿ, ನಿಗಮನದಲ್ಲಿ ಪುನಃ ಅದನ್ನೇ ಇನ್ನೊಂದುವಿಧವಾಗಿ ಸಂಗ್ರಹಿಸಿ ಹೇಳಿ ವಿಷಯವು ಶಿಷ್ಯನ ಮನಸ್ಸಿನಲ್ಲಿ ದೃಢವಾಗಿ ನಿಲ್ಲುವಹಾಗೆ ಮಾಡತಕ್ಕದ್ದು ಕ್ರಮವು ಇದನ್ನನುಸರಿಸಿಯೇ ಅಧಿಕಾರಾದಿಯಲ್ಲಿ ಸಂಗ್ರಹ ಶ್ಲೋಕವೂ, ಅಧಿಕಾರದಲ್ಲಿ ಉಪಪಾದನೆಯೂ ಅಂತ್ಯದಲ್ಲಿ ನಿಗಮನರೂಪವಲ್ಲಿ ಪುನಸ್ಸಙ್ಗ್ರಹವೂ ಸ್ವೀಕರಿಸಲ್ಪಟ್ಟಿವೆ. ಹಾಗೆಯೇ ಇಪ್ಪತ್ತೆರಡು ಅಧಿಕಾರದಲ್ಲಿನ ಉಪಪಾದನವೂ ಈ ವಾಕ್ಯಮೂಲಕ ಸಙ್ಗ್ರಹಿಸಲ್ಪಟ್ಟಿರುತ್ತದೆ ಈ ಕ್ಷೇತ್ರಜ್ಞನು, ಅನಾದಿಕಾಲದಿಂದ ಈ ಸಂಸಾರ ಬಂಧಕ್ಕೆ ಸಿಕ್ಕಿದವನೆಂದು ಹೇಳಲ್ಪಟ್ಟಿರುತ್ತದೆ ಯಾವಾಗ ಇನ್ನೂ ಮುಕ್ತಿಯಿಲ್ಲವೋ, ಅನೇಕ ಸೃಷ್ಟಿಗಳಿಗೆ ಕಲ್ಪ ಕಲ್ಪದಲ್ಲೂ ಸಿಕ್ಕಿ ತೊಳಲುತ್ತಾ ಇದ್ದಾನೆಂಬುದು ವ್ಯಕ್ತವು ಅದುದರಿಂದ ಯಾವ ಕಾಲದಿಂದ ಈ ಅವಸ್ಥೆಯೆಂಬುವದನ್ನು ಹೇಳಲು ಸಾಧ್ಯವಿಲ್ಲದೆ ಅನಾದಿ ಎಂದು ಹೇಳಲ್ಪಟ್ಟಿರುತ್ತದೆ ಈ ವಿಷಯವು ಹಿಂದೆ ಕರ್ಮಾವಿದ್ಯಾದಿ ಚಕ್ರೇ ಎಂಬ ಶ್ಲೋಕಾಭಿಪ್ರಾಯ ವಿಚಾರದಲ್ಲಿ ಚರ್ಚಿಸಲ್ಪಟ್ಟಿರುತ್ತದೆ. ಈತನಿಗೆ ಸಂಸಾರ

ಬಂಧವು ದೇಹಮೂಲಕವಾಗಿ; ದೇಹವಿಲ್ಲದೆ ಈತನು ಕರ್ಮಗಳನ್ನು ಮಾಡಲು ಸಾಧ್ಯವಿಲ್ಲವು. ಆದುದರಿಂದಲೇ ಈತನು ಕ್ಷೇತ್ರಜ್ಞನೆಂದು ಹೇಳಲ್ಪಟ್ಟನು ಗೀತಾ ೧೩ನೆಯ ಅಧ್ಯಾಯದ ಪ್ರಥಮ ಶ್ಲೋಕವು,

"ಇದಂ ಶರೀರಂ ಕೌನ್ತೇಯ ಕ್ಷೇತ್ರಮಿತ್ಯಭಿಧೀಯತೇ ।
ಏತದ್ಯೋವೇತ್ತಿ ತಂಪ್ರಾಹುಃ ಕ್ಷೇತ್ರಜ್ಞ ಇತಿ ತದ್ವಿದಃ ॥"

ಶ್ರೀ ಕೃಷ್ಣ ಭಗವಾನರವರು ಹೇಳುತ್ತಾರ; "ಓ ಕುಂತೀಪುತ್ರನೇ, ನಾನು ದೇವತೆಯು, ನಾನು ಮನುಷ್ಯನು, ನಾನು ಸ್ಥೂಲನಾದವನು, ನಾನು ಕೃಶನು ಇತ್ಯಾದಿರೂಪದಲ್ಲಿ ಭೋಕ್ತ್ರಾವಾದ ಆತ್ಮನೊಂದಿಗೆ ಸಾಮಾನಾಧಿಕರಣ್ಯದಿಂದ (ಏಕೀಭಾವದಿಂದ) ಹೇಳಲ್ಪಟ್ಟು ಭೋಕ್ತ್ರಾವಿಗೆ ಭೋಗಸಾಧಕವಾದ ಈ ಶರೀರವು, ಭೋಕ್ತ್ರಾವಿಗಿಂತ ಬೇರೆಯಾದುದೆಂದು ತತ್ವವನ್ನು ತಿಳಿದವರಿಂದ ಹೇಳಲ್ಪಡುತ್ತದೆ. ಆದುದರಿಂದಲೇ "ನಾನು ಇದನ್ನು ತಿಳಿಯುವೆನು" ಎಂಬಲ್ಲಿ ನಾನು ಎಂಬ ಜ್ಞಾತಾ, ತಿಳಿಯತಕ್ಕ ದೇಹ ಮೊದಲಾದುದಕ್ಕಿಂತ ಬೇರೆ ಎಂಬದಾಗಿ ತತ್ವವಿತ್ತುಗಳು ಹೇಳುವರು ಎಂಬುದು ಈ ಶ್ಲೋಕಾಭಿಪ್ರಾಯವು. ಹೀಗೆ ಜ್ಞಾನ ಉಂಟಾದರೆ ಈ ದೇಹವು, ನಶ್ವರಗಳಾಗಿ ಅಂತ್ಯದಲ್ಲಿ ದುಃಖಪ್ರದಗಳಾದ ಭೋಗಗಳಿಗಲ್ಲವೆಂದು ತಿಳಿದವನಾಗಿ, ಈ ಸಂಸಾರಾಂಬುಧಿಯನ್ನು ದಾಟುವದಕ್ಕಾಗಿ "ಕಾಯನೌಃ" ಸರ್ವೇಶ್ವರನಿಂದ ದಯಪಾಲಿಸಲ್ಪಟ್ಟ ಒಂದು ಹಡಗೆಂದು ಭಾವಿಸತಕ್ಕದ್ದೆಂಬಭಿಪ್ರಾಯದಿಂದ ಕ್ಷೇತ್ರಜ್ಞ ಶಬ್ದವನ್ನು ಪ್ರಯೋಗಿಸಿರುತ್ತಾರೆ ಇಂತಹ ಚೇತನನಿಗೆ ಸರ್ವೇಶ್ವರನ ಕೃಪೆಯುಂಟಾಗಿ ಕಡೆಗೆ ರಕ್ಷಿಸಲ್ಪಡುವನೆಂಬಭಿಪ್ರಾಯವು ಉಪೋದ್ಘಾತಾಧಿಕಾರದಲ್ಲಿ ಉಪಪಾದಿತವು ಯಾವಾಗ ಈ ಕ್ಷೇತ್ರಜ್ಞನು ತನ್ನನ್ನಾಶ್ರಯಿಸುವನೋ, ಯಾವಾಗ ಆತನಿಗೆ ನಿರತಿಶಯ ನಿಶ್ರೇಯಸ್ಸನ್ನುಂಟುಮಾಡುವೆನೋ ಎಂದು ಸರ್ವೇಶ್ವರನು ಯಾವಾಗಲೂ ಸಂಕ್ಷಿಸುತ್ತಿರುವನೆಂದು ತಿಳಿಸುವದಕ್ಕಾಗಿ ಅವಸರ ಪ್ರತೀಕ್ಷ್ಯಯಾನ ಎಂದು ಇಲ್ಲಿ ಪ್ರಯೋಗಿಸಿರುತ್ತಾರೆ "ತ್ರಾತವ್ಯಶ್ಶರಣಾಗತಃ" (ಸ ಸೂರ್ಯೋ) ಶರಣಾಗತನು ರಕ್ಷಿಸಲ್ಪಡತಕ್ಕದ್ದು, "ಅಭಯಂ ಸರ್ವಭೂತೇಭ್ಯೋ ದದಾಮ್ಯೇ ತದ್ವ್ರತಂ ಮಮ", (ರಾಮಾ.) ಶರಣಾಗತರಿಗೆ ಅಭಯವನ್ನು ಕೊಡುವದೇ ತನಗೆ ವ್ರತವೆಂದೂ, ಹೀಗೆ ದೃಢಸಂಕಲ್ಪಯುಕ್ತನಾಗಿ ಅವಸರ ಪ್ರತೀಕ್ಷೆಯಲ್ಲಿರುವನು. ನಾವುಗಳು ಮಾಡುವ ಅಲ್ಪಸುಕೃತವು ಒಂದು ವ್ಯಾಜಮಾತ್ರವೇ ವಿನಾ ನಮ್ಮನ್ನು ರಕ್ಷಿಸತಕ್ಕದ್ದು ಭಗವತ್ಕೃಪೆ ಎಂದು ಹೇಳುತ್ತಾರೆ ಈತನಿಗೆ ಜನನ ಕಾಲದಲ್ಲಿ ತನ್ನ ದಿವ್ಯ ಕಟಾಕ್ಷದ ವೀಕ್ಷಣವು ದೊರೆತು ಸತ್ವೋದ್ರೇಕ ಉಂಟಾಗಿ ಸಾತ್ವಿಕ ಸಂಭಾಷಣೆ, ಸದ್ಗುರುಪ್ರಾಪ್ತಿ, ಉಪಾಯಾನುಷ್ಠಾನ ಮೊದಲಾದ ಸರ್ವ ಶ್ರೇಯಸ್ಸು

ಗಳೂ ಆ ಮಹಾನುಭಾವನ ಕೃಪಾಪ್ರಭಾವವೆಂದು ಹೇಳಿರುತ್ತಾರೆ. ಸರ್ವಶ್ರೇಷ್ಠ ವಾದ ಆ ಕೃಪೆಯೊಂದು ಮಾತ್ರವಿಲ್ಲದಿದ್ದರೆ, "ದೋಷಾಭವೇಯು ರೀತೀ ಯದಿನಾಮ ದಯೇ ತ್ವಯಾ ವಿನಾ ಭೂತಾಃ ।" (ದಯಾ. ೧೫) ಸರ್ವೇ ಶ್ವರನ ಸಮಸ್ತ ಕಲ್ಯಾಣಗುಣಗಣವೂ ದೋಷಯುಕ್ತವಾದವಾಗುತ್ತಿತ್ತು. ಯಾ ವಾಗ ಸರ್ವೇಶ್ವರನ ಕೃಪೆಗೆ ವಶನಾದನೋ "ತಸ್ಮಿನ್ ಪ್ರಸನ್ನೇ ಕಿಮಿಹಾಸ್ತ್ಯ ಲಭ್ಯಂ" (ವಿ. ಪು.) ಎಂದು ಹೇಳಿರುವ ಹಾಗೆ, ಆಗ ಇವನಿಗೆ ಅಲಭ್ಯವಾದುದು ಯಾವುದೂ ಇಲ್ಲವು. ಆಗ ಸಮೀಚೀನ ಶಾಸ್ತ್ರಪ್ರಾಪ್ತಿಯು ಆಚಾರ್ಯಮೂಲಕ ದೊರೆಯುತ್ತದೆಂಬ ಭಾವವು. "ಶಾಸ್ತ್ರಜ್ಞಾನಂ ಬಹುಕ್ಲೇಶಂ ಬುದ್ಧೇಶ್ಚಲನ ಕಾರಣಂ" ಎಂದು ಹೇಳಿರುವ ಹಾಗೆ ಬಹುವಾದ ಶಾಸ್ತ್ರದ ಯಥಾರ್ಥಜ್ಞಾನವು ದುಸ್ತರವಾದುದರಿಂದ, ಶಾಸ್ತ್ರದಲ್ಲಿ ಸಾರತಮಗಳಾದ ಶ್ರೀಮದ್ರಹಸ್ಯತ್ರಯಗಳ ಸಾರವತ್ತಾದ ಅರ್ಥಗಳನ್ನು ಆಚಾರ್ಯರುಗಳ ಮೂಲಕ ಸಂಗ್ರಹಿಸತಕ್ಕದ್ದು ಎಂಬುದನ್ನು ತಿಳಿಸುವದಕ್ಕಾಗಿ ಸಮೀಚೀನ ಶಾಸ್ತ್ರಮುಖತಾಲೆ ಎಂಬ ಪ್ರಯೋಗವು. ಹೀಗೆ ಉಪದೇಶ ಮೂಲಕ ಎಲ್ಲ ಮುಮುಕ್ಷುಗಳಿಗೆ ಜ್ಞಾತವ್ಯಾಂ ಶಗಳು ಮೂರೆಂದು ತತ್ತ್ವಹಿತ ಪುರುಷಾರ್ಥ ವಿಶೇಷಗಳೆಂದು ನಿರೂಪಿಸಿರು ತ್ತಾರೆ. ಆದರೆ ಶಾಸ್ತ್ರಗಳೆಲ್ಲಾ ಬೋಧಿಸುತ್ತಿರುವುದು ಅರ್ಥಪಂಚಕವೆಂದು ಹೇಳಿರುವಾಗ, ಇಲ್ಲಿ ಮೂರು ಮುಖ್ಯವೆಂದು ಹೇಳಿರುವುದು ಅದಕ್ಕೆ ವಿರುದ್ಧವಾದ ಅಭಿಪ್ರಾಯವೋ ಎಂದರೆ ಆ ಐದೂ ಈ ಮೂರರಲ್ಲಿ ಅಡಗಿವೆ ತತ್ತ್ವವನ್ನು ತಿಳಿ ಯುವುದಕ್ಕೆ ಪ್ರಾಪ್ಯಸ್ವರೂಪವೂ ಪ್ರಾಪ್ತೃವಿನ ಸ್ವರೂಪವೂ ಮುಖ್ಯವಾಗಿ ಜ್ಞಾತ ವ್ಯವು. ಹಿತ ವ್ಯಾವುದೆಂದರೆ ಉಪಾಯಾನುಷ್ಠಾನವು; ಪುರುಷಾರ್ಥವು ಫಲವು, ಇದನ್ನು ತಿಳಿಯುವಾಗ ಆ ಪ್ರಾಪ್ತಿರೂಪ ಫಲಕ್ಕೆ ವಿರೋಧಿಯಾವುದು ಎಂಬುದೂ ತಿಳಿಯತಕ್ಕದ್ದು ಆವಶ್ಯಕವು ಇವುಗಳನ್ನು ಮುಖ್ಯವಾಗಿ ತಿಳಿಯತಕ್ಕದ್ದಾದುದ ರಿಂದ ವಿಶೇಷಜ್ಞಳೈ ತೆಳಿನ್ನು ಎಂದು ಹೇಳಲ್ಪಟ್ಟಿರುತ್ತದೆ. ಶಾಸ್ತ್ರಗಳ ವಿಪುಳ ಜ್ಞಾನವಿಲ್ಲದಿದ್ದರೂ ಮುಖ್ಯವಾಗಿ ಈ ಮೂರರ ಜ್ಞಾನವು ಎಲ್ಲಾ ಮೋಕ್ಷಾರ್ಥಿ ಗಳಿಗೂ ಆವಶ್ಯಕವು. ಇಂತಹ ಜ್ಞಾನಬಲದಿಂದ ಮೋಕ್ಷದಲ್ಲಿ ಇಚ್ಛೆಯುಂಟಾ ಗುತ್ತದೆ. ತಾನು ಮುಮುಕ್ಷುವೆಂದೆನಿಸಬೇಕಾದರೆ, ತಾನು ದೇಹಾದ್ವಿಲಕ್ಷಣನಾಗಿ ಪರಿಶುದ್ಧವಾದ ಸ್ವರೂಪವುಳ್ಳವನೆಂದು ತಿಳಿದು, ಆ ಕಾರಣದಿಂದ ಪಾಪಗಳಿಂದ ಅಪವಿತ್ರನಾಗಕೂಡದೆಂಬ ಸ್ಥಿರಸಂಕಲ್ಪಯುಕ್ತನಾಗಿ, ಸರ್ವೇಶ್ವರನೇ ತನಗೆ ಆಧಾರನಾಗಿ ನಿಯಾಮಕನಾಗಿ ಶೇಷಿಯಾಗಿ ಸ್ವಾಮಿಯಾಗಿರುವದರಿಂದ ಅತನಿಗೆ ಕೈಂಕರ್ಯ ಮಾಡುವದೇ ತನಗೆ ಸ್ವರೂಪವೆಂಬ ತಿಳುವಳಿಕೆಯನ್ನು ಹೊಂದಿ, ಅಹಂಕಾರ ಮಮಕಾರಗಳನ್ನು ತೊರೆದು ನಿವೃತ್ತಿ ಧರ್ಮಗಳನ್ನವಲಂಬಿಸತಕ್ಕದ್ದು.

ಅನಂತರ ಈತನು ಭಕ್ತಿಮಾರ್ಗ ಪ್ರಪತ್ತಿಮಾರ್ಗಗಳೆಂಬ ಎರಡು ಉಪಾಯಗಳೆಂದು ತಿಳಿದು, ಈ ಎರಡು ವಿಧ ಅಧಿಕಾರಿಗಳಿಗೂ ಇರುವ ವೈಲಕ್ಷಣ್ಯವನ್ನು ಚೆನ್ನಾಗಿ ಅರಿತು, ತಾನು ಉಪಾಸನೆಗೆ ಶಕ್ತಿಯಿಲ್ಲದೇಯಾಗಲೀ ಅನರ್ಹನಾಗಿಯಾಗಲೀ ಇದ್ದರೆ, ಆಗ ಲಘೂಪಾಯವಾದ ಪ್ರಪತ್ತಿ ಮಾರ್ಗಕ್ಕೆ ಅರ್ಹನೆಂದು ತಿಳಿದು, ಒಬ್ಬ ಪ್ರಾಜ್ಞನಾದ ಆಚಾರ್ಯನನ್ನು ವರಿಸಿ, ಉಕ್ತಿನಿಷ್ಠೆ ಆಚಾರ್ಯನಿಷ್ಠೆಯ ಮೂಲಕ ಭರನ್ಯಾಸವನ್ನು ಮಾಡತಕ್ಕದ್ದು. ಆ ಭರನ್ಯಾಸವು ಸಫಲವಾಗುವುದಕ್ಕಾಗಿ ಈತನು ಭರನ್ಯಾಸದ ಅಂಗಾಂಗಗಳ ಸ್ವರೂಪವನ್ನು ಚೆನ್ನಾಗಿ ವಿಮರ್ಶೆಯಿಂದ ತಿಳಿಯತಕ್ಕದ್ದು. ಕಾರ್ಪಣ್ಯ ಮಹಾವಿಶ್ವಾಸಾದಿ ಅಂಗಗಳ ನ್ಯೂನತೆಯಿದ್ದರೆ ಭರನ್ಯಾಸವು ಕಾರ್ಯಕಾರಿಯಾಗದು. ಹೀಗೆ ಭರನ್ಯಾಸವನ್ನನುಷ್ಠಿಸಿದವನು ನಿರ್ಭರನಾಗಿ, ನಿರ್ಭಯನಾಗಿ, ನಿಸ್ಸಂಶಯನಾಗಿ, ಹೃಷ್ಟಮನಸ್ಕನಾಗುವದರಿಂದ ಈತನು ಕೃತಕೃತ್ಯನಾಗುವನೆಂದು ತಿಳಿಸುವದಕ್ಕಾಗಿ ಕೃತಕೃತ್ಯನಾಯ್ ಎಂದು ಪ್ರಯೋಗವು. ಹೀಗೆ ಕೃತಕೃತ್ಯನಾದವನು ಉತ್ತರಕಾಲದಲ್ಲಿ ತಾನು ಅನುಷ್ಠಿಸಿದ ನಿಷ್ಠೆಯ ಮಾಹಾತ್ಮ್ಯಯನ್ನರಿತವನಾಗತಕ್ಕದ್ದು. ಸ್ವನಿಷ್ಠಾಭಿಜ್ಞಾನ ಉಂಟಾಗಬೇಕಾದರೆ ಪಂಭವಾದಿಗಳಿಂದ ಮನೋವಿಕಾರವುಂಟಾಗದಹಾಗಿರುವ ತನ್ನ ಸ್ವರೂಪದ ಮಾಹಾತ್ಮ್ಯಯ ಜ್ಞಾನವು ಬೇಕು. ತಾನು ಅನುಷ್ಠಿಸಿದ ಉಪಾಯದ ಮಾಹಾತ್ಮ್ಯಯನ್ನು ಉಪಾಯಾನುಷ್ಠಾನದಿಂದುಂಟಾಗುವ ಫಲದ ಮಾಹಾತ್ಮ್ಯಯನ್ನೂ ತಿಳಿದಿರತಕ್ಕದ್ದು. ಈತನು ಕೃತಕೃತ್ಯನಾದರೂ ಉತ್ತರಕಾಲದಲ್ಲಿ ತಾನು ಮಾಡತಕ್ಕ ಕೆಲವು ಇತಿ ಕರ್ತವ್ಯಗಳುಂಟೆಂದು ತಿಳಿದು, ಭಗವತ್ಪ್ರೀತ್ಯರ್ಥವಾಗಿ ಆಜ್ಞಾ ಕೈಂಕರ್ಯಗಳನ್ನು ತಪ್ಪದೆ ಅನುಷ್ಠಿಸುವನಾಗಿ ಅನುಜ್ಞಾ ಕೈಂಕರ್ಯಗಳನ್ನು ನ್ಯಾಯಾರ್ಜಿತ ದ್ರವ್ಯದಿಂದ ನಡೆಸುವವನಾಗಿ ಭಗವದ್ವಿಷಯದಲ್ಲೂ ಆಚಾರ್ಯರ ವಿಷಯದಲ್ಲೂ ಸಂಪೂರ್ಣ ಕೃತಜ್ಞತೆಯುಳ್ಳವನಾಗಿ, ತುಂಬಾ ಜ್ಞಾನಿಗಳಾಗಿರುವವರಿಂದ ಉಪದೇಶವನ್ನು ಹೊಂದುತ್ತಾ, ತನಗೆ ಚೆನ್ನಾಗಿ ತಿಳಿದಿರುವದನ್ನು ಇತರರಿಗೆ ತಿಳಿಸುತ್ತಾ, ಧನಾರ್ಜನೆ ಮೊದಲಾದ ಐಹಿಕವೃತ್ತಿಗಳಲ್ಲಿ ಆಶೆಯನ್ನು ತೊರೆದು, ಹೀಗೆ ತನ್ನ ಸ್ವರೂಪಕ್ಕೆ ಯೋಗ್ಯವಾದ ರೀತಿಯಲ್ಲಿ ಕಾಲಯಾಪನೆ ಮಾಡತಕ್ಕದ್ದು ಈ ಅಭಿಪ್ರಾಯವನ್ನು ಸೂಚಿಸುವದಕ್ಕಾಗಿ ಅದಕ್ಕನುರೂಪವಾಗ ವಿಜ್ಞ ಇರನ್ದನಾಳ್ ಎಂದು ಪ್ರಯೋಗಿಸಿರುತ್ತಾರೆ. ಇಂತಹ ಉತ್ತರಕೃತ್ಯಗಳಿಗೆ ಅನುಕೂಲವಾದ ಸ್ಥಳದಲ್ಲೇ ಈತನು ವಸಿಸತಕ್ಕದೆಂಬ ಸ್ಥಾನವಿಶೇಷಾಧಿಕಾರಾರ್ಥವೂ ಇದರಿಂದಲೇ ದ್ಯೋತಿತವು ತನಗೆ ಜ್ಞಾನಸಂಪಾದನೆಗೆ ಯೋಗ್ಯವಾಗಿ ಮಹಾ ಭಾಗವತೋತ್ತಮರು ನೆಲಸಿರುವ ಮಹಾಪುಣ್ಯಕ್ಷೇತ್ರಗಳಲ್ಲಿ ವಾಸವು ತನ್ನ ಸ್ವರೂಪಕ್ಕೆ ಯೋಗ್ಯವಾದುದು

ಎಂಬಭಿಪ್ರಾಯವು ಈ ಉತ್ತರಕೃತ್ಯಗಳಿಂದ ಆಜ್ಞಾನುಜ್ಞಾ ಕೈಂಕರ್ಯಗಳನ್ನೆಲ್ಲಾ ಶಾಸ್ತ್ರೀಯ ನಿಯಮವನ್ನನುಸರಿಸಿ ಮಾಡತಕ್ಕದ್ದೇ ಏನಾ ಅತಿಲಂಘನವು ಸರ್ವಥಾ ಕೂಡದೆಂದು ತಿಳಿದವನಾಗಿ, ಬುದ್ಧಿಪೂರ್ವಕವಾಗಿ ಅಪರಾಧಗಳನ್ನೆಸಗದೆ ಅದರಲ್ಲೂ ಮುಖ್ಯವಾಗಿ ಭಾಗವತಾಪರಾಧಗಳಿಗೆ ಭಯಪಟ್ಟು ನಡೆಯುವನಾಗಿ, ತನಗೆ ದೇಹಾವಸಾನದವರೆಗೂ ಮುಖ್ಯವಾಗಿ ಉಪಾದೇಯವಾದುದು ಭಗವದ್ಭಾಗವತ ಕೈಂಕರ್ಯವೂ, ಅದರಲ್ಲಿ ಭಾಗವತ ಕೈಂಕರ್ಯವೇ ಪುರುಷಾರ್ಥಕಾಷ್ಠೆ ಎಂದರಿತವನಾಗಿ, ಮಹಾ ಭಾಗವತೋತ್ತಮರ ಪ್ರಸನ್ನತೆಯನ್ನು ಮಾತ್ರ ಅಪೇಕ್ಷಿಸುವವನಾಗಿ ಕಾಲಯಾಪನೆಯನ್ನು ಮಾಡತಕ್ಕದ್ದೆಂದು "ಕೈಙ್ಕರ್ಯರೂಪ ಪುರುಷಾರ್ಥ ನಿರುಕ್ಕಂಪಡಿ" ಎಂಬುವದರಿಂದ ತಿಳಿಸಲ್ಪಟ್ಟಿತು. ಶರೀರಪಾತ ಸಮಯದಲ್ಲಿ ಇಂದ್ರಿಯಗಳೆಲ್ಲಾ ಸೂಕ್ಷ್ಮಾವಸ್ಥೆಯಲ್ಲಿ ಮನಸ್ಸಿನಲ್ಲೂ, ಇಂತಹ ಮನಸ್ಸು ಪ್ರಾಣದಲ್ಲೂ, ಇವೆಲ್ಲಾ ಜೀವಾತ್ಮನಲ್ಲೂ, ಹಾಗೆಯೇ ಭೂತಸೂಕ್ಷ್ಮದಲ್ಲೂ, ಅಲ್ಲಿಂದ ಪರಮಾತ್ಮನಲ್ಲೂ, ಹೀಗೆ ಗತಿಯುಂಟಾಗುತ್ತದೆ. ಇದು ಪ್ರಪನ್ನ ಅಪ್ರಪನ್ನರಿಬ್ಬರಿಗೂ ಸಾಧಾರಣವಾದ ಗತಿಯು; ದೇಹವನ್ನು ಬಿಟ್ಟು ಬರುವಾಗ ಪ್ರಪನ್ನನಿಗೆ ಬ್ರಹ್ಮನಾಡಿಯಮೂಲಕ ಆರ್ಚಿರಾದಿಗತಿಯೂ, ಇತರ ಉಪಾಸಕರೇ ಮೊದಲಾದವರಿಗೆ ನೂರು ನಾಡಿಗಳ ಮೂಲಕ ಧೂಮಾದಿಗತಿಯೂ, ಅಪ್ರಪನ್ನರಿಗೆ ಇತರ ಗತಿಯೂ ಪ್ರಾಪ್ತವಾಗುತ್ತವೆ. ಅಲ್ಲಿಂದ ಅರ್ಚಿಸ್ಸೇ ಮೊದಲಾದ ಆತಿವಾಹಿಕರಿಂದ ಸತ್ಕಾರವೂ, ತಮ್ಮ ತಮ್ಮ ಗಳ ಎಲ್ಲೆಗಳವರೆಗೂ ಕರೆದುಕೊಂಡು ಹೋಗಿಬಿಡೋಣವೂ, ವಿರಜಾವಗಾಹನೆ, ಅಮಾನವ ಕರಸ್ಪರ್ಶ, ಅಪ್ರಾಕೃತ ದಿವ್ಯಮಙ್ಗಳವಿಗ್ರಹಪ್ರಾಪ್ತಿ, ಪರಿಪೂರ್ಣಬ್ರಹ್ಮಾನುಭವ ತತ್ಕೈಂಕರ್ಯಾದಿಗಳೆಲ್ಲಾ ಲಭಿಸುತ್ತವೆಂದು ಹೀಗೆ ಹಿಂದೆ ಹೇಳಿದುದನ್ನೆಲ್ಲಾ ಅನುವಾದಮಾಡಿ ಹೇಳಿರುತ್ತಾರೆ

## ಭಗವನ್ನಿಗ್ರಹವನ್ನು ಹೋಗಲಾಡಿಸುವ ಮೂರು ಕಾರಣಗಳು.

ಸಿದ್ಧೋಪಾಯಾದಿ ವಿವೇಕಜ್ಞಾನವುಳ್ಳ ಪ್ರಪನ್ನರಿಗೆ ಸಾಧಾರಣವಾಗಿ ಶಂಕಾಗಳು ಉತ್ಪನ್ನವಾಗದೇ ಇರಬಹುದು ಆಗ ಈ ಅಧಿಕಾರದಲ್ಲಿ ಮಾಡಿರುವ ಶೋಧನೆಯು ವ್ಯರ್ಥವಾಗುತ್ತದಲ್ಲಾ ಎಂದರೆ, ಮೃದುಪ್ರಜ್ಞರಾದ ಪ್ರಪನ್ನರಿಗೆ ಹೈತುಕರೊಂದಿಗೆ ಸಹವಾಸವು ದೊರೆತು, ಬುದ್ಧಿಚಲನ ಉಂಟಾಗಿ ಶಙ್ಕಗಳಿಗೆ ಕಾರಣವಾಗುತ್ತದೆ ಇದೇತಕೆಂದರೆ. ಪ್ರಾಚೀನ ದುಷ್ಕರ್ಮವಶದಿಂದ ಉಪಾಯ ಮತ್ತು ಅದರ ಪ್ರಭಾವಗಳ ವಿಷಯವಲ್ಲಿ ಬೇಗ ವಿಶದವಾದ ಜ್ಞಾನೋತ್ಪತ್ತಿ ಇಲ್ಲದಿರಬಹುದು. ಅಥವಾ ಈ ಪ್ರಪನ್ನರಿಗೇನೇ ಮಾಯಾವಾದಿಗಳೇ ಮೊದಲಾದ

## ಭಗವನ್ನಿಗ್ರಹ ನಿವರ್ತಕಾ ಹೇತವಸ್ತ್ರಯಃ

ಇವ್ವರ್ಥಙ್ಗಳಿಲ್ ಜ್ಞಾತವ್ಯತಮಮಾನ ಸಿದ್ಧೋಪಾಯತ್ತೈಪ್ಪತ್ತ್ರವುಮ್, ಸಾಧ್ಯೋಪಾಯ ವಿಷಯಮಾಗವುಮ್, ಇವ್ವುಪಾಯ ಪ್ರಭಾವ ವಿಷಯಮಾಗವುಮ್, ಕರ್ಮವಶ್ಯರುಕ್ಕುಕ್ಕಡುಗತ್ತೆಳಿವು ಪಿರವಾಮೈಕ್ಕು ಸ್ವತನ್ತ್ರನಾನ ಸರ್ವೇಶ್ವರನ್ ಇವರ್ಗಳುಡೈಯ ಪೂರ್ವಾಪರಾಧತ್ತಾಲೇ

---

ವರ ಸಂಸರ್ಗವುಂಟಾಗಿ, ಭ್ರಾಮಕಬುದ್ಧಿಯು ತಲೆದೋರಿ, ವಿಭೂತಿಯೆಲ್ಲಾ ಮಿಥ್ಯಾ ಎಂದು ಹೇಳುವರು ; ಇನ್ನು ಕೆಲವರು ಶ್ರಿಯಃಪತಿಗೆ ಸೇರಿದುದೆಂದು ಭಾವಿಸದೆ ಇತರರಿಗೆ ಸೇರಿದುದೆಂದು ಹೇಳುವರು ; ಶಾಸ್ತ್ರಗಳಿಗೆ ಸರ್ವಸಾಮಂಜಸ್ಯವನ್ನು ಕಲ್ಪಿಸಲು ಯೋಗ್ಯತೆಯಿಲ್ಲದೆ, ಮಂದಮತಿಗಳಾದುದರಿಂದ ಹೀಗೆ ಅನೇಕ ಶಙ್ಕೆಗಳುಂಟಾಗುತ್ತವೆ, ಈ ಮಂದಮತಿಗಳಿಗೆ ಲಕ್ಷ್ಮೀಕಟಾಕ್ಷವೂ ಸದಾಚಾರ್ಯಾನುಗ್ರಹವೂ ಸತ್ಸಂಪ್ರದಾಯಸಿದ್ಧಿಯೂ ಇಲ್ಲದಿರುವದರಿಂದ ಜ್ಞಾನವು ಸಾಧಾರಣವಾಗಿ ಒಳ್ಳೇ ಮಾರ್ಗದಲ್ಲಿ ಪ್ರವರ್ತಿಸದೆ, ತಾವಾಗಿಯೇ ಸ್ವತಂತ್ರಿಸಿ ಶಾಸ್ತ್ರವನ್ನು ತಿಳಿಯಬೇಕೆಂದು ಪ್ರವರ್ತಿಸಿದರೆ, ಕುತರ್ಕಗಳಿಂದ ಮೋಹಿತರಾಗಿ ಶಾಸ್ತ್ರದಲ್ಲಿ ಪರಸ್ಪರ ವಿರುದ್ಧಗಳಿರುವಹಾಗೆ ಭಾವಿಸಿ, ಪ್ರಾಮಾಣಿಕವಾದ ಅಭಿಪ್ರಾಯಗಳನ್ನು ಗ್ರಹಿಸದೇ ಇರುತ್ತಾರೆ. ಆದರೆ ಕುತರ್ಕ ಕುವಾದಗಳು ಮೂರು ಪ್ರಧಾನ ವಿಷಯಗಳಲ್ಲಿ ಸುತರಾಂ ಇರಕೂಡದೆಂದು ಭಾವಿಸಿ, ಅಂತಹ ಶಙ್ಕೆಗಳಿಗೆಲ್ಲಾ ಸತ್ತರ್ಕಾದಿಗಳ ಮೂಲಕ ಸಮಾಧಾನವನ್ನು ಹೇಳಲಾರಂಭಿಸಿ, ಆ ಮೂರು ಪ್ರಧಾನ ವಿಷಯಗಳು ಸಿದ್ಧೋಪಾಯವೆಂದೂ, ಸಾಧ್ಯೋಪಾಯವೆಂದೂ ಸಾಧ್ಯೋಪಾಯದ ಪ್ರಭಾವವೆಂದೂ ಹೇಳಿ, ಇವುಗಳ ಸ್ಥಿರೀಕರಣವನ್ನು ನಾಲ್ಕು ಅಧಿಕಾರಗಳ ಮೂಲಕ ಮಾಡುತ್ತಾರೆ. ಪ್ರಥಮತಃ ಸಿದ್ಧೋಪಾಯ ವಿಷಯದಲ್ಲಿ ಮೃದುಪ್ರಜ್ಞರಾದ ಪ್ರಪನ್ನರಾದವರಿಗೆ ಉಂಟಾಗುವ ಶಙ್ಕೆಗಳೆಲ್ಲಾ ಶೋಧಿಸಲ್ಪಡುವದರಿಂದ ಇದಕ್ಕೆ ಸಿದ್ಧೋಪಾಯಶೋಧನಾಧಿಕಾರವೆಂದು ಹೆಸರು ಹಾಗೆಯೇ ಸಾಧ್ಯೋಪಾಯವಿಷಯದಲ್ಲುಂಟಾಗುವ ಶಙ್ಕೆಗಳೆಲ್ಲಾ ಮುಂದಿನಧಿಕಾರದಲ್ಲಿ ಶೋಧಿಸಲ್ಪಡುವದರಿಂದ ಸಾಧ್ಯೋಪಾಯ ಶೋಧನಾಧಿಕಾರವೆಂದು ಹೆಸರು ಇನ್ನೆರಡಧಿಕಾರಗಳು ಪ್ರಭಾವ ವಿಷಯವಾದುವು. ಒಂದರಲ್ಲಿ ಪ್ರಭಾವವು ಇಷ್ಟೇ ಎಂದು ವ್ಯವಸ್ಥಿತವಾಗುವುದರಿಂದ ಪ್ರಭಾವವ್ಯವಸ್ಥಾಧಿಕಾರವೆಂದು ಹೆಸರು. ಇನ್ನೊಂದರಲ್ಲಿ ಪ್ರಭಾವಕ್ಕೆ ನ್ಯೂನತೆ ಬರುವ ಶಂಕಾಗಳಿಂದ ಪ್ರಭಾ

ಯಿಟ್ಟ ನಿನ್ರೈಪ್ಪೀಡು ಮಾರ್ಱೈಗೈಕ್ಕು ಪ್ರಧಾನ ಕಾರಣಮ್ ಮೂನ್ರುಣ್ಡು; ಅವೈ ಯೆವೈ ಯೆನ್ನಿಲ್ :—(೧) "ಅಸ್ತುಮೇ" ಎನ್ರಪೇಕ್ಷಿತ್ತಾಲ್ "ಅಸ್ತು ತೇ, ತಯೈವ ಸರ್ವಂ ಸಂಪತ್ಸ್ಯತೇ" ಎಙ್ಗಿರತಿರುಮುಖಪ್ಪಡಿ ಯುಮ್, (೨) ಸದಾಚಾರ್ಯಾನುಗ್ರಹಮುಮ್, (೩) ಸತ್ಸಂಪ್ರದಾಯ ಸಿದ್ಧಿಯುಮ್.

---

ವವು ರಕ್ಷಿಸಲ್ಪಡುವದರಿಂದ ಪ್ರಭಾವರಕ್ಷಾಧಿಕಾರವೆಂದು ಹೆಸರು ಹೀಗೆ ಈ ಸ್ಥಿರೀಕರಣ ಭಾಗದಲ್ಲಿ ನಾಲ್ಕು ಅಧಿಕಾರಗಳಿವೆ. ಈ ಅಭಿಪ್ರಾಯಗಳನ್ನೇ ಮುಂದಿನ ವಾಕ್ಯದಿಂದ ತಿಳಿಸುತ್ತಾರೆ —

ಇವ್ವರ್ಥಙ್ಗಳಿಲ್ - ಹಿಂದೆ ವಿಸ್ತರವಾಗಿ ಉಪಪಾದಿಸಿ, ಅದನ್ನೇ ಈಗ ಅನುವಾದಿಸಿ ಹೇಳಿದ ಅಭಿಪ್ರಾಯಗಳಲ್ಲಿ, ಜ್ಞಾತವ್ಯತಮಮಾನ - ತಿಳಿಯಬೇಕಾದಂಶದಲ್ಲಿ ಅತ್ಯಂತ ಮುಖ್ಯವಾದ. ಸಿದ್ಧೋಪಾಯತ್ತೈ ಪತ್ತುವುಮ್ - ಸಿದ್ಧೋಪಾಯವನ್ನು ಕುರಿತೂ, ಸಾಧ್ಯೋಪಾಯ ವಿಷಯಮಾಗವುಮ್ - ಸಾಧ್ಯೋಪಾಯವನ್ನು ಕುರಿತೂ, ಇವ್ವುಪಾಯಪ್ರಭಾವ ವಿಷಯಮಾಗವುಮ್- ಈ ಸಾಧ್ಯೋಪಾಯದ ಮಾಹಾತ್ಮ್ಯೆಯನ್ನು ಕುರಿತೂ, ಕರ್ಮವಶ್ಯರುಕ್ಕು - ಕರ್ಮಾಧೀನರಾದವರಿಗೆ, ಕಡುಗ - ಶೀಘ್ರವಾಗಿ, ತೆಳಿವು - ನಿರ್ಣಯವು, ಪಿರಿವಾಮೈಕ್ಕು - ಹುಟ್ಟದೇ ಇರುವುದಕ್ಕೆ, ಸ್ವತಂತ್ರನಾದ ಸರ್ವೇಶ್ವರನು, ಇವರ್ಗಳುಡೈಯ ಪೂರ್ವಾಪರಾಧತ್ತಾಲೆ- ಇವರುಗಳ ಪೂರ್ವಾಪರಾಧದಿಂದ, ಯಿಟ್ಟ ನಿನ್ರೈಪ್ಪು - ಮಾಡಿದ ಸಂಕಲ್ಪವು, ಎಂದರೆ ಈತನು ಅಪರಾಧಿಯಾದುದರಿಂದ ತತ್ವಹಿತ ಪುರುಷಾರ್ಥಗಳ ಜ್ಞಾನಕ್ಕೆ ಅಯೋಗ್ಯನು ಎಂಬ ಸಂಕಲ್ಪವು ; ಈಡು ಮಾರುಕೈಕ್ಕು - ನಿವೃತ್ತಿ ಹೊಂದುವುದಕ್ಕೆ ಎಂದರೆ ಒಳ್ಳೇ ಜ್ಞಾನವನ್ನು ಈತನಲ್ಲಿ ಉಂಟುಮಾಡುವನೆಂದು ಸಂಕಲ್ಪಿಸುವುದಕ್ಕೆ, ಪ್ರಧಾನಕಾರಣಮ್-ಮುಖ್ಯ ಕಾರಣಗಳು, ಮೂನ್ರುಣ್ಡು - ಮೂರು ಉಂಟು ಅವು ಯೆವೈ ಯೆನ್ನಿಲ್- ಅವುಗಳು ಯಾವುವು ಎಂದರೆ:—(೧) "ಅಸ್ತುಮೇ" - ನನಗೆ ಪರಮ ಪುರುಷಾರ್ಥಪ್ರಾಪ್ತಿಹೇತುಭೂತವಾದ ಭಗವಂತನಲ್ಲಿ ಶರಣಾಗತಿಯು ಉಂಟಾಗಲಿ, ಎನ್ರಪೇಕ್ಷಿತ್ತಾಲ್ - ಎಂದಪೇಕ್ಷಿಸಿದರೆ, "ಅಸ್ತು ತೇ, ತಯೈವ ಸರ್ವಂ ಸಂಪತ್ಸ್ಯತೇ" - ಹಾಗೆಯೇ ಆಗಲಿ, ತಯೈವ - ಆ ನೀನು ಲಕ್ಷ್ಮಿಯಾದ ನನ್ನಲ್ಲಿ ಮಾಡಿದ ಶರಣಾಗತಿಯಿಂದಲೇ, ಸರ್ವಂ - ಸಮಸ್ತವೂ, ಸಂಪತ್ಸ್ಯತೇ -

---

(೧) ಶರಣಾಗತಿ ಗದ್ಯಂ.

ಹೊಂದಲ್ಪಡುತ್ತದೆ, ಎಣ್ಣಾರ - ಎಂದು ಹೇಳಿರುವ, ತಿರುಮುಖಪ್ಪಾತುರವ್ - ಲೋಕವಾರ್ತೆಯ ಮುಖಕಮಲದಿಂದ ಬಂದ ಸೂಕ್ತಿಯು, (೨) ಸದಾಚಾರ್ಯಾನುಗ್ರಹವ್ - ಕರ್ಮನಿಷ್ಠೆ ಜ್ಞಾನನಿಷ್ಠೆಗಳೊಂದಿಗೆ ಶರಣಾಗತಿಯನ್ನನುಷ್ಠಿಸಿ ಲಕ್ಷ್ಮೀನಾರಾಯಣರನ್ನು ವಶಮಾಡಿಕೊಂಡಿರುವದರಿಂದ ಸದಾಚಾರ್ಯರೆನಿಸುವವರ ಅನುಗ್ರಹವೂ, (೩) ಸತ್ಸಂಪ್ರದಾಯ ಸಿದ್ಧಿಯುವ್ - ಈ ಮೇಲಿನ ಲಕ್ಷ್ಮೀಕಟಾಕ್ಷದಿಂದುಂಟಾದ ಆಚಾರ್ಯಾನುಗ್ರಹದಿಂದ ಪ್ರಾಪ್ತವಾದ ಸದುಪದೇಶವನ್ನು ಹೊಂದೋಣವೂ ಇದರಲ್ಲಿ ಲಕ್ಷ್ಮೀಪ್ರಸಾದನವು ಆಚಾರ್ಯಾನುಗ್ರಹಕ್ಕೆ ಹೇತುವು; ಆಚಾರ್ಯಾನುಗ್ರಹವು ಸತ್ಸಂಪ್ರದಾಯಸಿದ್ಧಿಗೆ ಹೇತುವೆಂದು ತಿಳಿಯತಕ್ಕದ್ದು

ಈ ಮೇಲೆ ಇಪ್ಪತ್ತೆರಡು ಅಧಿಕಾರಗಳ ವಿಷಯದಲ್ಲೂ ಅನೇಕ ಶಂಕಾಗಳುಂಟಾಗಬಹುದಾಗಿರುವಾಗ, ಸಿದ್ಧೋಪಾಯ, ಸಾಧ್ಯೋಪಾಯ, ಉಪಾಯ ಪ್ರಭಾವ ಇವುಗಳ ವಿಷಯಗಳಲ್ಲಿ ಮಾತ್ರ ಉಂಟಾಗುವ ಶಂಕಾಗಳನ್ನು ಪರಿಹರಿಸಲು ಕಾರಣವೇನೆಂದರೆ, ಹೇಳುತ್ತಾರೆ ಇವ್ವರ್ಥಙ್ಗಳಿಲ್ ಜ್ಞಾತವ್ಯತಮಙ್ಗಳ್ ಎಂದು ಹೇಳಿರುವದರಿಂದ ಇವು ತುಂಬಾ ಪ್ರಧಾನವಾದವುಗಳು ಎಂಬ ಭಾವವು ಕರ್ಮವಶ್ಯರ್ಗೆ ಕ್ಕಡುಗತ್ತಿಳಿವು ಪಿರವಾವ್ಯೈಕ್ಕ ಎಂದು ಹೇಳಿರುವುದರಭಿಪ್ರಾಯವೇನೆಂದರೆ —"ಪಾಪಂ ಪ್ರಜ್ಞಾಂ ನಾಶಯತಿ ಕ್ರಿಯಮಾಣಂ ಪುನಃಪುನಃ" ಎಂದು ಹೇಳಿರುವ ರೀತಿಯಲ್ಲಿ ಪಾಪವು ಈತನ ಜ್ಞಾನವನ್ನು ನಾಶಮಾಡುತ್ತದೆ. ಪ್ರಪನ್ನನಾಗಿದ್ದರೂ ಈತನಿಗೆ ಒಳ್ಳೇ ಜ್ಞಾನವುಂಟಾಗದಿರಬಹುದು ಸರ್ವೇಶ್ವರನು ಇವರುಗಳ ಅಪರಾಧಗಳನ್ನು ಕಂಡು ನಿಗ್ರಹಿಸಬೇಕೆಂಬ ಕೃತಸಂಕಲ್ಪನಾಗಿದ್ದರೂ, ಅಂತಹ ಸಂಕಲ್ಪವನ್ನು ತ್ಯಜಿಸಿ ಅನುಗ್ರಹಿಸಲು ಮೂರು ಕಾರಣಗಳುಂಟೆಂದು ಹೇಳುತ್ತಾರೆ. (೧) ಪುರುಷಕಾರರೂಪಳಾದ ಲಕ್ಷ್ಮಿಯ ಅನುಗ್ರಹವು:—ಶ್ರೀ ಯತಿವರ್ಯರು ಪರಮಪುರುಷನಲ್ಲಿ ಶರಣಾಗತಿಯನ್ನನುಷ್ಠಿಸುವುದಕ್ಕೆ ಪೂರ್ವಭಾವಿಯಾಗಿ ಶ್ರೀ ಶರಣಾಗತಿಯನ್ನು ಮಾಡಿ, ಪ್ರಾರ್ಥಿಸಿದರು, ಏನೆಂದರೆ:—"ನಿತ್ಯಕೈಙ್ಕರ್ಯಪ್ರಾಪ್ತ್ಯಪೇಕ್ಷಯಾ ಪಾರಮಾರ್ಥಿಕೀ ಭಗವಚ್ಚರಣಾರವಿಂದ ಶರಣಾಗತಿರ್ಯಥಾವಸ್ಥಿತಾಽವಿರತಾಸ್ತು ಮೇ" ಪರಮಪುರುಷಾರ್ಥರೂಪ ಪರಿಪೂರ್ಣ ಬ್ರಹ್ಮಾನುಭವ ನಿತ್ಯಕೈಂಕರ್ಯಪ್ರಾಪ್ತಿಗಾಗಿ ಭಗವಂತನ ಚರಣಾರವಿಂದದಲ್ಲಿ ಶರಣಾಗತ್ಯನುಷ್ಠಾನವು ಸಾಂಗವಾದುದಾಗಲೆಂದು ಪ್ರಾರ್ಥನೆಯು. ತಮಃಕಾರ್ಯ, ರಜಃಕಾರ್ಯರೂಪದಲ್ಲಿ ಪ್ರಪತ್ತಿ ವಿಷಯದಲ್ಲಿ ಅನೇಕ ವಿಪ್ರತಿಪತ್ತಿಗಳು ತೋರಿಬರುವುದರಿಂದ ಇದರ ಸ್ವರೂಪವನ್ನರಿಯುವದು ದುರವಗಾಹವೆಂದು ಭಾವಿಸಿ, ತಮಃಕಾರ್ಯದ ನಿರಾಸಕ್ಕಾಗಿ

ಪಾರಮಾರ್ಥಿಕೀ - ಯಥಾರ್ಥವಾದಂತಾ ಶರಣಾಗತಿಯು ಸಿದ್ಧಿಸುವ ಹಾಗೆ ಅನುಗ್ರಹಿಸಬೇಕೆಂದು ಬೇಡಿದರು. ಆನುಕೂಲ್ಯಾದಿ ಅಂಗಗಳಿಂದ ಇತರ ಉಪಾಯಗಳಿಗಿಂತಲೂ ಬೇರೆಯಾದ ಸ್ವರೂಪವುಳ್ಳದ್ದೆಂದು ಹೇಳಲ್ಪಟ್ಟಿತು ರಜಸ್ತಮಃಕಾರ್ಯನಿರಸನಕ್ಕಾಗಿ ಯಥಾವಸ್ಥಿತಾ ಎಂದು ಹೇಳಲ್ಪಟ್ಟಿತು ಮೋಕ್ಷ ಪ್ರಾಪ್ತಿಯುಂಟಾಗುವ ತನಕ ಈ ಶರಣಾಗತಿಯ ವ್ಯಾಪಾರವು ಸಕೃತ್ತಾದರೂ, ಅದು ಶಾಂತವಾಗುವದಿಲ್ಲವಾದುದರಿಂದ ಅವಿರತಾ ಎಂದು ಹೇಳಲ್ಪಟ್ಟಿತು. ಭಕ್ತ್ಯುಪಾಯದಲ್ಲಾದರೋ ಅಂಗರೂಪ ಶರಣಾಗತಿಯು ಸಾಧ್ಯಾಂತರವನ್ನುಂಟು ಮಾಡಿ ವಿರತವ್ಯಾಪಾರವಾದುದಾಗುತ್ತದೆ ಇದಾದರೋ ಹಾಗಲ್ಲವೆಂಬ ಭಾವವು. ಮೇ - ಅತ್ಯಂತ ಅಕಿಂಚನನಾಗಿ ಅನನ್ಯಗತಿಕನಾದ ನಿನ್ನನ್ನೇ ಸರ್ವ ವಿಧದಲ್ಲೂ ನಂಬಿ ನಿನ್ನ ನಿಜದಾಸನಾದ ನನಗೆ, ಅಸ್ತು - ಉಂಟಾಗಲೆಂದು ಶ್ರೀ ಮಹಾ ಲಕ್ಷ್ಮಿಯನ್ನು ಪ್ರಾರ್ಥಿಸಲಾಗಿ, ಅದಕ್ಕೆ ಅನುಗ್ರಹಮಯಳು "ಅಸ್ತು ತೇ" ಎಂದು ಪ್ರತ್ಯುತ್ತರವನ್ನಿತ್ತಳು, ತೇ - ನನ್ನಲ್ಲಿ ಭರವನ್ನು ಇಟ್ಟದುದರಿಂದ ಸಂಪ್ರೀತ ಳಾಗಿ ಸ್ವೀಕರಿಸಲ್ಪಟ್ಟ ಶರಣಾಗತಿಯುಳ್ಳ ನಿನಗೆ, ಪಾರಮಾರ್ಥಿಕಿಯಾದ, ಯಥಾ ವಸ್ಥಿತಾವಾದ, ಅವಿರತಾವಾದ, ನನ್ನ ಪತಿಯಾದ ನಾರಾಯಣನಲ್ಲಿ ನೀನು ಅನು ಷ್ಠಿಸುವ ಶರಣಾಗತಿಯು ಸಿದ್ಧಿಸಲಿ, ತಯೈವ- ಆ ಶರಣಾಗತಿಯಿಂದಲೇ, ಸರ್ವಂ- ಸಮಸ್ತವೂ ಎಂದರೆ ತಮ್ಮ ಮನಸ್ಸಿನಲ್ಲಿರುವ ಮುಂದೆ ಹೇಳುವ ಮೂರು ಶ್ಲೋಕ ಗಳಲ್ಲಿ ತೋರುವ (ಶ್ಲೋಕತ್ರಯೋದಿತಜ್ಞಾನಿನಂ ಮಾಂ ಕುರುಷ್ವ) ಜ್ಞಾನಿ ಯಾಗಬೇಕೆಂಬ ಪ್ರಾರ್ಥನೆಯನ್ನೂ, ಮತ್ತು ವಿಭೀಷಣನೊಂದಿಗೆ ಬಂದ ನಾಲ್ಕು ಭಾಗವತರುಗಳ ಹಾಗೆ, ತನಗೆ ಸೇರಿದವರಿಗೂ ಮೋಕ್ಷಫಲವೂ ಸಹ, ಸಂಪ ತ್ಸ್ಯತೇ - ಹೊಂದಲ್ಪಡುತ್ತದೆ ಎಂಬದಾಗಿ ಲಕ್ಷ್ಮಿಯ ವರಪ್ರದಾನವು. ಮಹಾ ಪಾಪಿಯಾದ ರಾವಣನಿಗೇನೇ "ವಿದಿತ ಸ್ಸಹಿಧರ್ಮಜ್ಞ ಶ್ಶರಣಾಗತ ವತ್ಸಲಃ । ತೇನ ಮೈತ್ರೀ ಭವತು ತೇ ಯದಿ ಜೀವಿತು ಮಿಚ್ಛಸಿ ॥" "ಶರಣಾಗತರಲ್ಲಿ ವಾತ್ಸಲ್ಯವುಳ್ಳವನೆಂದೂ ಶರಣಾಗತಿಯ ಧರ್ಮವನ್ನು ತಿಳಿದವನೆಂದೂ ಶ್ರೀರಾಮನು ಲೋಕಪ್ರಖ್ಯಾತಿಯುಳ್ಳವನು,ಆದುದರಿಂದ ನೀನು ಬದುಕಬೇಕೆಂಬ ಆಶೆಯಿದ್ದ ದಾ ದರೆ ಎಂದರೆ ನೀನು ಸರ್ವ ಪುರುಷಾರ್ಥವನ್ನೂ ಹೊಂದಬೇಕೆಂಬಪೇಕ್ಷೆಯಿದ್ದ ದಾ ದರೆ, ಆ ಕರುಣಾಸಾಗರನೊಂದಿಗೆ ಸ್ನೇಹ ಉಂಟಾಗಲಿ" ಎಂದು ಹೇಳಿದ ಮಹನೀ ಯಳು. ತನ್ನ ಪುರುಷಕಾರತ್ವ ಮಹಿಮೆಯಿಂದ ಪರಮನಿಶ್ರೇಯಸವನ್ನು ತನ್ನನ್ನು ಮರೆಹೊಕ್ಕವರಿಗೆ ಸಾಧಿಸಿಕೊಡಶಕ್ಯಳು. "ಅಸ್ತು ತೇ" ಎಂದು ನಿಸ್ಸಂಶಯ ವಾಗಿ ಯಾವಾಗ ಹೇಳಲು ಶಕ್ತಳೋ ಆಗ ಸಾಧಿಸಿಕೊಡಲೂ ಶಕ್ತಳು. "ತಯೈ ವ ಸರ್ವಂ ಸಂಪತ್ಸ್ಯತೇ" ಎಂದೂ ಹೇಳಿರುವದರಿಂದ, ಲಕ್ಷ್ಮ್ಯನುಗ್ರಹದಿಂದ,

## ಸದಾಚಾರ್ಯಾನುಗ್ರಹಸ್ಯ ಹೇತುಫಲಯೋಃ ದೃಷ್ಟಾನ್ತಾಃ

**ಇವತ್ತಿಲ್ ಸದಾಚಾರ್ಯಾನುಗ್ರಹತ್ತುಕ್ಕು ವ್ಯಾಜಙ್ಗಳುಮ್ ಇದಿನ್**

---

ಶರಣಾಗತಿಗೆ ಬೇಕಾದ ಜ್ಞಾನಸಂಪತ್ತಿಯೂ, ಅದಕ್ಕೆ ಬೇಕಾದ ಪರಿಕರಗಳೆಲ್ಲಾ ಒದಗಿ, ಅದರ ಸ್ವರೂಪವು ಏರ್ಪಟ್ಟು, ಸಾಂಗವಾಗಿ ನೆರವೇರಿ ಫಲಪ್ರಾಪ್ತಿಯುಂಟಾಗುತ್ತದೆ ಎಂಬ ಭಾವವು.

ಸದಾಚಾರ್ಯಾನುಗ್ರಹದಿಂದಲೇ ಸರಿಯಾದ ಜ್ಞಾನಪ್ರಾಪ್ತಿ ಮೊದಲಾದವೆಂಬುದು ಗುರುಪರಂಪರಾಸಾರದಲ್ಲಿ ಉಪಪಾದಿತವು ಅಲ್ಲಿ "ಪಾಪಿಷ್ಠಃ ಕ್ಷತ್ರಬಂಧುಶ್ಚ ಪುಂಡರೀಕಶ್ಚ ಪುಣ್ಯಕೃತ್ । ಆಚಾರ್ಯವತ್ತಯಾ ಮುಕ್ತೌ ತಸ್ಮಾದಾಚಾರ್ಯವಾನ್ ಭವೇತ್ ॥" ಎಂಬ ಸ್ಥಳದಲ್ಲಿ ಉಪಪಾದಿತವಾಗಿರುತ್ತದೆ. ಸತ್ಸಂಪ್ರದಾಯವೆಂದರೇನೆಂಬುದು ಮೂಲದಲ್ಲೇ ಮುಂದೆ ತಿಳಿಸಲ್ಪಡುತ್ತದೆ.

ಹೀಗಾದ ಪಕ್ಷದಲ್ಲಿ ಈ ಸಿದ್ಧೋಪಾಯ ಶೋಧನಾಧಿಕಾರದ ಉಪಯೋಗವೇನೆಂದು ಕೇಳಬೇಕಾಗುತ್ತದೆ. ತಮ್ಮ ತಮ್ಮ ಆಚಾರ್ಯರುಗಳ ಅನುಗ್ರಹ ಮೂಲಕ ಪ್ರಾಪ್ತವಾಗುವ ಜ್ಞಾನ ಸತ್ಸಂಪ್ರದಾಯ ಸಿದ್ಧಿಯೇ ಸಾಕಾದರೂ, ಶಾಸ್ತ್ರ ಪರಿಚಯವುಳ್ಳವರಿಗೆ ಹಿಂದೆ ಉಪಪಾದಿಸಿದ ವಿಷಯಗಳು ಹೇಗೆ ಸತ್ತರ್ಕಗಳಿಂದ ದೃಢೀಕರಿಸಬಹುದೆಂಬಂಶವು ಆವಶ್ಯಕವಾಗಿ ತಿಳಿಯತಕ್ಕದ್ದು. ಶಾಸ್ತ್ರ ಪರಿಚಯ ತುಂಬಾ ಇಲ್ಲದವರಿಗೆ ಕುಬುದ್ಧಿಗಳೊಂದಿಗೆ ಸಂಸರ್ಗ ಪ್ರಾಪ್ತವಾಗಿ ಅವರುಗಳ ಕುತರ್ಕದಿಂದ ಬುದ್ಧಿಯು ಚಾಂಚಲ್ಯವನ್ನು ಹೊಂದಬಹುದು. ಅಂತಹ ದುರ್ದಶೆಯು ಪ್ರಾಪ್ತವಾಗದಿರುವುದಕ್ಕಾಗಿಯೂ ಇದು ಆವಶ್ಯಕವು. ಅದೂ ಅಲ್ಲದೆ ಅಂತಹ ಭಯಾವಹಗಳಾದ ಕುತರ್ಕರೂಪ ಪೂರ್ವಪಕ್ಷಗಳು ಕೆಲವರಲ್ಲಿ ನೆಲಗೊಂಡಿರುವುದರಿಂದಲೂ, ಅಂತಹ ಶಂಕಾಗಳನ್ನೆಲ್ಲಾ ನಿರಸನ ಮಾಡುವುದೂ ಅತ್ಯಾವಶ್ಯಕವಾದುದರಿಂದ, ಪ್ರಮಾಣಗಳನ್ನುದಾಹರಿಸಿ ಸತ್ತರ್ಕಗಳಿಂದ ಶೋಧನಮಾಡಿ, ತಮ್ಮ ಉಪದೇಶಗಳನ್ನು ಸ್ಥಾಪನೆ ಮಾಡುತ್ತಾರೆ.

**ಸದಾಚಾರ್ಯಾನುಗ್ರಹಕ್ಕೆ ಕಾರಣ ಫಲಗಳ ದೃಷ್ಟಾಂತಗಳು.**

---

**ಇವತ್ತಿಲ್** – ಈ ಮೂರರಲ್ಲಿ, **ಸದಾಚಾರ್ಯಾನುಗ್ರಹತ್ತುಕ್ಕು** – ಒಳ್ಳೇ ಶ್ರೇಷ್ಠನಾದ ಆಚಾರ್ಯನ ಅನುಗ್ರಹ ಉಂಟಾಗುವುದಕ್ಕೆ, **ವ್ಯಾಜಙ್ಗಳುಮ್** – ನೆಪರೂಪಕಾರಣಗಳನ್ನೂ, **ಇದಿನ್ ಫಲವಿಶೇಷಙ್ಗಳುಮ್** – ಅದರಿಂದುಂಟಾ

**ಫಲವಿಶೇಷಙ್ಗಳುಮ್ ಪರಾಶರ ಮೈತ್ರೇಯ ಸಂಜಯಾ ಶ್ವಲಾಯನಾದಿ ವೃತ್ತಾಂತಙ್ಗಳಿಲ್ ಕಂಡುಕೊಳ್ವದು.**

---

ಗುವ ಪ್ರಯೋಜನಗಳನ್ನೂ, ಪರಾಶರರು, ಮೈತ್ರೇಯರು, ಸಂಜಯರು, ಅಶ್ವಲಾಯನರು, ಆದಿ ಪದದಿಂದ, ವ್ಯಾಸ, ಶುಕ, ವಾಲ್ಮೀಕಿ ಮೊದಲಾದವರು ಹೇಳಲ್ಪಟ್ಟರು, ಇವರುಗಳ, ವೃತ್ತಾಂತಙ್ಗಳಿಲೇ ಕಂಡುಕೊಳ್ವದು– ಇವರುಗಳ ಸಚ್ಚರಿತ್ರೆಗಳಿಂದ ಗ್ರಹಿಸತಕ್ಕದ್ದು ಆಚಾರ್ಯಾನುಗ್ರಹ ಉಂಟಾಗಲು ಕಾರಣವೇನೆಂಬುದನ್ನೂ, ಅಂತಹ ಆಚಾರ್ಯಾನುಗ್ರಹ ಉಂಟಾದುದರಿಂದ ಪ್ರಾಪ್ತವಾದ ಪ್ರಯೋಜನಗಳೇನೆಂಬುದನ್ನೂ, ತಿಳಿಯಲಪೇಕ್ಷೆಯುಳ್ಳವರು ಪರಾಶರ, ಮೈತ್ರೇಯ, ಸಂಜಯ, ಅಶ್ವಲಾಯನರು, ಹೀಗೆ ನಾಲ್ಕು ಮಹನೀಯರುಗಳ ವೃತ್ತಾಂತದಿಂದ ತಿಳಿಯಬಹುದೆಂದು ಹೇಳಿರುತ್ತಾರೆ. ಈ ಗ್ರಂಥವನ್ನುಪದೇಶಿಸುವ ಮಹನೀಯರು ಈ ವೃತ್ತಾಂತಗಳನ್ನು ತಿಳಿಯದ ಪಕ್ಷದಲ್ಲಿ ವ್ಯಕ್ತಪಡಿಸಲೆಂದು ಸೂಕ್ಷ್ಮವಾಗಿ ತಿಳಿಸಿದರು. ಇಲ್ಲಿ ಕಾರಣವನ್ನು ವ್ಯಾಜವೆಂದು ಏತಕ್ಕೆ ಹೇಳಲ್ಪಟ್ಟಿತೆಂದರೆ, ಇಂತಹ ಕಾರಣಗಳೆಲ್ಲಾ ಒಂದು ನೆಪಮಾತ್ರವೇ, ಅಂತಹ ಸುಕೃತವನ್ನನು ಗ್ರಹಿಸುವನು ಶ್ರಿಯಃಪತಿಯೇ ಎಂಬ ತಾತ್ಪರ್ಯವು.

ಶ್ರೀ ಪರಾಶರ ವೃತ್ತಾಂತವು. ಇದು ವಿಷ್ಣುಪುರಾಣದ ಆದಿಭಾಗದಲ್ಲಿ ಹೇಳಲ್ಪಟ್ಟಿರುತ್ತದೆ. ಇವರು ವಸಿಷ್ಠರ ಪೌತ್ರರು. ವಿಶ್ವಾಮಿತ್ರರಿಂದ ಪ್ರೇರಿತನಾದ ಒಬ್ಬ ರಾಕ್ಷಸನು ಶ್ರೀ ಪರಾಶರರ ತಂದೆಯನ್ನು ಭಕ್ಷಿಸಿಬಿಟ್ಟನು ಇದಕ್ಕೆ ಶ್ರೀ ಪರಾಶರರು ಕ್ರೋಧಾಕ್ರಾಂತರಾಗಿ ಸರ್ವ ರಾಕ್ಷಸನಾಶಕ್ಕಾಗಿ ಒಂದು ಸತ್ರವನ್ನು ಆರಂಭಿಸಿದರು. ಇದರಿಂದ ರಾಕ್ಷಸರೆಲ್ಲಾ ಭಸ್ಮೀಕೃತರಾಗಿ ನಾಶವಾಗುತ್ತಿದ್ದರು. ಇದನ್ನು ವಸಿಷ್ಠರು ತಿಳಿದು ಮೊಮ್ಮಗನಲ್ಲಿಗೆ ಬಂದು ಓ ಅಪ್ಪನೇ, ಕ್ರೋಧವನ್ನು ಬಿಟ್ಟುಬಿಡು. ಒಬ್ಬನ ತಪ್ಪಿಗಾಗಿ ಎಲ್ಲರನ್ನೂ ನಾಶಪಡಿಸುವುದು ಧರ್ಮವಲ್ಲವು "ಯಶಸಸ್ತಪಸಶ್ಚೈವ ಕ್ರೋಧೋ ನಾಶಕರಃ ಪರಃ" ನಿನ್ನ ಕ್ರೋಧವು ನಿನ್ನ ಯಶಸ್ಸಿಗೂ ತಪಸ್ಸಿಗೂ ಸಹ ನಾಶಕರವು. ಆದುದರಿಂದ ನಿಲ್ಲಿಸು ಎಂದು ಹೇಳಿ ಆ ಸತ್ರವನ್ನು ನಿಲ್ಲಿಸಿಬಿಟ್ಟರು. ಶ್ರೀ ಪರಾಶರರಿಗೆ ಆಚಾರ್ಯಾನುಗ್ರಹ ಉಂಟಾಗಲು ಇದೇ ವ್ಯಾಜವಾಗಿ ಪರಿಣಮಿಸಿತು. ಇದನ್ನು ತಿಳಿದು ರಾಕ್ಷಸಕುಲಕ್ಕೆ ಮೂಲಭೂತರಾದ ಮತ್ತು ಬ್ರಹ್ಮಪುತ್ರರಾದ ಪುಲಸ್ತ್ಯರು ಬಂದು, ಅಯ್ಯಾ ವತ್ಸನಾದ ಪರಾಶರನೇ, ನೀನು ನಿನ್ನ ಪಿತಾಮಹರ ಆಜ್ಞೆಯನ್ನು ಶಿರಸಾವಹಿಸಿ ರಾಕ್ಷಸ ನಾಶವನ್ನು ಬಿಟ್ಟದ್ದರಿಂದ ನಾನು ಸುಪ್ರೀತನಾದೆನು.

ನೀನು ಸರ್ವ ಶಾಸ್ತ್ರಗಳನ್ನು ತಿಳಿದ ಮಹಾಜ್ಞಾನಿಯಾಗಿ ದೇವತಾ ಪಾರಮಾರ್ಥ್ಯವನ್ನು ತಿಳಿಯುವಿ, ಮತ್ತು ಪುರಾಣರತ್ನವನ್ನು ರಚಿಸುವಿ, ಎಂದು ಹರಸಿ ಹೊರಟು ಹೋದರು. ಆದುದರಿಂದ ಆ ಆಚಾರ್ಯಾನುಗ್ರಹದಿಂದ ಉಂಟಾದ ಫಲಗಳು ಯಥಾರ್ಥ ಶಾಸ್ತ್ರಜ್ಞಾನವೂ, ದೇವತಾ ಪಾರಮಾರ್ಥ್ಯವೂ, ಶ್ರೀ ವಿಷ್ಣುಪುರಾಣ ಸಂಹಿತಾ ನಿರ್ಮಾಣವೂ.

ಮೈತ್ರೇಯರು. ಇವರು ಶ್ರೀ ಪರಾಶರರ ಪ್ರಿಯಶಿಷ್ಯರು. ಇವರು ತಮ್ಮ ಆಚಾರ್ಯರನ್ನು "ಪ್ರಣಿಪತ್ಯಾಭಿವಾದ್ಯ ಚ" (ಶ್ರೀ ವಿ. ಪು. ೧. ೧. ೧) ಎಂದು ಹೇಳಿರುವ ಹಾಗೆ ಪರಮ ಭಕ್ತಿವಿಶ್ವಾಸಗಳಿಂದ ಆಶ್ರಯಿಸಿದುದರಿಂದ, (ಇದೇ ವ್ಯಾಜವು) ಶ್ರೀ ಪರಾಶರರಿಂದ ಪುರಾಣರತ್ನವಾದ, ವಿಷ್ಣುಪುರಾಣೋಪದೇಶವನ್ನು ಹೊಂದಿದವರಾಗಿ ಬ್ರಹ್ಮಜ್ಞಾನವನ್ನು ಹೊಂದಿ ಮೋಕ್ಷವನ್ನು ಹೊಂದಿದರು (ಇದೇ ಪ್ರಯೋಜನವು)

ಸಂಜಯರು. ಇವರು ವ್ಯಾಸರ ಶಿಷ್ಯರು, ವ್ಯಾಸರನ್ನು ಆಶ್ರಯಿಸಿದುದೇ ವ್ಯಾಜವು. ತ್ರೈಕಾಲಿಕ ಜ್ಞಾನವನ್ನು ಹೊಂದಿದುದೇ ಫಲವು. "ವ್ಯಾಸಪ್ರಸಾದಾಚ್ಛ್ರುತವಾನ್ ಏತದ್ಗುಹ್ಯಮಹಂ ಪರಮ್ । ಯೋಗಂ ಯೋಗೇಶ್ವರಾತ್ಕೃಷ್ಣಾತ್ಸಾಕ್ಷಾತ್ ಕಥಯತಸ್ಸ್ವಯಂ ॥" ಎಂದು ಸಂಜಯರೇ ಹೇಳಿಕೊಂಡಿರುತ್ತಾರೆ. ಸಾಕ್ಷಾತ್ ಶ್ರೀ ಕೃಷ್ಣನು ತಾನೇ ಉಪದೇಶಿಸಿದ ಹಾಗೆ ಶ್ರೀ ವ್ಯಾಸರ ಅನುಗ್ರಹದಿಂದ ಅತ್ಯುತ್ಕೃಷ್ಟವಾದ ಈ ರಹಸ್ಯವನ್ನೆಲ್ಲಾ ಕೇಳಿದೆನು ಎಂದು ತಮ್ಮ ಕೃತಜ್ಞತೆಯನ್ನು ತೋರಿಸಿಕೊಂಡಿರುತ್ತಾರೆ.

ಆಶ್ವಲಾಯನರು. ಶೌನಕ ಶಿಷ್ಯರು. ಇವರು ಶೌನಕರನ್ನು ಅನುವರ್ತಿಸಿ ನಡೆದಿದ್ದೇ ವ್ಯಾಜವು. ಋಗ್ವೇದ ಪ್ರವರ್ತನಾದಿಯೇ ಫಲವು.

ಹಾಗೆಯೇ ವಾಲ್ಮೀಕಿ ಮಹರ್ಷಿಗಳಿಗೆ ನಾರದ ಸಮಾಗಮ, ಮತ್ತು ಕ್ರೌಂಚ ಪಕ್ಷಿವಧೆಯನ್ನು ಮಾಡಿದ ವ್ಯಾಧಶಾಪಪ್ರದಾನಾದಿಗಳು ವ್ಯಾಜವು. ಶ್ರೀಮದ್ರಾಮಾಯಣ ಮಹಾಕಾವ್ಯ ನಿರ್ಮಾಣವು ಫಲವು.

ನಾಥಮುನಿಗಳಿಗೆ ತಿರುಗೂರ್ ನಗರಿಯ ಹುಣಸೇ ಮರದಲ್ಲಿನ ತೇಜೋದರ್ಶನವು ವ್ಯಾಜವು ನಮ್ಮಾಳ್ವಾರ್‌ರವರಿಂದ ತಿರುವಾಯ್‌ಮೊಳಿಯ ಉಪದೇಶವು ಫಲವು ಶ್ರೀ ಯಾಮುನೇಯರಿಗೆ ಹೊನಗೊನ್ನೇ ಸೊಪ್ಪಿನ ಪಲ್ಯವು ವ್ಯಾಜವು. ಮಣಕ್ಕಾಲನಂಬಿಯವರಿಂದ ರಹಸ್ಯಾರ್ಥಗಳ ಉಪದೇಶವು ಪ್ರಯೋಜನವು.

ಕ್ಷತ್ರಬಂಧುವಿಗೆ ನಾರದಸಮಾಗಮ ವ್ಯಾಜವು. ಮಂತ್ರೋಪದೇಶ ಮೋಕ್ಷಗಳು ಫಲಗಳು.

## ಸತ್ಸಂಪ್ರದಾಯ ಸಿದ್ಧಿಃ

**ಸತ್ಸಂಪ್ರದಾಯ ಸಿದ್ಧಿ ಯಾವದು?—ತಾನ್ ಸತ್ವೋತ್ತರನಾಯ್, ಸಮ್ಯಗುಪಸನ್ನನಾಯ್, ಸಾವಧಾನನಾಯಿರುಕ್ಕುಮ್ ಅವಸ್ಥೈಯಿಲೇ, ಖ್ಯಾತಿ ಲಾಭ ಪೂಜಾ ನಿರಪೇಕ್ಷನಾಯ್ ಕಾರುಣ್ಯ ಪರತಂತ್ರನಾನ ಸದಾಚಾರ್ಯರ್, ಸರ್ವರುಕ್ಕು ಪ್ರಥಮಾಚಾರ್ಯನಾನ ಸರ್ವೇಶ್ವರರ್**

---

ಜಾನಶ್ರುತಿಗೆ ಹಂಸೆಗಳ ಸಂವಾದವು ವ್ಯಾಜವು. ರೈಕ್ವರಿಂದ ಬ್ರಹ್ಮಜ್ಞಾನವು ಫಲವು. ಹೀಗೆಯೇ ಇತರ ಸಂದರ್ಭಗಳಲ್ಲೂ ಗ್ರಹಿಸತಕ್ಕದ್ದು.

ಸತ್ಸಂಪ್ರದಾಯ ಸಿದ್ಧಿಯು.

---

ಸತ್ಸಂಪ್ರದಾಯ ಸಿದ್ಧಿಯು ಯಾವುದು? ಎಂದರೇನೆಂಬ ಭಾವವು. ಇಲ್ಲಿ ಶಿಷ್ಯನಾದವನು ತನ್ನ ಸದಾಚಾರ್ಯನಿಂದ ತತ್ವಹಿತ ಪುರುಷಾರ್ಥಗಳ ವಿಷಯದಲ್ಲಿ ಉಪದೇಶವನ್ನು ಹೊಂದುವುದೇ ಸತ್ಸಂಪ್ರದಾಯವೆಂದು ಹೇಳಲು ಹೊರಟು ತಾನು ಹೇಗಿರಬೇಕು, ಆ ಸದಾಚಾರ್ಯನು ಎಂತವನಾಗಿರಬೇಕು ಎಂಬುದನ್ನು ಹೇಳುತ್ತಾರೆ. ಮೊದಲು ಶಿಷ್ಯನು ಹೇಗಿರಬೇಕೆಂದರೆ:—

**ತಾನ್ ಸತ್ವೋತ್ತರನಾಯ್** - ಸತ್ವಗುಣಾಧಿಕ್ಯವುಳ್ಳವನಾಗಿ, ಇದರಿಂದ ರಜೋಗುಣ ತಮೋಗುಣ ವಿಜೃಂಭಣೆಗಳು ಸರ್ವಾತ್ಮನಾ ಶಿಷ್ಯವೃತ್ತಿಗೆ ಕೂಡದೆಂದು ಹೇಳಲ್ಪಟ್ಟಿತು, **ಸಮ್ಯಗುಪಸನ್ನನಾಯ್** - ಶಾಸ್ತ್ರಗಳಲ್ಲಿ ಗುರುವಿಗೆ ಎಷ್ಟು ಮರ್ಯಾದೆಯನ್ನು ಮಾಡಬೇಕೆಂದು ಹೇಳಿದೆಯೋ ಹಾಗೆ, ತದ್ವಿದ್ಧಿ ಪ್ರಣಿಪಾತೇನ ಪರಿಪ್ರಶ್ನೇನ ಸೇವಯಾ ಎಂಬ ಗೀತಾಶ್ಲೋಕದಲ್ಲೂ, ಪ್ರಣಿಪತ್ಯಾಭಿವಾದ್ಯ ಚ ಎಂಬಲ್ಲಿಯೂ (ವಿ. ಪು. ಪ್ರಥಮಶ್ಲೋಕ) ಹೇಳಿರುವ ಹಾಗೆ ಪ್ರದಕ್ಷಿಣ ನಮಸ್ಕಾರ ಅಭಿವಾದನ ಶುಶ್ರೂಷಾದಿಗಳ ಮೂಲಕ ನಮ್ರನಾಗಿ, **ಸಾವಧಾನನಾಯಿರುಕ್ಕುಮ್ ಅವಸ್ಥೈಯಿಲೆ** - ಉಪದೇಶವನ್ನು ತುಂಬಾ ಆದರದಿಂದ ಆಲಿಸುವವನಾಗಿರುವ ಅವಸ್ಥೆಯಲ್ಲಿ, ಶಿಷ್ಯನಿರಬೇಕೆಂದು ಹೇಳಿದರು, ಉಪದೇಶಿಸುವ ಆಚಾರ್ಯನು ಹೇಗಿರಬೇಕೆಂದರೆ ಹೇಳುತ್ತಾರೆ:—**ಖ್ಯಾತಿ ಲಾಭ ಪೂಜಾ ನಿರಪೇಕ್ಷನಾಯ್** - ಅನೇಕ ಶಿಷ್ಯರಿಗೆ ಜ್ಞಾನೋಪದೇಶಕನು ತಾನು, ಎಂಬ ಯಶಸ್ಸಿನಲ್ಲೂ, ಧನ ವಸನ ಗೃಹಾರಾಮಾದಿಗಳ ಲಾಭದಲ್ಲೂ, ಶಿಷ್ಯರು ನಾನಾ ವಿಧವಾದ ಶುಶ್ರೂಷೆ ಮಾಡಬೇಕೆಂಬುದರಲ್ಲೂ, ಆಶೆ ಇಲ್ಲದವನಾಗಿ, **ಕಾರುಣ್ಯ ಪರತಂತ್ರ**

**ಮುದಲಾಗ ಉಪದೇಶ ಪರಂಪರ್ಯಯಾಲೇ ವನ್ದ ತತ್ವಹಿತಙ್ಗಳ್ಕ್ಕು ಅನಪೇಕ್ಷಿತ ವಿಸ್ತರಮುಮ್ ಅಪೇಕ್ಷಿತ ಸಙ್ಕ್ಷೇಪಮುಮ್ ಇಲ್ಲಾದಪಡಿ (೧)"ಸರ್ವೇಷಾಮೇವ ಲೋಕಾನಾಂ ಪಿತಾ ಮಾತಾಚ ಮಾಧವಃ। ಗಚ್ಛಧ್ವ**

---

ನಾನ - "ದೇಶಿಕೋಮೇ ದಯಾಳುಃ" ಎಂದು ಹೇಳಲು, ಯೋಗ್ಯನಾಗಿ ಶಿಷ್ಯನಲ್ಲಿ ಪರಮ ಕರುಣೆಗೆ ಕಟ್ಟುಬಿದ್ದವನಾದ, ಸದಾಚಾರ್ಯ - ಶಾಸ್ತ್ರ ಪಾರಮಾರ್ಥ್ಯವನ್ನು ಚನ್ನಾಗಿ ತಿಳಿದು ಅನುಷ್ಠಿಸತಕ್ಕದನ್ನು ಅನುಷ್ಠಿಸುವನಾಗಿ, ನಿರ್ಭಯನಾಗಿ ಉಪದೇಶಿಸುವ ಆಚಾರ್ಯನು, ಇದು ಸತಿಸಪ್ತಮಿಯು, ಮುಂದೆ ಉಪದೇಶಿಕ್ಕ ಎಂಬದರಿಂದ ಕ್ರಿಯೆಯು ಬೋಧಿತವು; ಸರ್ವರುಕ್ಕು ಪ್ರಥಮಾಚಾರ್ಯನಾನ ಸರ್ವೇಶ್ವರರ್ ಮುದಲಾಗ ಉಪದೇಶ ಪರಂಪರ್ಯಯಾಲೇ ವನ್ದ-ಎಲ್ಲರಿಗೂ ಪ್ರಥಮ ಗುರು, ಆದಿ ಗುರುವಾದ ಸರ್ವೇಶ್ವರನೇ ಮೊದಲಾದವರುಗಳ ಉಪದೇಶ ಪರಂಪರೆಯಿಂದ ಕ್ರಮವಾಗಿ ಬಂದ, ತತ್ವಹಿತಙ್ಗಳ್ಕ್ಕು-ತತ್ವ ಯಾವುದು, ಹಿತವಾದ ಉಪಾಯವು ಯಾವುದು ಎಂಬುದನ್ನೂ, ಪುರುಷಾರ್ಥವು ಹೇಳಲ್ಪಡದೇ ಇದ್ದರೂ, ಯಾವಾಗ ತತ್ವಹಿತಗಳನ್ನು ತಿಳಿದು ಉಪಾಯಾನುಷ್ಠಾನವನ್ನು ಮಾಡಿದನೋ ಆವಾಗ ಪುರುಷಾರ್ಥವು ಸ್ವತಸ್ಸಿದ್ಧವಾದುದರಿಂದ, ಪುರುಷಾರ್ಥವೂ ಹೇಳಲ್ಪಟ್ಟಿತು, ಅನಪೇಕ್ಷಿತ ವಿಸ್ತರಮುಮ್ - ಇಷ್ಟವಿಲ್ಲದಿರುವ ಹೆಚ್ಚು ವಿಸ್ತರವೂ, ಅಪೇಕ್ಷಿತ ಸಙ್ಕ್ಷೇಪಮುಮ್ - ಇಷ್ಟವಾದುದು ಎಂದು ತುಂಬಾ ಸಂಗ್ರಹವಾಗಿಯೂ, ಇಲ್ಲಾದಪಡಿ - ಇಲ್ಲದ ಹಾಗೆ, "ಸರ್ವೇಷಾಮೇವ ಲೋಕಾನಾಂ" ಎಙ್ಗಿರ ಕಟ್ಟಳೈಗಳಿಲೆ ಎಂಬ ಶ್ಲೋಕದ ಕ್ರಮಗಳಲ್ಲಿ, ಉಪದೇಶಿಕ್ಕ - ಹಿಂದೆ ಆಚಾರ್ಯನು ಎಂದಿದೆ, ಆಚಾರ್ಯನು ಉಪದೇಶಿಸಲಾಗಿ, ಪೆರುಗೈ - ಆ ಉಪದೇಶವನ್ನು ಹೊಂದುವಿಕೆಯು. ಹೀಗೆ ಸದಾಚಾರ್ಯನಿಂದ ಉಪದೇಶ ಹೊಂದೋಣವೇ ಸತ್ಸಂಪ್ರದಾಯ ಸಿದ್ಧಿಯು, ಎಂದು ಹೇಳಲ್ಪಟ್ಟಿತು ಈ ಶ್ಲೋಕಾರ್ಥವೇನೆಂದರೆ.—ಇದು ಮಾರ್ಕಂಡೇಯರು ಯುಧಿಷ್ಠಿರಾದಿಗಳನ್ನು ಕುರಿತು ಹೇಳುವ ಉಪದೇಶವು. ಈ ಚರಮ ಶ್ಲೋಕದಲ್ಲಿ ತತ್ವ ಹಿತ ಪುರುಷಾರ್ಥಗಳು ಮೂರೂ ಹೇಳಲ್ಪಟ್ಟವೆ ಹೇಗೆಂದರೆ :— ಸರ್ವೇಷಾಂ ಲೋಕಾನಾಂ - ಸಮಸ್ತ ಲೋಕಗಳ ಜನರಿಗೂ, ಸರ್ವ ವಿಧವಾಗಿ ರಕ್ಷಿಸುವ, ಪಿತಾ - ಹಿತಪ್ರವರ್ತನೆಯನ್ನುಂಟುಮಾಡುವ ತಂದೆಯೂ, ಮಾತಾಚ - ಸಮಸ್ತ ಭೋಗಗಳನ್ನೂ ಕೊಟ್ಟು ರಕ್ಷಿಸುವ ತಾಯಿಯೂ ಕೂಡ, ಪಿತಾ

---

(೧) ಭಾರತ, ವನ. ೧೯೨-೫೬.

ಮೇನಂ ಶರಣಂ ಶರಣ್ಯಂ ಪುರುಷರ್ಷಭಾಃ” ಎನ್ಱ ಕಟ್ಟಳೈಗಳಿಲಿ ಉಪದೇಶಿಕ್ಕೈ, ಪೆರುಗೈ.

ಮಾತಾ ಚ ಮಾಧವ ಏವ – ಲಕ್ಷ್ಮೀಪತಿಯೇ ಪರ, ಇದರಿಂದ ತತ್ವಸ್ವರೂಪವು ತಿಳಿಸಲ್ಪಟ್ಟಿತು. ಹೇ ಪುರುಷರ್ಷಭಾಃ - ಓ ಪುರುಷ ಶ್ರೇಷ್ಠರುಗಳಿರಾ, ಏನಂ - ಈ ಶ್ರಿಯಃಪತಿಯನ್ನು, ಶರಣಂ - ಉಪಾಯವನ್ನಾಗಿ, ಗಚ್ಛಧ್ವಂ – ಹೊಂದಿರಿ, ಎಂದರೆ ಆತನ ಪಾದದಲ್ಲಿ ಶರಣಾಗತಿಯನ್ನು ಮಾಡಿರಿ, ಇದರಿಂದ ಹಿತವು ಉಪದೇಶಿಸಲ್ಪಟ್ಟಿತು, ಏನಂ - ಎಂತವನನ್ನು ಶರಣು ಹೊಂದುವದು ಎಂದರೆ ಶರಣ್ಯಂ - ಎಲ್ಲರಿಗೂ ರಕ್ಷಕನಾಗಿ ಪುರುಷಾರ್ಥದಾಯಕನನ್ನು ಎಂದು ಮಹರ್ಷಿಯು ಉಪದೇಶಿಸಿದರು ಶರಣ್ಯಂ ಎಂಬುದರಿಂದ ಪುರುಷಾರ್ಥವು ಶಿಕ್ಷಿಸಲ್ಪಟ್ಟಿತು. ಈ ಶ್ಲೋಕಾಭಿಪ್ರಾಯವನ್ನೇ ಶ್ರೀ ದೇಶಿಕರವರೇ ಹಿಂದೆ ತತ್ವತ್ರಯಾಧಿಕಾರದಲ್ಲಿ “ಶ್ರೀಮಾನ್ನಾರಾಯಣೋ ನಃ ಪತಿರಖಿಲತನುರ್ಮುಕ್ತಿದೋ ಮುಕ್ತಭೋಗ್ಯಃ” ಎಂಬುದರಿಂದ ವ್ಯಕ್ತಪಡಿಸಿರುತ್ತಾರೆ ಇಲ್ಲಿಯೂ ತತ್ವಹಿತಪುರುಷಾರ್ಥಗಳು ಸಂಗ್ರಹಿಸಲ್ಪಟ್ಟವು ಇದರಿಂದ ಶ್ರಿಯಃಪತಿಯೇ ಪರತತ್ವವು, ಆತನಲ್ಲಿ ಮಾಡುವ ಶರಣಾಗತಿಯೇ ಹಿತವಾದ ಉಪಾಯಾನುಷ್ಠಾನವು, ಆತನೇ ಪ್ರಾಪ್ಯವು, ಇದೇ ಪುರುಷಾರ್ಥವು, ಹೀಗೆ ತತ್ವ ಹಿತ ಪುರುಷಾರ್ಥಗಳು ಮೂರೂ ಇಲ್ಲಿ ಹೇಳಲ್ಪಟ್ಟವು, ಇಂತಹ ಸಂಗ್ರಹ ಶ್ಲೋಕವನ್ನೇ ಸದಾಚಾರ್ಯನು ಮೂಲಾಧಾರವಾಗಿಟ್ಟುಕೊಂಡು ಮಾರ್ಕಂಡೇಯರು ಯುಧಿಷ್ಠಿರಾದಿಗಳಿಗೆ ಉಪದೇಶ ಮಾಡಿದ ಹಾಗೆ ತುಂಬಾ ವಿಸ್ತರವೂ ತುಂಬಾ ಸಂಕೋಚವೂ ಇಲ್ಲದ ಹಾಗೆ ಶಿಷ್ಯನಿಗೆ ಉಪದೇಶಿಸತಕ್ಕದ್ದು ಇದನ್ನು ಶಿಷ್ಯನು ಸತ್ತ್ವಪ್ರಚುರನಾಗಿದ್ದುಕೊಂಡು, ಪ್ರದಕ್ಷಿಣ ನಮಸ್ಕಾರ ಶುಶ್ರೂಷಾದಿಗಳಿಂದ ಪ್ರಾರ್ಥಿಸಿ, ಆತ್ಮಾದರದಿಂದ ಕೇಳಿ ತಿಳಿದುಕೊಳ್ಳುವುದೇ ಸತ್ಸಂಪ್ರದಾಯವೆಂದು ಹೇಳಿದರು ಸ್ವಾಮಿಯವರು ಸಂಗ್ರಹವಾಗಿ ಆಚಾರ್ಯನು ಎಂತವನಾಗಿರಬೇಕೆಂಬುದನ್ನು ನ್ಯಾಸವಿಂಶತಿಯ ಮೊದಲಿನ ಎರಡು ಶ್ಲೋಕಗಳಿಂದ ಉಪದೇಶಿಸಿರುತ್ತಾರೆ ಇವೆರಡು ಶ್ಲೋಕಗಳೂ ಹಿಂದೆ ಉದಾಹರಿಸಲ್ಪಟ್ಟಿವೆ ಮೊದಲನೆಯ ಶ್ಲೋಕವನ್ನು ಗುರುಪರಂಪರಾ ಸಾರದ ೧೧೯ನೆಯ ಪುಟದಲ್ಲೂ, ಎರಡನೆಯ ಶ್ಲೋಕವನ್ನು ೪೬ನೆಯ ಪುಟದಲ್ಲೂ ಕಾಣಬಹುದು. ಸರ್ವರಕ್ಷ್ಯಮಪ್ ಪ್ರಥಮಾಚಾರ್ಯ ಸರ್ವೇಶ್ವರರ್ ಎಂಬುದಕ್ಕೆ ೬೬ನೆಯ ಪುಟವನ್ನು ಪರಾಂಬರಿಸಿ. ಸಾಧಾರಣವಾಗಿ ಜನಗಳಿಗೆ ವಿಸ್ತರವಾಗಿ ಉಪದೇಶವು ಅನಪೇಕ್ಷಿತವು, ಸಂಗ್ರಹವಾಗಿ

ಹೇಳುವದು ಅಪೇಕ್ಷಿತವು. ಇವೆರಡೂ ಸರಿಯಿಲ್ಲವಾದುದರಿಂದ, ಇವೆರಡೂ ಇಲ್ಲಾದಪಡಿ ಉಪದೇಶಿಕ್ಕ, ಪೆರುಗ್ಗೆ ಎಂದು ಹೇಳಿರುತ್ತಾರೆ.

ಶ್ರೀ ನಿಗಮಾಂತ ಮಹಾದೇಶಿಕರವರು ಈ ಸತ್ಸಂಪ್ರದಾಯ ಸಿದ್ಧಿಯು ಅತ್ಯಾವಶ್ಯಕವೆಂದು ಭಾವಿಸಿ ತಾವು ಬರೆದ ದ್ವಾತ್ರಿಂಶದ್ರಹಸ್ಯಗಳಲ್ಲಿ ಪ್ರಥಮ ರಹಸ್ಯವಾಗಿ ಇದನ್ನು "ಸಂಪ್ರದಾಯ ಪರಿಶುದ್ಧಿ" ಎಂಬ ಹೆಸರಿನಿಂದ ಅನುಗ್ರಹಿಸಿರುತ್ತಾರೆ. ಅಲ್ಲಿ ಮುಖ್ಯವಾಗಿ ಹೇಳಿರುವದೇನೆಂದರೆ:—ಅಧ್ಯಾತ್ಮ ಶಾಸ್ತ್ರಾರ್ಥ ನಿರ್ಣಯಕ್ಕೆ ಸದಾಚಾರ್ಯ ಸಂಪ್ರದಾಯವೇ ಮುಖ್ಯವೆಂದೂ, ಅಂತಹ ನಿರ್ಣಯಶಕ್ತಿಯು ಎಲ್ಲರಿಗೂ ಇಲ್ಲವಾದುದರಿಂದ "ಉಪದೇಶಾದ್ಧರಿಂ ಬುಧ್ಯಾ" ಎಂದು ಹೇಳಿರುವ ಹಾಗೆ ಸದಾಚಾರ್ಯ ಸಂಪ್ರದಾಯ ಮೂಲಕವಾದ ಉಪದೇಶವೇ ಶಾಸ್ತ್ರಾರ್ಥ ನಿರ್ಣಾಯಕವು. ಇಂತಹ ಸಂಪ್ರದಾಯ ಸಂಸ್ಕಾರರಹಿತವಾದ ಶಾಸ್ತ್ರಜ್ಞಾನದಿಂದ ಯಥಾರ್ಥನಿರ್ಣಯವು ತುಂಬಾ ದುಷ್ಕರವು. ಇಂತಹ ಸಂಸ್ಕಾರ ಜ್ಞಾನಾಭಾವವು ಸರಿಯಾದ ಮಾರ್ಗದಲ್ಲಿ ಪ್ರವರ್ತಿಸುವಹಾಗೆ ಮಾಡದೆ ವಿಪರೀತ ಪ್ರವೃತ್ತಿಗೂ ಹೇತುವಾಗುತ್ತದೆ. ಅನ್ಯಾದೃಶವಾದ ಶಾಸ್ತ್ರಪರಿಚಯವುಳ್ಳವರೂ ಕೂಡ ಸತ್ಸಂಪ್ರದಾಯ ಸಿದ್ಧಿಯಿಲ್ಲದೆ ಇರುವುದರಿಂದ ಆ "ಶಾಸ್ತ್ರವಿಶಕ್ತತ್ವ"ವು "ಶ್ರಮ ಏವಹಿ ಕೇವಲಂ" (ರಾ ಸುಂ. ೫೨. ೮) ಎಂದು ಹೇಳಿರುವ ಹಾಗೆ ಕಾರ್ಯಕಾರಿಯಾಗದೆ ನಿರರ್ಥಕವಾದುದಾಗುತ್ತದೆ. "ತಥಾಪಿ ವಿಪರೀತಾತೇ ಬುದ್ಧಿರಾಚಾರವರ್ಜಿತಾ" ಎಂದು ಹೇಳಿರುವ ಹಾಗೆ, ಸತಾಂ ಅನುವರ್ತನವಿಲ್ಲದುದರಿಂದ, ಬುದ್ಧಿ ವಿಪರೀತವಾಗಿ ಪರಿಣಮಿಸುತ್ತದೆ. ಇದಕ್ಕೆ ನಿದರ್ಶನವಾಗಿ ಅಂತವರಲ್ಲೊಬ್ಬರು ರಾಮಾಯಣವನ್ನೆಲ್ಲಾ ಓದಿ, ರಾಮ, ಸೀತಾ, ಲಕ್ಷ್ಮಣ, ಭರತ, ಶತ್ರುಘ್ನ, ಹಾಗೆಯೇ ರಾವಣ, ಕುಂಭಕರ್ಣ, ತಾಟಕಿ, ಶೂರ್ಪನಖಾ ಮೊದಲಾದ ಪಾತ್ರಗಳೆಲ್ಲಾ ಕವಿನಿರ್ಮಿತವಾದ ಧರ್ಮಾಧರ್ಮಗಳನ್ನು ಬೋಧಿಸುವವೆಂದೂ, ಅದು ವಾಸ್ತವವಾದ ಚರಿತ್ರೆಯಲ್ಲವೆಂದೂ ಹೀಗೆ ಅಸಂಬದ್ಧವಾದ ಪ್ರಲಾಪವನ್ನು ಮಾಡುತ್ತಾ ಅಜ್ಞಾನಿಗಳಿಗೆ ಇನ್ನೂ ಭ್ರಮೆಯನ್ನುಂಟು ಮಾಡಿರುವದನ್ನು ಕಂಡಿರುವೆನು. ಅಂತವರಿಗೆ ಸತ್ಸಂಪ್ರದಾಯದ ಮೂಲಕ ಉಪದೇಶವು ದೊರತಿದ್ದರೆ ಅವರು ಹಾಗೆ ಮಾಡುತ್ತಿರಲಿಲ್ಲವು. ಈ ಸಂದರ್ಭದಲ್ಲಿ ಮುಖ್ಯವಾಗಿ ನಾವು ಗಮನಿಸತಕ್ಕ ಇನ್ನೊಂದು ವಿಷಯವೂ ಉಂಟು. ಶಾಸ್ತ್ರಪರಿಚಯಕ್ಕೆ ಸತ್ಸಂಪ್ರದಾಯವು ಹೇಗೆ ಮುಖ್ಯವೋ, ಹಾಗೆಯೇ ಸತ್ಸಂಪ್ರದಾಯಕ್ಕೂ ಸಂಪೂರ್ಣಶಾಸ್ತ್ರಪರಿಚಯವು ಅತ್ಯಾವಶ್ಯಕವು. ಸತ್ಸಂಪ್ರದಾಯವುಂಟೆಂದು ಶಾಸ್ತ್ರಪರಿಚಯವಿಲ್ಲದವರನ್ನು ಆಚಾರ್ಯರನ್ನಾಗಿ ವರಿಸಕೂಡದು. ಆದುದರಿಂದ ಶಾಸ್ತ್ರಪರಿಚಯವು ಚನ್ನಾಗಿ ಉಳ್ಳ ಸತ್ಸಂಪ್ರದಾಯವೇ ಉಪಜೀವ್ಯವು. ಅಂತಹ

## ಸ್ಥಿರೀಕರಣಭಾಗಸ್ಯ ಅವಶ್ಯಕತ್ವಕಥನಮ್

ಬಹುಕ್ಲೇಶಮಾಯ್ ಬುದ್ಧಿಚಲನ ಸಂಭಾವನೈಯುಂಡಾನ ಶಾಸ್ತ್ರಪರಿಶ್ರಮತ್ತಿಲ್ ಅನಧಿಕೃತರುಮಾಯ್ ಪರಮಾಸ್ತಿಕರುಮಾಯಿರುಪ್ಪಾರ್ಕ್ಕು ಇವ್ವುಪದೇಶಮೇ ಪ್ರಧಾನಮ್. ಮತ್ತುಳಾರ್ಕ್ಕುತ್ತಾಙ್ಗಳ್ ತೆಳಿಕ್ಕು

---

ಸಂಪ್ರದಾಯ ಶುದ್ಧಿಯು, "ಶ್ರದ್ಧಾತವ್ಯಾ ಚಾತಕನ್ಯಾಯನಿಷ್ಠೈಃ" ಎಂದು, ಶ್ರದ್ಧೆಯಿಂದ ಏಕಾನ್ತಿಗಳು ಆದರಿಸತಕ್ಕದ್ದೆಂದು ಹೇಳಿ, ಅಂತಹ ದೇಶಿಕೇಂದ್ರರ ಪ್ರಸಾದದಿಂದ "ಪ್ರಪನ್ನಃ ಪರಮಾತ್ಮಾನಂ ಪ್ರಾಪ್ನೋತಿ ಪರಮಂಪದಂ" ಎಂದು ಹಿತೋಪದೇಶವನ್ನು ಮಾಡಿರುತ್ತಾರೆ

### ಸ್ಥಿರೀಕರಣ ಭಾಗದ ಆವಶ್ಯಕತೆಯ ಸಮರ್ಥನವು.

ಬಹು ಕ್ಲೇಶಮಾಯ್ - ಮನಸ್ಸಿಗೆ ತುಂಬಾ ತೊಂದರೆಯನ್ನುಂಟು ಮಾಡುವುದಾಗಿಯೂ, ಬುದ್ಧಿಚಲನ ಸಂಭಾವನೈಯುಂಡಾನ - ಅನೇಕ ಸಂದೇಹಗಳುಂಟಾಗುವದರ ಮೂಲಕ ಬುದ್ಧಿಗೆ ಚಾಂಚಲ್ಯವನ್ನುಂಟುಮಾಡುವ, ಶಾಸ್ತ್ರಪರಿಶ್ರಮತ್ತಿಲ್ - ಶಾಸ್ತ್ರಜ್ಞಾನ ಹೊಂದುವುದರಲ್ಲಿ, ಅನಧಿಕೃತರುಮಾಯ್ - ಅಧಿಕಾರವನ್ನು ಸಂಪಾದಿಸಿಕೊಳ್ಳದಿರುವ, ಪರಮಾಸ್ತಿಕರುಮಾಯಿರುಪ್ಪಾರ್ಕು - ನಾಸ್ತಿಕರಲ್ಲದೆ ದೇವರು ಒಬ್ಬನುಂಟೆಂದು ಹೇಳುವ ಶಾಸ್ತ್ರಪ್ರಾಮಾಣ್ಯದಲ್ಲಿ ಮಾತ್ರ ವಿಶ್ವಾಸವಿದ್ದು ಶಾಸ್ತ್ರಾಭ್ಯಾಸಕ್ಕೆ ಸೋಮಾರಿಗಳಾದವರಿಗೆ ಇವ್ವುಪದೇಶಮೇ - ಇಂತಹ ಹಿಂದೆ ಹೇಳಿದ ಉಪದೇಶವೇ, ಪ್ರಧಾನಮ್ - ಮುಖ್ಯವಾದುದು ಕೆಲವರು ತಾವಾಗಿಯೇ ಶಾಸ್ತ್ರಾಭ್ಯಾಸವನ್ನು ಮಾಡಲು ಶಕ್ತಿಯಿಲ್ಲದೆಯೋ ಅಥವಾ ಸಮಯವಿಲ್ಲದೆಯೋ ಕುಶಲತೆಯಿಲ್ಲದೆಯೋ ಅನಧಿಕಾರಿಗಳಾಗಿರಬಹುದು. ಅಂತವರುಗಳಿಗೆ ಸ್ವತಃ ಶಾಸ್ತ್ರಜ್ಞಾನವು "ಶಾಸ್ತ್ರಜ್ಞಾನಂ ಬಹುಕ್ಲೇಶಂ ಬುದ್ಧೇಶ್ಚಲನ ಕಾರಣಂ। ಉಪದೇಶಾದ್ಧರಿಂ ಬುದ್ಧ್ವಾ ವಿರಮೇತ್ಸರ್ವಕರ್ಮಸು" ಎಂದು ಹೇಳಿರುವ ಹಾಗೆ ಬಹು ಕ್ಲೇಶಕರವಾಗಿಯೂ ಬುದ್ಧಿ ಚಾಂಚಲ್ಯವನ್ನುಂಟುಮಾಡುವದಾಗಿಯೂ ಇರುತ್ತದೆಯಾದುದರಿಂದ, ಅಂತವರಿಗೆ ಹಿಂದಿನ ಉಪದೇಶವೇ ಸಾಕು ಎಂಬ ಭಾವವು. ಪ್ರಧಾನವೆಂದು ಹೇಳಿದುದರಿಂದ, ಅಪ್ರಧಾನವಾಗಿ ತಿಳಿದಷ್ಟು ಮಟ್ಟಿಗೆ ಈ ಸ್ಥಿರೀಕರಣದ ಭಾಗದ ಉಪದೇಶವನ್ನು ಮಾಡಿದರೂ ಮಾಡಬಹುದೆಂಬ ಭಾವವೂ ತೋರಿಬರುತ್ತದೆ. ಈ ಮುಮುಕ್ಷುಗಳು ಎರಡು ವಿಧವೆಂದು ವಿಕಲ್ಪಿಸಲ್ಪಟ್ಟಿತು. (೧) ತಾವಾಗಿಯೇ ಶಾಸ್ತ್ರಪರಿ

**ಕ್ಕಾಗವುಮ್, ಕುತರ್ಕಜಾಲೈಃ ಕಲಙ್ಗಿನಾರ್ಕ್ಕು ತೆಳಿವಿಕ್ಕೈಕ್ಕಾಗವುಮ್, ಸಮೀಚೀನ ಯುಕ್ತಿಗಳೋಡೆ ಕೇಳ್ಕ್ಕ ಪ್ರಾಪ್ತಮ್.**

---

ಚಯ ಮಾಡಿಕೊಳ್ಳಲು ಶಕ್ತಿಯಿಲ್ಲದವರು. (೨) ಶಕ್ತಿಯುಳ್ಳವರು. ಅಥವಾ (೧) ಮಂದಬುದ್ಧಿಯುಳ್ಳವರು, ಮತ್ತು (೨) ಸೂಕ್ಷ್ಮಬುದ್ಧಿಯುಳ್ಳವರು. ಶಾಸ್ತ್ರ ಪಂಚಯ ತಾವಾಗಿಯೇ ಮಾಡಿಕೊಳ್ಳದವರಿಗೇನೋ ಇಷ್ಟೇ ಸಾಕೆಂದು ಹೇಳಲ್ಪಟ್ಟಿತು. ಶಾಸ್ತ್ರಪಂಚಯ ಮಾಡಿಕೊಳ್ಳತಕ್ಕವರಿಗೆ ಇದು ಅನಾವಶ್ಯಕವಲ್ಲವೋ, ಅವರೇ, ತಾವಾಗಿಯೇ ಶಾಸ್ತ್ರದಿಂದ ಗ್ರಹಿಸಬಹುದಲ್ಲಾ ಎಂದರೆ, ಹಾಗಲ್ಲವು. ಏಕೆಂದರೆ ಇಂತಹ ವಾದಗಳನ್ನು ತಾವೂ ಗ್ರಹಿಸಿ, ಕುತರ್ಕಗಳಿಂದ ಸರಿಯಾದಭಿಪ್ರಾಯಗಳಿಲ್ಲದೆ ಶಂಕಾವಿಷ್ಟರಾದವರನ್ನು ಸಮೀಚೀನ ತರ್ಕಗಳಿಂದ ತಿದ್ದುವುದೂ ಅವಶ್ಯಕವೆಂದು ಹೇಳುತ್ತಾರೆ.

**ಮತ್ತುಳ್ಳಾರ್ಕ್ಕು** - ಇನ್ನು ಮಿಕ್ಕವರಿಗೆ ಎಂದರೆ ಶಾಸ್ತ್ರಪಂಚಯ ಶಕ್ತಿಯುಳ್ಳವರಿಗೆ, **ತಾಙ್ಗಳ್ ತೆಳಿಗೈಕ್ಕಾಗವುಮ್** - ತಾವೂ ತಿಳಿದುಕೊಳ್ಳುವುದಕ್ಕಾಗಿಯೂ, ಹಾಗೆ ತಿಳಿದುಕೊಂಡ ನಂತರ, **ಕುತರ್ಕಜಾಲೈ** - ಶಾಸ್ತ್ರವಿರುದ್ಧವಾದ ಬರೀ ತರ್ಕಗಳಿಂದ, **ಕಲಙ್ಗಿನಾರ್ಕ್ಕು** - ಬುದ್ಧಿಭ್ರಮೆ ಅಥವಾ ಬುದ್ಧಿಚಾಂಚಲ್ಯವುಂಟಾಗುವವರಿಗೆ, **ತೆಳಿವಿಕ್ಕೈಕ್ಕಾಗವುಮ್** - ಅಂತಹ ಸಂಶಯಗಳ ನಿವೃತ್ತಿಗಾಗಿ ಸರಿಯಾದ ಅಭಿಪ್ರಾಯಗಳನ್ನು ತಿಳಿಸುವದಕ್ಕಾಗಿಯೂ, **ಸಮೀಚೀನ ಯುಕ್ತಿಗಳೋಡು**-ಶಾಸ್ತ್ರಮರ್ಯಾದೆಯನ್ನುಲ್ಲಂಘಿಸದ ಸತ್ತರ್ಕಗಳ ಮೂಲಕ, **ಕೇಳ್ಕ್ಕ ಪ್ರಾಪ್ತಮ್** - ಈ ಉಪದೇಶವನ್ನು ಕೇಳುವದು ಉಚಿತವು ತಾವೇ ಸ್ವತಃ ಶಾಸ್ತ್ರಪಂಚಯ ಹೊಂದುವ ಯೋಗ್ಯತೆಯುಳ್ಳವರೂ ಕೂಡ, ಏನು ಹೇಳಿರುತ್ತಾರೆ ಎಂದು ತಾವೇ ಗ್ರಹಿಸಿ, ಅದು ಸತ್ತರ್ಕಗಳಿಂದ ಯುಕ್ತವಾದುದಾಗಿದ್ದ ಪಕ್ಷದಲ್ಲಿ ಶಾಸ್ತ್ರಪ್ರಮಾಣಗಳನ್ನುಲ್ಲಂಘಿಸಿದ ಬರೀ ಶುಷ್ಕತರ್ಕಗಳಿಂದ ಸರಿಯಾದಭಿಪ್ರಾಯಗಳಿಲ್ಲದವರನ್ನು ತಿದ್ದಲು ಸಹಕಾರಿಯಾಗುವದರಿಂದ ಅವರೂ ಕೂಡ ಈ ಸ್ಥಿರೀಕರಣ ಭಾಗವನ್ನು ಪರಿಗ್ರಹಿಸತಕ್ಕದ್ದಾಗಿರುತ್ತದೆ ಎಂದು ಹೇಳುತ್ತಾರೆ. ಇದರಿಂದ ತಾವು ಮುಂದೆ ಹೇಳುವ ವಾದಗಳೆಲ್ಲಾ ಶಾಸ್ತ್ರಪ್ರಮಾಣಗಳಿಗೆ ವಿರೋಧವಿಲ್ಲದ ತರ್ಕಗಳಾದುದರಿಂದ ಸತ್ತರ್ಕಗಳೆನಿಸಿ ಉಪಾದೇಯಗಳೆಂದೂ, ಅದಕ್ಕೆ ವಿರುದ್ಧವಾದುವು ಶಾಸ್ತ್ರಪ್ರಮಾಣಗಳಿಗೆ ವಿರುದ್ಧವಾದುದರಿಂದ ಕುತರ್ಕಗಳಾಗಿ ಪರಿಗ್ರಾಹ್ಯಗಳಲ್ಲವೆಂದೂ, ಹೇಳಲು ಹೊರಟು, ಅದಕ್ಕೆ ಮನುಸ್ಮೃತಿಯ ಪ್ರಮಾಣವನ್ನು ತೋರಿಸುತ್ತಾರೆ.

## ಸತ್ತರ್ಕ ಕುತರ್ಕ ನಿರೂಪಣಮ್

(೧) "ಆರ್ಷಂ ಧರ್ಮೋಪದೇಶಂಚ ವೇದಶಾಸ್ತ್ರಾವಿರೋಧಿನಾ ।
ಯಸ್ತರ್ಕೇಣಾನುಸಂಧತ್ತೇ ಸಧರ್ಮಂ ವೇದ ನೇತರಃ" ಎಙ್ಗರಪಡಿಯೇ

---

## ಸತ್ತರ್ಕ ಕುತರ್ಕಗಳ ನಿರೂಪಣವು.

"ಆರ್ಷಂ - ಋಷಿ ಎಂದರೆ ವೇದವು, ಆದುದರಿಂದ ಆರ್ಷಂ ಎಂದರೆ ವೇದಾರ್ಥವನ್ನೂ, ಧರ್ಮೋಪದೇಶಂ ಚ - ಆ ವೇದೋಪಬೃಂಹಣಗಳಾದ ಸ್ಮೃತೀತಿಹಾಸಾದಿಗಳಲ್ಲಿರುವ ಮನ್ವಾದಿ ಧರ್ಮೋಪದೇಶಗಳನ್ನೂ ಕೂಡ, ಅಥವಾ ಆರ್ಷಂ ಎಂಬುದನ್ನು ಧರ್ಮೋಪದೇಶಂ ಎಂಬುದಕ್ಕೆ ವಿಶೇಷಣವಾಗಿ ಭಾವಿಸಿದರೆ, ಆಗ, ಆರ್ಷಂ - ಋಷಿಪ್ರೋಕ್ತವಾದ, ಧರ್ಮೋಪದೇಶಂ ಚ - ಮನ್ವಾದಿ ಧರ್ಮಶಾಸ್ತ್ರಗಳಲ್ಲಿ ಹೇಳಿರುವದನ್ನಾದರೋ, ಯಃ - ಯಾವನು, ವೇದಶಾಸ್ತ್ರಾವಿರೋಧಿನಾ - ವೇದಶಾಸ್ತ್ರಾಭಿಪ್ರಾಯಕ್ಕೆ ವಿರೋಧವಿಲ್ಲದಂತೆ, ತರ್ಕೇಣ - ಸಮೀಚೀನವಾದ ವಾದದಿಂದ, ಅನುಸಂಧತ್ತೇ - ಅನುಸಂಧಾನ ಮಾಡುತ್ತಾನೋ, ಸಃ - ಅವನು, ಧರ್ಮಂವೇದ ಧರ್ಮಸ್ವರೂಪವನ್ನು ತಿಳಿದವನು. ಶಾಸ್ತ್ರದ ವಿಧಿ ನಿಷೇಧಾಭಿಪ್ರಾಯಗಳನ್ನು ಚೆನ್ನಾಗಿ ತಿಳಿದವನು ಇತರಃ - ವೇದಶಾಸ್ತ್ರಕ್ಕೆ ವಿರೋಧವಿಲ್ಲದ ತರ್ಕದಿಂದ ಅನುಸಂಧಾನ ಮಾಡದವನು ನ - ಧರ್ಮವನ್ನು ತಿಳಿದವನಲ್ಲವು ಶ್ರುತಿಸ್ಮೃತೀತಿಹಾಸಗಳು ಪರಸ್ಪರ ವಿರುದ್ಧವಿಲ್ಲದೆ ಇರುವುವು ಶ್ರುತಿ ಪ್ರತಿಪಾದಿತಾರ್ಥಗಳೇ, ಸ್ಮೃತಿ ಇತಿಹಾಸ ಪುರಾಣಗಳಲ್ಲೂ ಉಪಪಾದಿತಗಳಾಗಿವೆ ಜ್ಞಾನಕ್ಕೆ ತರ್ಕ ಮೂಲಕ ಜಿಜ್ಞಾಸವು ಅವಶ್ಯಕವು ಹೀಗೆ ತರ್ಕ ಮಾಡುವಾಗ, ವಾದವು ವೇದಾರ್ಥಕ್ಕೆ ವಿರುದ್ಧವಾದುದಾಗಿರ ಕೂಡದು. ಇಂತಹ ತರ್ಕವು ಸತ್ತರ್ಕವು ಹೀಗಲ್ಲದೆ, ವೇದಾರ್ಥವನ್ನು ದೂರೀಕರಿಸಿ ಬರೀ ಶುಷ್ಕ ತರ್ಕದಿಂದಲೇ ತತ್ವ ನಿರ್ಧಾರಣೆ ಮಾಡಲು ಹೊರಡುವದು ಕುತರ್ಕವು. ಅಂತವನಿಗೆ "ಧರ್ಮಸ್ಯ ತತ್ತ್ವಂ ನಿಹಿತಂ ಗುಹಾಯಾಂ" ಧರ್ಮದ ತತ್ವವು ಗುಹೆಯಲ್ಲಿ ಅಡಗಿಕೊಂಡಿತು. ಆದುದರಿಂದಲೇ ಶ್ರೀ ವ್ಯಾಸರು "ತರ್ಕಾಪ್ರತಿಷ್ಠಾನಾತ್" ಎಂಬ ಸೂತ್ರದಲ್ಲಿ ಬರೀ ತರ್ಕದಿಂದ ಯಥಾರ್ಥಜ್ಞಾನವು ಪ್ರತಿಷ್ಠಿತವಾಗುವುದಿಲ್ಲವೆಂದು ಹೇಳಿರುತ್ತಾರೆ. ಕೆಲವು

---

(೧) ಮನುಸ್ಮೃತಿ ೧೨. ೧೦೬

**ಇವ್ವರ್ಥಂಗಳೈ ಸಮೀಚೀನ ತರ್ಕಙ್ಗಳಾಲೆ ತೆಳಿಯಾದವರ್ಗಳ್, (೧) "ಕಾಣಾದ ಶಾಕ್ಯಪಾಷಂಡ್ಯೈ ಸ್ತ್ರಯೀಧರ್ಮೋ ವಿಲೋಪಿತಃ" ಎಙ್ಗಿರ ಪಡಿಯೇ ಹೈತುಕರಾಯ್ ವೇದವಿರೋಧಿತತ್ತ್ವಙ್ಗಳೈ ಇಟ್ಟು ಪ್ರಾಮಾಣಿಕಾರ್ಥಙ್ಗಳೈ ಅಪಹರಿಪ್ಪರ್ಗಳ್.**

---

ಮಹರ್ಷಿಗಳು ಸ್ಮೃತಿ ಪುರಾಣಗಳ ಮೂಲಕ ಉಪದೇಶ ಮಾಡಿರುತ್ತಾರೆ. ಆದರೆ ವೇದಶಾಸ್ತ್ರ ವಿರೋಧಿನಾ ಮಾಡಲಿಲ್ಲವು. ವೇದಶಾಸ್ತ್ರಕ್ಕೆ ವಿರುದ್ಧವಾದುದರಿಂದ ಅನುಪಾದೇಯವು ಆ ಕಾರಣದಿಂದಲೇ ಪ್ರಜಾಪತಿಸ್ಮೃತಿಯು ಚತುರ್ಮುಖ ಬ್ರಹ್ಮಪ್ರೋಕ್ತವಾದರೂ ಉಪಾದೇಯವಲ್ಲವು ಕಾಪಿಲ ಸಾಂಖ್ಯತತ್ತ್ವವೂ ಕೂಡ ಗ್ರಾಹ್ಯವಲ್ಲವು ಬೃಹಸ್ಪತ್ಯಾಚಾರ್ಯರು ಅಸುರ ಮೋಹನಾರ್ಥವಾಗಿ ನಾಸ್ತಿಕವಾದವನ್ನು ಹೇಳಿದರು ಹಾಗೆಯೇ ತಾಮಸ ರಾಜಸ ಪುರಾಣಗಳೂ ಉಪಾದೇಯಗಳಲ್ಲವು ಎಙ್ಗಿರಪಡಿಯೇ - ಎಂದು ಹೇಳಿರುವ ಹಾಗೆ, **ಇವ್ವರ್ಥಙ್ಗಳೈ** - ಈ ಶ್ರುತಿ ಸ್ಮೃತಿಗಳಲ್ಲುಪಪಾದಿಸಿರುವ ಅಭಿಪ್ರಾಯಗಳನ್ನು, **ಸಮೀಚೀನ ತರ್ಕಙ್ಗಳಾಲೆ** - ಶಾಸ್ತ್ರವಿರುದ್ಧವಲ್ಲದ ಒಳ್ಳೇ ತರ್ಕಗಳಿಂದ, **ತೆಳಿಯಾದವರ್** - ತಿಳಿದುಕೊಳ್ಳದಿರುವವರು, "**ಕಾಣಾದ** - ತಾರ್ಕಿಕರು, **ಶಾಕ್ಯ** - ಬೌದ್ಧರು, **ಪಾಷಂಡ್ಯೈಃ** - ಪಾಷಂಡಿಗಳು ಇವರುಗಳಿಂದ, **ತ್ರಯೀಧರ್ಮಃ** - ವೇದಧರ್ಮವು, ವಿಲೋಪಿತಃ - ನಷ್ಟವನ್ನು ಹೊಂದಿತು" **ಎಙ್ಗಿರಪಡಿಯೇ** - ಎಂದು ಹೇಳಿರುವ ಹಾಗೆ, **ಹೈತುಕರಾಯ್** - ಶುಷ್ಕತಾರ್ಕಿಕರಾಗಿ, ಬರೀ ಹೇತುಗಳ ಮೂಲಕ ಅನುಮಾನ ತರ್ಕಗಳನ್ನು ಹೇಳುವವರಾಗಿ, ಹೇಗೆಂದರೆ, **ಜಗನ್ಮಿಥ್ಯಾ ದೃಶ್ಯತ್ವಾತ್** - ಕಣ್ಣಿಗೆ ಪ್ರತ್ಯಕ್ಷವಾಗಿ ಕಾಣುವ ಹೇತುವಿನಿಂದ ಜಗತ್ತು ಮಿಥ್ಯೆಯು, ಇಂತಹ ಅನುಮಾನ ತರ್ಕವನ್ನು ಹೇಳುವದು, **ವೇದ ವಿರೋಧ ತತ್ತ್ವಙ್ಗಳೈ ಯಿಟ್ಟು** - ವೇದ ವಿರುದ್ಧವಾದ ಅಭಿಪ್ರಾಯಗಳನ್ನು ಮುಂದುಮಾಡಿಕೊಂಡು **ಪ್ರಾಮಾಣಿಕಾರ್ಥಙ್ಗಳೈ** - ಶ್ರುತಿಪ್ರತಿಪಾದಿತಗಳಾದ ನಿಶ್ಚಯವಾದ ಅಭಿಪ್ರಾಯಗಳನ್ನು, **ಅಪಹರಿಪ್ಪರ್ಗಳ್** - ಅಪಹರಿಸುವರು. ಕಾಣಾದ, ಶಾಕ್ಯರ ಸಿದ್ಧಾನ್ತಗಳು ಹೇಗೆ ಅನುಪಾದೇಯವೆಂಬುದಕ್ಕೆ ಸಾರನಿಷ್ಕರ್ಷಾಧಿಕಾರವನ್ನು ಪರಾಂಬರಿಸಬಹುದು ಪಾಷಂಡಿಗಳು ಎಂತವರೆಂದರೆ:— ಭಾಗವತದಲ್ಲಿ,

---

(೧) ಅತ್ರಿಸ್ಮೃತಿ.

"ವಿಷ್ಣೋರನ್ಯಂ ಪರತ್ವೇನ ಚಿಂತಯಾನೋಹ್ಯಚೇತನಃ ।
ಸಪಾಷಂಡೀತು ವಿಜ್ಞೇಯಃ, ಸ್ಸರ್ವಕರ್ಮ ಬಹಿಷ್ಕೃತಃ ॥"
ವಿಷ್ಣುವಿಗಿಂತ ಬೇರೆಯಾದ ಪರವಸ್ತುವುಂಟೆಂದು ಯಾವನು ಚಿಂತಿಸುವನೋ ಅವನು ಅಚೇತನಕ್ಕೆ ಸಮಾನನು. ಆತನನ್ನು ಪಾಷಂಡಿ ಎಂದು ತಿಳಿಯತಕ್ಕದ್ದು ಸಮಸ್ತ ಕರ್ಮಗಳಿಗೂ ಬಾಹಿರನು. ಪಾದ್ಮಪುರಾಣದಲ್ಲಿ,
"ಯೇತು ಸಾಮಾನ್ಯಭಾವೇನ ಮನ್ಯಂತೇ ಪುರುಷೋತ್ತಮಂ ।
ತೇವೈ ಪಾಷಂಡಿನೋ ಜ್ಞೇಯಾ ಸ್ಸರ್ವಕರ್ಮ ಬಹಿಷ್ಕೃತಾಃ ।"
ಯಾರು ಪುರುಷೋತ್ತಮನನ್ನು ಸಾಮಾನ್ಯ ಚೇತನನೆಂಬ ಭಾವನೆಯಿಂದ ತಿಳಿಯುತ್ತಾರೋ ಅವರೇಗ ಪಾಷಂಡಿಗಳು, ಸಮಸ್ತ ಕರ್ಮಗಳಿಗೂ ಹೊರಗಿರುವವರಾದವರು ಎಂದು ತಿಳಿಯತಕ್ಕದ್ದು, "ನರಕಾರ್ಹಾ ನರಾಧಮಾಃ" ಎಂದು ನಾಲ್ಕನೆಯ ಪಾದದ ಪಾಠಾಂತರವು. ಪ್ರಾಜಾಪತ್ಯ ಸ್ಮೃತಿ ಮತ್ತು ಬೃಹನ್ನಾರದೀಯದಲ್ಲಿ,
ಯಸ್ಸ್ವಧರ್ಮಪರಿತ್ಯಾಗೀ ಪಾಷಂಡೀತ್ಯುಚ್ಯತೇ ಬುಧೈಃ ।
ತತ್ಸಂಸರ್ಗೀ ತತ್ಸಮ ಸ್ಸ್ಯಾತ್ತಾವುಭಾವಪಿ ಪಾಪಿನೌ ॥
ಯಾವನು ತನ್ನ ಸ್ವಂತ ಧರ್ಮವನ್ನು ತ್ಯಾಗ ಮಾಡುವನೋ ಆತನು ಪಂಡಿತರಿಂದ ಪಾಷಂಡಿ ಎಂದು ಹೇಳಲ್ಪಡುವನು ಆತನೊಂದಿಗೆ ಸಂಸರ್ಗವನ್ನು ಹೊಂದಿದವನೂ ಆತನಿಗೆ ಸಮನಾಗಿ ಪಾಷಂಡಿಯೇ ಆಗುವನು ಈ ಇಬ್ಬರೂ ಪಾಪಿಗಳೇ ವಾರಾಹಪುರಾಣದಲ್ಲಿ,
ಕುಬುದ್ಧಿ ರಚಿತಂ ಶಾಸ್ತ್ರಂ ಪಠಿತ್ವಾ ಯೇ ಕಲೌಯುಗೇ ।
ನ ಕುರ್ವಂತಿ ವಿನಿಂದಂತಿ ಯಜ್ಞಾನ್ ವರ್ಣಾಶ್ರಮೋಚಿತಾನ್ ॥
ತೇವೈ ಪಾಷಂಡಿನೋ ಜ್ಞೇಯಾ ಸ್ಸರ್ವಕರ್ಮಸುಗರ್ಹಿತಾಃ ।
ತೇಷಾಂ ಸಂಭಾಷಣಂ ಸ್ಪರ್ಶಂ ಪ್ರಮಾದೇನಾಪಿ ನಾಚರೇತ್ ॥
ಕಲಿಯುಗದಲ್ಲಿ ಕೆಟ್ಟ ಬುದ್ಧಿಯುಳ್ಳವರು ಬರೆದ ಶಾಸ್ತ್ರವನ್ನು ಪಠಿಸಿ, ಯಜ್ಞಗಳನ್ನೂ ವರ್ಣಾಶ್ರಮಗಳಿಗೆ ಯೋಗ್ಯವಾದ ಧರ್ಮಗಳನ್ನೂ ಆಚರಿಸದೆ, ಅವುಗಳನ್ನು ಯಾರು ಹೆಚ್ಚಾಗಿ ದೂಷಿಸುತ್ತಾರೋ, ಅವರು ಸಮಸ್ತ ಕರ್ಮಗಳಿಗೂ ಅಯೋಗ್ಯರು, ಅವರೇ ಪಾಷಂಡಿಗಳು ಎಂದು ತಿಳಿಯತಕ್ಕದ್ದು. ಇವರೊಂದಿಗೆ ಸಂಭಾಷಣವನ್ನಾಗಲಿ ಸಂಸರ್ಗವನ್ನಾಗಲಿ ಪ್ರಮಾದದಿಂದಲೂ ಕೂಡ ಮಾಡತಕ್ಕದ್ದಲ್ಲವು. ಆಶ್ವಮೇಧಿಕದಲ್ಲಿ,
ಕುಶೀಲೈಃ ಕೃತಶಾಸ್ತ್ರಾಣಿ ಯೇ ಪಠಿತ್ವಾ ನರಾಧಮಾಃ ।
ವಿಪ್ರಾನ್ನಿಂದಂತಿ ಯಜ್ಞಾಂಶ್ಚ ವೃಥಾಜೀವಂತಿ ತೇ ನರಾಃ ॥

## ಕೌತುಸ್ಕೃತ್ಯೈಃ ಪ್ರಾಪ್ತಾನರ್ಥಾನಾಹ.

ಇವ್ವಪಹಾರಮ್ ವಿಭೂತಿಯೈಯುಮ್ ವಿಭೂತಿಮಾನೈಯುಮ್ [illegible]ತ್ತ

ದುಷ್ಟಾಚಾರವುಳ್ಳವರು ಬರೆದ ಶಾಸ್ತ್ರಗಳನ್ನು ಪಠಿಸಿ, ಪಾಷಂಡಿಗಳಾದ [illegible] ಧಮ ಪುರುಷರು ಬ್ರಾಹ್ಮಣರನ್ನೂ ಯಜ್ಞಗಳನ್ನೂ ನಿಂದಿಸುವರು, ಅವರ [illegible]ವು ವ್ಯರ್ಥವು ವಿಷ್ಣುಪುರಾಣದಲ್ಲಿ, (೬.೧.೫೧)

"ಕಿಂ ದೇವೈಃ ಕಿಂದ್ವಿಜೈ ರ್ವೇದೈಃ ಕಿಂ ಶೌಚೇನಾಂಬು ಜನ್ಮನಾ।
ಇತ್ಯೇವಂ ವಿಪ್ರ ವಕ್ಷ್ಯಂತಿ ಪಾಷಂಡೋಪಹತಾ ಜನಾಃ ॥
ಕಲೌ ಜಗತ್ಪತಿಂ ವಿಷ್ಣುಂ ಸರ್ವಸ್ರಷ್ಟಾರ ಮೀಶ್ವರಂ।
ನಾರ್ಚಯಿಷ್ಯಂತಿ ಮೈತ್ರೇಯ ಪಾಷಂಡೋಪಹತಾ ಜನಾಃ ॥"

"ದೇವತೆಗಳಿಂದೇನು, ಬ್ರಾಹ್ಮಣರಿಂದೇನು, ವೇದಗಳಿಂದೇನು, ನೀರಿನಲ್ಲಿ ಸ್ನಾನದಿಂದೇನು, ಹೀಗೆಲ್ಲಾ ಓ ಬ್ರಾಹ್ಮಣವರ್ಯರಾದ ಮೈತ್ರೇಯರೇ ಪಾಷಂಡಿಗಳು ಆಕ್ಷೇಪಿಸುವರು. ಕಲಿಯುಗದಲ್ಲಿ ಜಗತ್ಪತಿಯಾಗಿ ಸರ್ವ ಸೃಷ್ಟಿಕ್ರಮವನ್ನೂ ನಡೆಸುವ ಸರ್ವನಿಯಾಮಕನಾಗಿ ಈಶ್ವರನೆನಿಸುವ ಶ್ರೀ ಮಹಾವಿಷ್ಣುವನ್ನು ಅರ್ಚಿಸುವದಿಲ್ಲವು" ಮಿತಾಕ್ಷರ ವಾಕ್ಯವು,

"ನರಶಿರಃ ಕಪಾಲಾದಿ ಶ್ರುತಿಬಾಹ್ಯಲಿಙ್ಗಧಾರಣಂ ಪಾಷಣ್ಡಮ್"

ಮನುಷ್ಯನ ತಲೆಬುರುಡೆ ಕಪಾಲವೇ ಮೊದಲಾದ ಶ್ರುತಿ ವಿರುದ್ಧವಾದ ಚಿಹ್ನೆಗಳನ್ನು ಧರಿಸುವುದೇ ಪಾಷಂಡವು. ಪಾಷಂಡವು ಯಾನನಲ್ಲುಂಟೋ ಆತನು ಪಾಷಂಡಿಯು. ೧

ಹೀಗೆಲ್ಲಾ ಹೇಳಿರುವದರಿಂದ ಪಾಷಂಡಿಗಳೆಂದರೆ ಪಾಶಾನ್ ಅಣಂತಿ ಎಂಬ ವ್ಯುತ್ಪತ್ತಿಯಿಂದ ಅಸಚ್ಛಾಸ್ತ್ರಗಳನ್ನು ಹೇಳುವ ವೇದಬಾಹ್ಯರು. ಇವರಿಗಳಿಗೆ ವಾದಮಾತ್ರ ಮುಖ್ಯವೇ ವಿನಾ ಶಾಬ್ದಪ್ರಮಾಣ ಮುಖ್ಯವಲ್ಲವು ಆದುದರಿಂದ ವೇದವಿರುದ್ಧ ವಾದಗಳ ಮೂಲಕ ಪ್ರಾಮಾಣಿಕಾರ್ಥಗಳನ್ನು ಅಪಹರಿಸಿಬಿಡುತ್ತಾರೆಂದು ಹೇಳಿದರು. ಮುಂದೆ ಈ ಅಪಹಾರವು ಎರಡು ವಿಧವೆಂದು ಹೇಳಿ ಅವುಗಳನ್ನು ತಿಳಿಸುತ್ತಾರೆ

**ಈ ಕುವಾದಿಗಳಿಂದುಂಟಾಗುವ ಅನರ್ಥಗಳನ್ನು ಹೇಳುತ್ತಾರೆ.**

---

ಇವ್ವಪಹಾರಮ್ - ಈ ಕುವಾದಿಗಳು ತಮ್ಮ ಕುತರ್ಕದಿಂದ ಮಾಡುವ

**ವಿರಣ್ಡುವಗೈ ಯೂಾಯಿರುಕ್ಕುಮ್, ಅದಿಲ್ ವಿಭೂತಿ ಮಾನೈ ಅಪಹ ಕ್ಕೈ ಯಾವದು ? ಶ್ರಿಯಃಪತಿಯಾನ ಸರ್ವೇಶ್ವರನೈ ಇಲ್ಲೈ ಎನ್ರು ದಲ್, ವೇರೊರುತ್ತನೈ ಈಶ್ವರನಾಗ (ಕ್ಕಾಟ್ಟಿ) ಕ್ಕಟ್ಟಿ ಸರ್ವೇಶ್ವರನೈ ವಿಭೂತಿ ಕೋಟಿಯಿಲೆ ವೈತ್ತಲ್ ಶೈಯ್ಗೈ.**

**ವಿಭೂತಿಯೈ ಅಪಹರಿಕ್ಕೈಯಾವದು ? ವಿಭೂತಿಯೈ ಒರುಮುಖ ತ್ತಾಲೇ ಯಿಲ್ಲೈ ಎನ್ನುದಲ್, ಉಣ್ಡಾಕ್ಕಿ ಈಶ್ವರನೋಡು ಸಂಬಂಧ**

---

ಅಪಹಾರವು, (೧) ವಿಭೂತಿಯೈಯುಮ್ - ಸರ್ವೇಶ್ವರನ ನಿಯಾಮ್ಯವರ್ಗವಾದ ಸರ್ವ ವಿಶ್ವವನ್ನೂ, (೨) ವಿಭೂತಿಮಾನೈಯುಮ್ - ಈ ನಿಯಾಮ್ಯವರ್ಗ ವನ್ನು ನಿಯಮಿಸುವ ಸರ್ವೇಶ್ವರನನ್ನೂ, ಪತ್ತ - ಕುರಿತದ್ದಾಗಿ, ಇರಣ್ಡುವಗೈ ಯಾಯಿರುಕ್ಕುಮ್ - ಎರಡು ವಿಧವಾಗಿರುತ್ತದೆ ಆ ಎರಡು ವಿಧ ಅಪಹಾರ ಗಳನ್ನು ವಿಶದೀಕರಿಸುತ್ತಾರೆ :—(೧) ಅದಿಲ್ – ಇವೆರಡರಲ್ಲಿ, ವಿಭೂತಿ ಮಾನೈ - ಸರ್ವ ವಿಭೂತಿಗೂ ನಿಯಾಮಕನಾಗಿರುವವನನ್ನು, ಅಪಹರಿಕ್ಕೈ ಯಾವುದು - ಅಪಹರಿಸುವುದೆಂದರೇನು ? ಶ್ರಿಯಃಪತಿಯಾದ ಸರ್ವೇಶ್ವರನು, ಇಲ್ಲೈ ಎನ್ರುದಲ್ - ಇಲ್ಲವೆಂದು ಹೇಳುವನಾಗಲಿ, ಇದರಿಂದ ನಾಸ್ತಿಕರೂ ನಿರೀಶ್ವರ ಮೀಮಾಂಸಕರೂ ಹೇಳಲ್ಪಟ್ಟರು ; ಅಥವಾ, ವೇರೊರುತ್ತನೈ - ಬೇರೆಯೊಬ್ಬನನ್ನು, ಈಶ್ವರನಾಗಕ್ಕಟ್ಟಿ - ಈಶ್ವರನೆಂದು ಕಲ್ಪಿಸಿ, ಸರ್ವೇಶ್ವರ ನಾದ ಶ್ರೀ ಮಹಾವಿಷ್ಣುವನ್ನು, ವಿಭೂತಿಕೋಟಿಯಿಲೆ - ಆ ಕಲ್ಪಿಸಿದ ಈಶ್ವರ ನಿಗೆ ನಿಯಾಮ್ಯ ವರ್ಗದಲ್ಲಿ, ವೈತ್ತಲ್ ಶೆಯ್ಗೈ - ಇಡೋಣವು ಅಥವಾ ಪ್ರವೇಶಮಾಡಿಸೋಣವು. ಇದರಿಂದ ಶೈವ ಪಾಶುಪತಗಳು ಹೇಳಲ್ಪಟ್ಟವು ಬ್ರಹ್ಮ ವಿಷ್ಣು ಶಿವರಿಗೆ ನಿಯಾಮಕನಾಗಿ ಪರಮಶಿವನುಂಟೆಂಬ ಅದ್ವೈತ ಪ್ರಭೇದವೂ ಇಲ್ಲಿ ಹೇಳಲ್ಪಟ್ಟಿತು. ಪರದೇವತಾ ಪಾರಮಾರ್ಥ್ಯಾಧಿಕಾರದಲ್ಲಿ ಈ ಅಭಿಪ್ರಾಯಗಳೆಲ್ಲಾ ನಿರಸನ ಮಾಡಲ್ಪಟ್ಟವೆ.

(೨) ವಿಭೂತಿಯನ್ನು ಅಪಹರಿಸೋಣವೆಂದರೇನು ? ವಿಭೂತಿಯೈ - ನಿಯಾಮ್ಯವರ್ಗವನ್ನು, ಒರು ಮುಖತ್ತಾಲೆ - ಒಂದು ಪ್ರಕಾರವಾಗಿ, ಯಿಲ್ಲೈ ಎನ್ರುದಲ್ - ಇಲ್ಲವೆಂದು ಹೇಳೋಣವಾಗಲಿ, ವ್ಯಾವಹಾರಿಕವಾಗಿ ಸತ್ಯವೆಂದೂ ಪಾರಮಾರ್ಥಿಕವಾಗಿ ಮಿಥ್ಯೆಯೆಂದೂ ಅದ್ವೈತಿಗಳು ಹೇಳುವರು, ಜ್ಞಾನ ಕಾಲದಲ್ಲಿ ವಿಷಯವು ಗತಿಸಿಹೋಗುವುದರಿಂದ ವಿಭೂತಿಯು ಇಲ್ಲವೆಂದು ಬೌದ್ಧರು ಹೇಳುವರು ; ಅಥವಾ, ಉಣ್ಡಾಕ್ಕಿ - ವಿಭೂತಿಯುಂಟೆಂದು ಹೇಳಿ, ಈಶ್ವರ

ಮರುತ್ತು ಸ್ವತಂತ್ರಮ್ ಎನ್ರುದಲ್, ಪರತಂತ್ರಮಾಕ್ಕಿ ತನ್ನೋಡು ಪಿರರೋಡು ಪಿಣೈಪ್ಪುದಲ್ ಶೆಯ್‌ಗೈ.

ಹೈತುಕ ಸಂಸರ್ಗೋ ಅವಶ್ಯಪರಿಹರಣೀಯಃ. ತತ್ರಪ್ರಮಾಣಾನಿ.

ಇವ್ವಪಹಾರಙ್ಗಳಿಲ್ ಏದೇನು ಮೊನ್ರು ಸ್ವರುಪತ್ತಿಲ್ ಮೃದುಪ್ರಜ್ಞನಾಯ್ ಆತ್ಮಸಮರ್ಪಣಂ ಪಣ್ಣಿನವನುಕ್ಕು ವಿಪರೀತ ಸಂಸರ್ಗ

---

ನೋಡು ಸಂಬಂಧಮರುತ್ತು-ಈಶ್ವರನೊಂದಿಗೆ ಅದಕ್ಕೆ ಸಂಬಂಧವನ್ನು ಭೇದಿಸಿ, ಸ್ವತಂತ್ರಮೆನ್ರುದಲ್ - ವಿಭೂತಿಯು ಈಶ್ವರನಿಗೆ ವಶವಲ್ಲವು, ಅದು ಸ್ವತಂತ್ರವು, ಎನ್ರುದಲ್ - ಎಂದು ಹೇಳೋಣವು, ಸೇಶ್ವರ ಮೀಮಾಂಸಕರ ಮತವು. ಚೇತನನು ಏನೂ ಮಾಡುವದಿಲ್ಲವು, ಪ್ರಕೃತಿಯೇ ಎಲ್ಲಾ ಮಾಡುತ್ತದೆ ಎಂಬುದು ಸಾಂಖ್ಯರ ಮತವು; ಪರತಂತ್ರಮಾಕ್ಕಿ - ಈ ವಿಭೂತಿಯೆಲ್ಲಾ ಪರತಂತ್ರವೆಂದು ಹೇಳಿ, ತನ್ನೋಡು - ತನಗೂ, ಪಿರರೋಡು - ಇತರರಿಗೂ, ಪಿಣೈಪ್ಪುದಲ್ - ಶೇಷಭೂತವಾಗಿ ಅಧೀನವೆಂದು ಪ್ರತಿಪಾದನವು, ಶೆಯ್‌ಗೈ - ಹೀಗೆ ಮೂರು ವಿಧವಾಗಿ ಹೇಳಿ ಅಪಹರಿಸುತ್ತಾರೆಂಬ ಭಾವವು; ಈ ಮೂರನೆಯ ವಿಧಕ್ಕೆ ನಿದರ್ಶನವು-ಚೇತನನಿಗೆ ಅಧೀನವೆಂಬುದು ಪಾಶುಮತ ಮತ ಸಾಂಖ್ಯ ಮತ ವಿಷಯವು; ಇತರರಿಗೆ ಶೇಷಭೂತವೆನ್ನುವುದು ಶೈವ ಮತವು. ವಿಭೂತಿಯ ಅಪಹಾರವು ಮೂರು ವಿಧವಾಗಿ ನಡೆಯಬಹುದೆಂದು ತಿಳಿಸಿದರು.—(೧) ವಿಭೂತಿಯೇ ಒಂದು ವಿಧವಾಗಿ ಇಲ್ಲವೆಂದು ಹೇಳಬಹುದು ಪಾರಮಾರ್ಥಿಕವಾಗಿ ವಿಭೂತಿಯೇ ಇಲ್ಲವೆಂದು ಹೇಳುವದು. (೨) ವಿಭೂತಿಯೇನೋ ಉಂಟು, ಆದರೆ ಅದು ಸ್ವತಂತ್ರವು, ಈಶ್ವರನಿಗೆ ಸಂಬಂಧಿಸಿದುದು ಅಲ್ಲವೆಂದು ಹೇಳುವದು. (೩) ಅದು ಪರತಂತ್ರವೇನೋ ಅಹುದು, ಜೀವನಿಗೆ ಪರತಂತ್ರವೆಂದು ಹೇಳುವರು ಅಥವಾ ಇತರರಿಗೂ ಪರತಂತ್ರವೆಂದು ಹೇಳುವುದು.

ಹೈತುಕರೊಂದಿಗೆ ಸಂಸರ್ಗವನ್ನು ಮುಖ್ಯವಾಗಿ ಬಿಡತಕ್ಕದ್ದು.
ಇದಕ್ಕೆ ಪ್ರಮಾಣಗಳು.

ಇವ್ವಪಹಾರಙ್ಗಳಿಲೇ - ಈ ಎರಡು ವಿಧ ಅಪಹಾರಗಳಲ್ಲೂ, ಏದೇನು ಮೊನ್ರು - ಯಾವುದಾದರೂ ಒಂದು, ಸ್ವರೂಪತ್ತಿಲ್ ಮೃದುಪ್ರಜ್ಞನಾಯ್- ತನ್ನ ಉತ್ಕೃಷ್ಟ ಸ್ವರೂಪದ ವಿಷಯದಲ್ಲಿ ಸರಿಯಾದ ಜ್ಞಾನವಿಲ್ಲದೆ ಮಂದಮತಿಯುಳ್ಳವನಾಗಿ, ಆತ್ಮಸಮರ್ಪಣಮ್ ಪಣ್ಣಿನವನುಕ್ಕು - ಭರನ್ಯಾಸಾನುಷ್ಠಾನ

**ತ್ತಾಲೆ ವರುಮಾಗಿಲ್ (೧)"ದತ್ತಸ್ಯ ಹರಣೇನಚ" ಎಙ್ಗಿರ ಅಪಹಾರತ್ತಿಲುಮ್ ಕೊಡಿಯದಾಯ್ ಕಳವು ಕೊಂಡುಕೊಡುತ್ತ ದ್ರವ್ಯತ್ತೈ ಮೀಳಕ್ಕಳವು ಕೊಂಡಾರ್ಪ್ಪೋಲೆಯಾಮ್.**

ಮಾಡಿದವನಿಗೆ, ವಿಪರೀತ **ಸಂಸರ್ಗತ್ತಾಲೆ** - ಶಾಸ್ತ್ರಮರ್ಯಾದೆಗೆ ವ್ಯತ್ಯಸ್ತವಾಗಿ ನಡೆಯುವ ಈ ಹೈತುಕರ ಸಂಬಂಧದಿಂದ, **ವರುಮಾಗಿಲ್** - ಇಂತಹ ಅನ್ಯಥಾ ಜ್ಞಾನವು ಪ್ರಾಪ್ತವಾದರೆ, **"ದತ್ತಸ್ಯ ಹರಣೇನ ಚ" ಎಙ್ಗಿರ** - ದಾನ ಕೊಟ್ಟಿದ್ದನ್ನು ಅಪಹಾರ ಮಾಡಿರುವದರಿಂದ ಎಂದು ಹೇಳಿರುವ, **ಅಪಹಾರತ್ತಿಲುಮ್ ಕೊಡಿಯದಾಯ್** - ಅಂತಹ ಅಪಹಾರಕ್ಕಿಂತಲೂ ಕ್ರೂರವಾದುದಾಗಿ, ಎಂದರೆ ದತ್ತಾಪಹಾರ ಕೂಡದು, ದೋಷಾವಹವು, ಅದಕ್ಕಿಂತಲೂ ದೋಷಾವಹವಾಗಿ ಎಂಬ ತಾತ್ಪರ್ಯವು ; **ಕಳವುಕೊಂಡು**-ಅಪಹರಿಸಿ ತಂದು, **ಕೊಡುತ್ತ ದ್ರವ್ಯತ್ತೈ** - ದಾನಮಾಡಿದ ದ್ರವ್ಯವನ್ನು, **ಮೀಳ** - ಪುನಃ, **ಕಳವು ಕೊಂಡಾರ್ಪ್ಪೋಲೆಯಾಮ್** - ಅಪಹರಿಸಿದ ಹಾಗೆ ಆಗುವದು, ಪೂರ್ವದಲ್ಲಿ ನೃಗನೆಂಬ ಇಕ್ಷ್ವಾಕು ಕುಲದ ರಾಜನೊಬ್ಬನಿದ್ದನು. ಆತನು ದಾನಶೌಂಡನಾಗಿ ಬ್ರಾಹ್ಮಣರಿಗೆ ಗೋದಾನ ಮಾಡುತ್ತಿದ್ದನು. ಎಷ್ಟು ಗೋದಾನ ಕೊಟ್ಟನೆಂಬುದು ಲೆಖ್ಖ ಮಾಡಲು ಕೂಡ ಸಾಧ್ಯವಿಲ್ಲವು ಒಂದು ದಿನ ಒಬ್ಬ ದ್ವಿಜಶ್ರೇಷ್ಠನಿಗೆ ದಾನವಾಗಿ ಕೊಟ್ಟ ದಿವ್ಯ ಪಶುವು ರಾಜನ ಗೋವುಗಳ ಹಿಂಡಿಗೇನೆ ಬಂದು ಸೇರಿತು. ಅದನ್ನು ರಾಜನು ತಿಳಿಯದೆ ಇನ್ನೊಬ್ಬ ದ್ವಿಜವರ್ಯನಿಗೆ ದಾನವಾಗಿ ಕೊಟ್ಟನು ಈತನು ತೆಗೆದುಕೊಂಡು ಹೋಗುವಾಗ ಮಾರ್ಗದಲ್ಲಿ ಮೊದಲನೆಯ ಬ್ರಾಹ್ಮಣನು, ಇದು ನನ್ನದು, ನನಗೆ ರಾಜನು ಕೊಟ್ಟಿದ್ದೆಂದು ಜಗಳವಾಡಿದನು. ಆಗ ರಾಜನು, ತಿಳುವಳಿಕೆಯಿಲ್ಲದೆ ಈ ಅಚಾತುರ್ಯವು ನಡೆಯಿತು. ಆದುದರಿಂದ ಮೊದಲನೆಯವನಿಗೆ ಕೊಟ್ಟುಬಿಡು, ನಿನಗೆ ಒಂದು ಲಕ್ಷ ಗೋವನ್ನು ಪ್ರತಿಯಾಗಿ ಕೊಡುವೆನು, ಎಂದರೆ ಅದಕ್ಕೆ ಇಬ್ಬರೂ **"ಭವಾನ್ ದಾತಾಪಹರ್ತೇತಿ ಮಾಮೂಚತುಃ"** ನೀನು ದತ್ತಾಪಹಾರಿ ಎಂದು ಇಬ್ಬರೂ ಬೈದರು. ಯಾವನು ಗೋವನ್ನು ಬಿಟ್ಟುಕೊಡುವನೋ, ಆತನಿಗೆ ಪ್ರತಿಯಾಗಿ ಲಕ್ಷ ಗೋವುಗಳನ್ನು ಕೊಡುವೆನೆಂದು ಎಷ್ಟು ಒಡಂಬಡಿಸಿದರೂ ಒಪ್ಪದೆ ಇಬ್ಬರೂ ಹೊರಟುಹೋದರು. ಅನಂತರ ಈ ನೃಗನಿಗೆ ಕೆಲವು ಕಾಲಾನಂತರ ದೇಹಾವಸಾನ ಪ್ರಾಪ್ತವಾಗಲಾಗಿ ಯಮನು ಬಂದು ಅನೇಕ ಗೋದಾನಗಳಿಂದ ಅನೇಕ ಶುಭಫಲವೂ, ಈ ದತ್ತಾಪಹಾರದಿಂದ

(೧) ಶಾಂ. ಸ್ಮೃ.

**ಅಗ್ನೈಯೊಲ್ ಬಹು ವಿಧಙ್ಗಳಾನ ವ್ಯಾಮೋಹ ಕಾರಣಙ್ಗಳಿಲ್ ಹೈತುಕ ಸಂಸರ್ಗಂ ಪ್ರೋರಪ್ಪರಿಹರಣೀಯಮ್.**

---

ಅಶುಭಫಲವೂ ಉಂಟು, ಯಾವುವನ್ನು ಮುಂದೆ ಅನುಭವಿಸುತ್ತೀಯೆ ಎಂದು ಕೇಳಲು, ಈತನು ಅಲ್ಪವಾಗಿರುವ ಅಶುಭಫಲವನ್ನನುಭವಿಸಲು ಒಪ್ಪಿದುದರಿಂದ ಒಡನೆ **ಕೃಕಲಾಸ** ವೆಂದರೆ ಉಡುವಿನ ಜನ್ಮವನ್ನು ಎತ್ತಿ ಒಂದು ಭಾವಿಯಲ್ಲಿ ಬಹುಕಾಲ ಬಿದ್ದಿದ್ದನು ಶ್ರೀಕೃಷ್ಣನು ಬಾಲಕರೊಂದಿಗೆ ವಿಹರಿಸುವಾಗ ಈ ಉಡುವನ್ನು ಇತರ ಬಾಲಕರೆಲ್ಲಾ ಹಗ್ಗ ಕಟ್ಟಿ ಎಷ್ಟು ಎಳದರೂ ಮೇಲಕ್ಕೆ ಬರದೆ, ಈತನು ಮಾಡಿದ ಗೋದಾನಗಳ ಸುಕೃತಫಲದಿಂದ ಕಡೆಗೆ ಶ್ರೀ ಕೃಷ್ಣನು ಎಡಗೈಯಲ್ಲಿ ಲೀಲೆಯಿಂದ ಎತ್ತಿಬಿಟ್ಟನು ಸ್ವಾಮಿಯ ಕರಸ್ಪರ್ಶಮಾಹಾತ್ಮ್ಯೆ ಯಿಂದ ಆಗ ನೃಗರಾಜನಿಗೆ ಈ ಜನ್ಮವು ಕಳೆದು, ದಿವ್ಯ ದೇವತೆಯ ಜನ್ಮವನ್ನು ಹೊಂದಿ ಸರ್ವಾಲಂಕಾರ ವಸ್ತ್ರಾಭರಣಭೂಷಿತನಾಗಿ ಸ್ವರ್ಗವನ್ನು ಕುರಿತು ತೆರಳಿ ದನೆಂಬ ಇತಿಹಾಸ ಉಂಟು. ಯಾವಾಗ ದಾನ ಕೊಟ್ಟನೋ ಆಗ ಅದು ಬ್ರಹ್ಮಸ್ವವಾಯಿತು ಬ್ರಹ್ಮಸ್ವಾಪಹರಣವು **ಸ್ವದತ್ತಾಂ ಪರದತ್ತಾಂ ವಾ ಬ್ರಹ್ಮವೃತ್ತಿಂ ಹರೇತಯಃ । ಷಷ್ಟಿವರ್ಷ ಸಹಸ್ರಾಣಿ ವಿಷ್ಠಾಯಾಂ ಜಾಯತೇ ಕ್ರಿಮಿಃ ॥** ಎಂದು ಹೇಳಿರುವದರಿಂದ, ಸರ್ವಥಾ ಕೂಡದೆಂಬ ಭಾವವು. ಹೀಗೆ ದತ್ತಾಪಹಾರವೇ ಅತಿ ಕ್ರೂರ ಫಲವುಳ್ಳದ್ದಾದುದರಿಂದ ಈ ವಿಭೂತ್ಯಪಹಾರವಾಗಲಿ ವಿಭೂತಿಮಾನಿನ ಅಪಹಾರವಾಗಲಿ ಇದಕ್ಕಿಂತ ಕ್ರೂರಫಲವುಳ್ಳದ್ದೆಂದುಪದೇಶಿಸುತ್ತಾರೆ ಹೇಗೆಂದರೆ —ವಿಭೂತಿಯೋ ಮಿಥ್ಯಾ ಎಂದು ಹೇಳುವದೂ ಅಥವಾ ಇನ್ನೊಬ್ಬರಿಗೆ ಸೇರಿದುದು ಎಂದು ಹೇಳುವದೂ, ಅಪಹರಿಸಿದುದೂ ಅಲ್ಲದೆ ಆ ದ್ರವ್ಯವೇ ಇಲ್ಲವೆಂದು ಸಾಧಿಸುವುದೂ, ಹೆಚ್ಚಾದ ಅಪರಾಧವೆಂಬ ಭಾವವು ವಿಭೂತಿಮಾನಿನ ಅಪಹಾರ ವಿಷಯದಲ್ಲಿ ಹೇಗೆಂದರೆ.—ನೈಜವಾಗಿ ದಾಸತ್ವವು ತನ್ನದು, ಸ್ವಾಮಿತ್ವವು ಸರ್ವೇಶ್ವರನದು, ಈ ಸ್ವಾಮಿತ್ವವನ್ನು ತಾನು ಈಗ ಅಪಹರಿಸಿಬಿಟ್ಟು ತಾನೇ ಸರ್ವೇಶ್ವರನು ಎಂದು ಹೇಳಿಕೊಳ್ಳುವದಲ್ಲದೆ, ಆತನ ಸರ್ವವಿಭೂತಿಯೂ ತಾನೂ ಸರ್ವೇಶ್ವರನದಾಗಿರುವಾಗ, ತನ್ನ ವಿಭೂತಿ ಎಂದೆನಿಸುವುದೂ. ಇನ್ನೂ ಹೆಚ್ಚಾದ ಅಪರಾಧವೆಂಬ ಭಾವವು, ಅಥವಾ ಆ ಸ್ವಾಮಿತ್ವವನ್ನು ಅಪಹರಿಸಿದುದಲ್ಲದೆ, ಇನ್ನೊಬ್ಬನಲ್ಲಿ ಅನ್ವಯಿಸುವುದೂ, ಇನ್ನೂ ಹೆಚ್ಚಿನದು ಎಂಬ ಭಾವವು.

**ಅಗ್ನೈಯೊಲ್** - ಅದುದರಿಂದ ಎಂದರೆ ಬಹಳ ಅನರ್ಥ ಬಾಹುಳ್ಯವುಳ್ಳದಾ

ಇವ್ವರ್ಥತ್ತ್ಯೈ (೧) "ಪಾಷಂಡಿನೋ ವಿಕರ್ಮಸ್ಥಾನ್ ಬೈಡಾಲವ್ರತಿಕಾನ್

ದುದರಿಂದ, ಬಹು ವಿಧಙ್ಗಳಾನ - ಬಹು ವಿಧಗಳಾದ, ವ್ಯಾಮೋಹಕಾರಣಙ್ಗಳಿಲ್ - ವ್ಯಾಮೋಹಕ್ಕೆ ಕಾರಣಗಳಾಗಿರುವುವಗಳಲ್ಲಿ, ಹೈತುಕ ಸಂಸರ್ಗಮ್ - ಇಂತಹ ಕುವಾದಿಗಳೊಂದಿಗೆ ಸರಸ ಸಂಭಾಷಣಾದಿಗಳು, ಘೋರ ಪರಿಹರಣೀಯಮ್ - ಅತ್ಯಂತ ಪರಿಹರಣೀಯವು ಇಂತವರ ಸಂಬಂಧವೇ ಬೇಡ ಎಂದು ಉಪದೇಶಿಸಿದರು. ಆದರೆ ಭರನ್ಯಾಸಮಾಡಿ ಕೃತಕೃತ್ಯನಾದವನಿಗೆ ಎಂದಿಗಿದ್ದರೂ ಭಯವಿಲ್ಲವು, ದೇಹಾವಸಾನಾನಂತರ ರಕ್ಷಿಸಿ ಮೋಕ್ಷಪದವನ್ನು ಕೊಡುತ್ತೇನೆಂದು ವಾಗ್ದಾನ ಮಾಡಿಯಾಯಿತು. ಅನೃತಂ ನೋಕ್ತಪೂರ್ವಂ ಮೇ ನ ಚ ವಕ್ಷ್ಯೇ ಕದಾಚನ ಎಂದು ಪ್ರತಿಜ್ಞೆ ಮಾಡಿದ್ದಾನೆ. ಇಂತಹ ಹೈತುಕ ಸಂವಾದದಿಂದ ಸ್ವಲ್ಪ ದಂಡನೆಯಾದೀತು, ಇಷ್ಟೇ ತಾನೆ ಎಂದರೆ, ಹಾಗಲ್ಲವು ಕೃತಕೃತ್ಯನು ತನ್ನ ಸ್ವರೂಪಕ್ಕನುಗುಣವಾಗಿ ನಡೆಯತಕ್ಕದ್ದುಚಿತವು "ಪ್ರಕ್ಷಾಳನಾದ್ಧಿ ಪಙ್ಕಸ್ಯ ದೂರಾದ ಸ್ಪರ್ಶನಂ ವರಂ" ಕೆಸರು ತುಳಿದು ಕಾಲನ್ನು ಕೆಸರು ಮಾಡಿಕೊಂಡು ಎಲ್ಲರೂ ನಗುವಹಾಗೆ ಮಾಡಿಕೊಳ್ಳುವದಕ್ಕಿಂತ ಕೆಸರನ್ನು ಸ್ಪರ್ಶ ಮಾಡದೇ ಇರುವುದು ಹೇಗೆ ಉಚಿತವೋ, ಹಾಗೆ ಹೈತುಕರೊಂದಿಗೆ ಸಂಸರ್ಗವಿಟ್ಟು ಸ್ವರೂಪಹಾನಿ ಮಾಡಿಕೊಳ್ಳುವದಕ್ಕಿಂತ, ಅವರ ಹತ್ತಿರ ಹೋಗದೇ ಇರುವುದೇ ಉತ್ತಮವು ಎಂಬಭಾವವು.

ಹಾಗೆ ಹೈತುಕರ ಸಂಬಂಧ ಸುತರಾಂ ಕೂಡದೆಂಬುದಕ್ಕೆ ಪ್ರಮಾಣಗಳನ್ನು ಉದಾಹರಿಸುತ್ತಾರೆ – ಪಾಷಂಡಿನಃ - "ಯೋನ್ಯಂ ದೇವಂ ಪರತ್ವೇನ" ಎಂದು ಹೇಳಿರುವ ಹಾಗೆ, ಅನ್ಯದೇವತೆಯನ್ನು ಪರದೇವತೆ ಎಂದು ಭಾವಿಸುವವರು, ಇವರು ಎಂತವರೆಂಬುದು ಹಿಂದೆ ಉಪಪಾದಿಸಲ್ಪಟ್ಟಿರುತ್ತದೆ; ವಿಕರ್ಮಸ್ಥಾನ್ - "ಅಪಾರ್ಥಂ ಶ್ರುತಿವಾಕ್ಯಾನಾಂ ದರ್ಶಯನ್ ಲೋಕಗರ್ಹಿತಂ । ಸರ್ವಕರ್ಮ ಪರಿಭ್ರಷ್ಟೋ ವಿಕರ್ಮಸ್ಥಸ್ಸ ಉಚ್ಯತೇ ॥" ಎಂದು ಹೇಳಿರುವ ಹಾಗೆ, ಶ್ರುತಿವಾಕ್ಯಗಳಿಗೆ ಲೋಕನಿಂದಿತವಾದ ಅಪಾರ್ಥಗಳನ್ನು ಹೇಳುತ್ತಾ ಸಮಸ್ತ ವೈದಿಕಕರ್ಮಭ್ರಷ್ಟರಾಗಿ ಶಿಖಾ ಯಜ್ಞೋಪವೀತಗಳನ್ನು ಬಿಟ್ಟು ಐಹಿಕ ಕರ್ಮಗಳಲ್ಲೇ ಮಗ್ನರಾಗಿರುವವರನ್ನೂ, ಬೈಡಾಲವ್ರತಿಕಾನ್ - "ಬೈಡಾಲವ್ರತಿಕೋ ಜ್ಞೇಯೋ ಹಿಂಸ್ರಕ ಸ್ಸರ್ವನಿಂದಕಃ" ಎಂದು ಹೇಳಿರುವ ಹಾಗೆ ಬೆಕ್ಕು ಬಚ್ಚಿಟ್ಟುಕೊಂಡು ಭದ್ರನೆಯಿಂದ ಇಲಿಗಳನ್ನು ಹೇಗೆ ಹಿಡಿಯುತ್ತದೋ, ಹಾಗೆ ವಂಚಕ

(೧) ಮನುಸ್ಮೃತಿ ೪.೩೦.

ಶಠಾನ್ । ಹೈತುಕಾನ್ ಬಕವೃತ್ತೀಂಶ್ಚ ವಾಙ್ಮಾತ್ರೇಣಾಪಿ ನಾರ್ಚಯೇತ್” (೨) “ಡಂಭಿ ಹೈತುಕ ಪಾಷಂಡೀ ಬಕ ವೃತ್ತೀಂಶ್ಚ ವರ್ಜಯೇತ್ । (೩) ನಾಸದ್ಭಿಃ ಕಿಂಚಿದಾಚರೇತ್” (೪) “ತ್ಯಜದುರ್ಜನ ಸಂಸರ್ಗಮ್ (೫) “ವರಂ ಹುತವಹಜ್ವಾಲಾ ಪಂಜರಾಂತರ್ವ್ಯವಸ್ಥಿತಿಃ । ನಶೌರಿ ಚಿನ್ತಾ

---

ರಾಗಿ ಗೂಢವಾಗಿ ಜನರನ್ನು ಹಿಂಸಿಸುತ್ತಾ ಎಲ್ಲರಿಂದಲೂ ನಿಂದಿಸಲ್ಪಟ್ಟವರನ್ನೂ, **ಶಠಾನ್**–ವೇದವು ಪ್ರಮಾಣವಲ್ಲವೆಂದು ಹೇಳುವ ನಾಸ್ತಿಕರನ್ನೂ, **ಹೈತುಕಾನ್** - ಕುತರ್ಕ ಕುವಾದಗಳನ್ನು ಮಾಡುವವರನ್ನೂ, **ಬಕವೃತ್ತೀಂಶ್ಚ** - ಬಕಪಕ್ಷಿಯು ಹೇಗೆ ನೀರಿನ ಮಧ್ಯೆ ಸುಮ್ಮನೆ ಇದ್ದು ಹತ್ತಿರ ಬಂದ ಮತ್ಸ್ಯಗಳನ್ನು ಹಿಡಿದು ತಿನ್ನುತ್ತದೋ ಅಂತಹ ವೃತ್ತಿಯುಳ್ಳವರನ್ನೂ, ಬೈಡಾಲವೃತ್ತಿಗೂ ಬಕವೃತ್ತಿಗೂ ಇರುವ ವ್ಯತ್ಯಾಸವು “ಧರ್ಮಧ್ವಜಸ್ಸದಾಲುಬ್ಧಃ ಛಾದ್ಮಿಕೋ ಲೋಕಡಾಂಭಿಕಃ । ಬೈಡಾಲವ್ರತಿಕೋಜ್ಞೇಯೋ ಹಿಂಸಕಸ್ಸರ್ವನಿಂದಕಃ”, ”ಅಧೋದೃಷ್ಟಿರ್ನೈಷ್ಕೃತಿಕ ಸ್ಸ್ವಾರ್ಥಸಾಧನ ತತ್ಪರಃ । ಶಠೋ ಮಿಥ್ಯಾ ವಿನೀತಶ್ಚ ಬಕವೃತ್ತಿರುದಾಹೃತಃ” ಎಂಬ ಶ್ಲೋಕಗಳಿಂದ ವ್ಯಕ್ತವು. ಧರ್ಮನಿರತನೆಂಬ ಧ್ವಜವುಳ್ಳವನೆಂದು ಪ್ರಕಟಿಸುತ್ತಾ ಯಾವಾಗಲೂ ಲುಬ್ಧನಾಗಿ, ಕಾಪಟ್ಯವುಳ್ಳವನಾಗಿ, ಡಾಂಭಿಕನಾಗಿ, ಜನರಿಗೆ ಹಿಂಸೆ ಮಾಡುವವನಾಗಿ ಸರ್ವರನ್ನೂ ನಿಂದಿಸುವವನು ಬೈಡಾಲವ್ರತಿಕನು ಎಂದರೆ ಬೆಕ್ಕಿನ ಹಾಗೆ ನಟಿಸುವವನೆಂದು ತಿಳಿಯತಕ್ಕದ್ದು. ಯಾವಾಗಲೂ ಕೆಳಗೇ ನೋಡುವವನಾಗಿ ಒಬ್ಬರ ತಂಟೆಗೆ ಹೋಗದವನಾಗಿ ಕಾಣಿಸಿಕೊಂಡು, ಮೋಸಕೃತ್ಯವುಳ್ಳವನಾಗಿ, ತನ್ನ ಪ್ರಯೋಜನವನ್ನು ಸಾಧಿಸಿಕೊಳ್ಳುವದರಲ್ಲಿ ಆಸಕ್ತಿಯುಳ್ಳವನಾಗಿ, ನಾಸ್ತಿಕವಾದ ಮಾಡುವವನಾಗಿ, ತುಂಬಾ ವಿನಯವುಳ್ಳವನ ಹಾಗೆ ತೋರಿಸಿಕೊಳ್ಳುವನಾಗಿ ಆದರೆ ದುರ್ವಿನೀತನಾಗಿ ಇರುವವನು ಬಕವೃತ್ತಿಯುಳ್ಳವನೆನಿಸುವನು, ಇಂತವರುಗಳನ್ನು, **ವಾಙ್ಮಾತ್ರೇಣಾಪಿ ನಾರ್ಚಯೇತ್** - ಏನು ಕ್ಷೇಮವೇ ಇತ್ಯಾದಿ **ಬರೀ ಮಾತಿನ ಉಪ**ಚಾರಗಳನ್ನೂ ಕೂಡ ಮಾಡಬಾರದು

(೨) **ಡಂಭಿ** - ಡಾಂಭಿಕರು, ಡಂಭಾಚಾರವುಳ್ಳವರು, ಮತ್ತು ಹೈತುಕರು, ಪಾಷಂಡಿಗಳು, ಬಕವೃತ್ತಿಯುಳ್ಳವರು, ಇವರುಗಳನ್ನೆಲ್ಲಾ ಬಿಡತಕ್ಕದ್ದು.

(೩) **ಅಸದ್ಭಿಃ** - ಬ್ರಹ್ಮಜ್ಞಾನವಿಲ್ಲದೆ, ಬ್ರಹ್ಮವನ್ನು ಧ್ಯಾನಿಸದೇ ಇರುವದರಿಂದ ಅಸತ್ತುಗಳೆಂದು ಹೇಳಿಸಿಕೊಳ್ಳುವವರೊಂದಿಗೆ **ನ ಕಿಂಚಿದಾಚರೇತ್**- ಸ್ವಲ್ಪವಾಗಲಿ ನಡತೆಯಿಡಕೂಡದು.

---

(೨) ಯಾಜ್ಞವಲ್ಕ್ಯಸ್ಮೃತಿ (೩) (೪) ಭಾರತ ಆರ. (೫)

ವಿಮುಖ ಜನ ಸಂವಾಸ ವೈಶಸಂ ।" ಇತ್ಯಾದಿಗಳಿಲೆ ಪ್ರಪಂಚಿತ್ತಾರ್ ಗಳ್.

**ಅಥ ಹೈತುಕ ಸಂಸರ್ಗ ಪ್ರಾಪ್ತಾನರ್ಥಾನಾಹ**

ಇನ್ದ ಹೈತುಕರೊಟ್ಟೈ ಸಂಭಾಷಣಮ್ (೧) "ಮಾಯಯಾಪಹೃತ ಜ್ಞಾನಾಃ" ಎಙ್ಗರಪಡಿಯೇ ಕಂಡು ಮತಿಕೆಟ್ಟಾನಾಕ್ಕಿ (೨) "ಚತುರ್ವಿಧಾ

---

(೪) **ದುರ್ಜನ ಸಂಸರ್ಗಂ** - ಸಜ್ಜನರನ್ನು ಸಹಿಸದೇ ಇರುವವನೊಂದಿಗೆ ಸಂಸರ್ಗವನ್ನು, ತ್ಯಜ - ಬಿಟ್ಟುಬಿಡು

(೫) **ಹುತವಹ ಜ್ವಾಲಾಪಂಜರಾಂತ ವ್ಯವಸ್ಥಿತಿಃ**, ಹುತವಹ-ಅಗ್ನಿಯ, ಜ್ವಾಲಾ-ಜ್ವಾಲೆಯೆಂಬ ಪಂಜರದಲ್ಲಿ ಇರೋಣವಾದರೂ, ವರಂ-ಶ್ರೇಷ್ಠವು **ಶೌರಿಚಿಂತಾ** - ಶ್ರೀ ಕೃಷ್ಣನ ಧ್ಯಾನದಿಂದ, ವಿಮುಖ - ವಿಮುಖರಾದ, ಜನ **ಸಂವಾಸ** - ಜನರೊಂದಿಗೆ ಸಹವಾಸರೂಪವಾದ, ವೈಶಸಂ - ಹಾನಿಯು, ನ **ವರಂ** - ಒಳ್ಳೆಯುದಲ್ಲವು" **ಇತ್ಯಾದಿಗಳಿಲೆ** - ಇಂತಹ ಪ್ರಮಾಣಗಳಲ್ಲಿ, **ಪ್ರಪಂಚಿತ್ತಾರ್ಗಳ್** - ಉಪಪಾದಿಸಿರುತ್ತಾರೆ ಯಾರೆಂದರೆ ಈ ಪ್ರಮಾಣಗಳನ್ನನುಗ್ರಹಿಸಿರುವ, ಮನು, ವ್ಯಾಸ, ಯಾಜ್ಞವಲ್ಕ್ಯ ಮೊದಲಾದವರು. ಈ ಶ್ಲೋಕ ತಾತ್ಪರ್ಯವೇನೆಂದರೆ, ಭಗವಂತನ ವಿಷಯವಾದ ಚಿಂತೆಯಿಲ್ಲದವರ ಮಧ್ಯದಲ್ಲಿರುವುದು ಬೆಂಕಿಯ ಮಧ್ಯದಲ್ಲಿರುವುದಕ್ಕಿಂತ ಹೆಚ್ಚು ಅನರ್ಥವನ್ನುಂಟು ಮಾಡುವಂಥಾದ್ದೆಂಬ ಭಾವವು ಬೆಂಕಿಯ ತಾಪವು ದೇಹವನ್ನು ಮಾತ್ರ ಸುಡುತ್ತದೆ, ದುಸ್ಸಹವಾಸವಾದರೋ ಆತ್ಮಾವಿನ ಗತಿಯನ್ನೇ ಕೆಡಿಸುತ್ತದೆಂಬುದು

**ಹೈತುಕರ ಸಂಸರ್ಗದಿಂದುಂಟಾದ ಅನರ್ಥಗಳು.**

**ಇನ್ದ ಹೈತುಕರೊಟ್ಟೈ ಸಂಭಾಷಣಮ್** - ಈ ಕುತರ್ಕಗಳಿಂದ ವಾದ ಮಾಡುವವರೊಂದಿಗೆ ಸಂಭಾಷಣೆಯು, (೧) "ಮಾಯಯಾಪಹೃತ ಜ್ಞಾನಾಃ" "ದುಷ್ಕರ್ಮಪರಿಪಾಕದಿಂದ ಪ್ರಾಪ್ತವಾದ ಶರೀರರೂಪ ಪ್ರಕೃತಿಯಿಂದ ಅಪಹರಿಸಲ್ಪಟ್ಟ ಜ್ಞಾನವುಳ್ಳವರು, ಎಂದರೆ ಪ್ರಕೃತಿಯಿಂದ ತಿರೋಹಿತವಾದ ಜ್ಞಾನವುಳ್ಳವರು," ಇನ್ನೊಂದು ವಿಧ ಅರ್ಥವು ಕೆಳಗೆ ಉಪಪಾದಿಸಲ್ಪಟ್ಟಿರುತ್ತದೆ ಎಙ್ಗರ **ಪಡಿಯೇ** - ಎಂದು ಹೇಳಿರುವ ಹಾಗೆ, **ಕಂಡು ಮತಿಕೆಟ್ಟಾನಾಕ್ಕಿ** - ಜೀವನನ್ನಾದರೂ ಮತಿಭ್ರಷ್ಟನನ್ನಾಗಿ ಮಾಡಿ ಇದೊಂದನರ್ಥವು, (೨) **ಚತುರ್ವಿಧಾಃ**

---

(೧) ಗೀ. ೭.೧೫ (೨) ಭಾರ. ಶಾಂತಿ. ೩೫೦.೩೪

**ಮಮಜನಾ ಭಕ್ತಾ ಏವಹಿ ತೇ ಶ್ರುತಾಃ” ಎನ್ರು ಈಶ್ವರನ್ ನಮ್ಮುಡೈಯವರ್‌ಗಳೆನ್ರು ನಾಲುವಗೈಯಿಲುಮ್ ಕೂಟಾದೆ (೩) “ಅಳಿಯುನಮ್ ಪೈಯ್ಯಲ್” ಎನ್ನಾದಪಡಿ ಪಣ್ಣಿ (೪) “ನ ಮಾಂ ದುಷ್ಕೃತಿನೋ ಮೂಢಾಃ ಪ್ರಪದ್ಯನ್ತೇ” ಎಙ್ಗಿರ ಭಗವದಭಿಮಾನ ಬಾಹ್ಯವರ್ಗತ್ತಿಲ್ ಕೊಪ್ಪುಣ್ಣಾಪ್ಪಣ್ಣುಮ್.**

---

ಆರ್ತನು, ಜಿಜ್ಞಾಸು, ಅರ್ಥಾರ್ಥೀ, ಜ್ಞಾನೀ ಎಂಬ ನಾಲ್ಕು ವಿಧರಾದ, **ಭಕ್ತಾಃ**- ನನ್ನ ಭಕ್ತರು, **ತೇ** - ಅವರು, **ಮಮಜನಾ ಏವಹಿ** - ನನಗೆ ತುಂಬಾ ಪ್ರಿಯರಾಗಿ ನನ್ನ ಜನರೇ ಎಂದು, **ಶ್ರುತಾಃ** - ಹೇಳಲ್ಪಟ್ಟವರು,” **ಎನ್ರು** - ಎಂದು, **ಈಶ್ವರನ್** - ಸರ್ವೇಶ್ವರನು, **ನಮ್ಮುಡೈಯವರ್‌ಗಳೆನ್ರು** - ನಮಗೆ ತುಂಬಾ ಪ್ರಿಯರಾದ ಸ್ವಜನವೆಂಬ, **ನಾಲುವಗೈಯಿಲುಮ್ ಕೂಟಾದೆ** - ನಾಲ್ಕು ವಿಧ ಭಕ್ತರಲ್ಲೂ ಸೇರಿಸದೆ, **“ಅಳಿಯುನಮ್ ಪೈಯ್ಯಲ್”** - ಕೃಪೆ ಮಾಡಲು ಯೋಗ್ಯನಾದ ನಮ್ಮ ಬಾಲನು ಎಂದು (ಈ ಪಾಶುರಾರ್ಥಕ್ಕೆ ಅಪರಾಧ ಪರಿಹಾರಾಧಿಕಾರದ ೧೫೯೫ನೆಯ ಪುಟವನ್ನು ಪರಾಂಬರಿಸಿ) **ಎನ್ನಾದಪಡಿ ಪಣ್ಣಿ**-ಹೇಳಿಸಿಕೊಳ್ಳದ ಹಾಗೆ ಮಾಡಿ, ಇದು ಎರಡನೆಯ ಅನರ್ಥವು, **“ತೇಷಾಮೇಕಾನ್ತಿನಃ ಶ್ರೇಷ್ಠಾಯೇ ಚೈವಾನನ್ಯ ದೇವತಾಃ”** ಎಂದು ಮುಂದಕ್ಕೆ ಇರುತ್ತದೆ (೪) **ಮಾಂ** - ನನ್ನನ್ನು, **ದುಷ್ಕೃತಿನಃ** - ಪಾಪಕರ್ಮಗಳನ್ನು ನಡೆಸಿದವರು, ದುಷ್ಕೃತ ತಾರತಮ್ಯದಿಂದ ನಾಲ್ಕು ವಿಧವಾದವರು, **ನ ಪ್ರಪದ್ಯನ್ತೇ** - ಉಪಾಸನವನ್ನು ಮಾಡಿ ತದಂಗವಾಗಿ ಶರಣಾಗತಿಯನ್ನು ಮಾಡುವುದಿಲ್ಲವು. ಮುಂದಕ್ಕೆ **“ಪ್ರಪದ್ಯಂತೇ ನರಾಧಮಾಃ। ಮಾಯಯಾಪಹೃತ ಜ್ಞಾನಾ ಆಸುರಂ ಭಾವಮಾಶ್ರಿತಾಃ”** ಎಂದು ಇರುತ್ತದೆ. ಆ ನಾಲ್ಕು ವಿಧ ದುಷ್ಕೃತಿಗಳು ಯಾರೆಂದರೆ —(೧) **ಮೂಢಾಃ**–ವಿಪರೀತಜ್ಞಾನವುಳ್ಳವರು, ಅವರು ಯಾರೆಂದರೆ ಭಗವಂತನಿಗೆ ಶೇಷಭೂತನಾದ ತನ್ನನ್ನೂ ಭೋಗ್ಯಸಮುದಾಯವನ್ನೂ ಸ್ವತಂತ್ರವೆಂದೂ ತನಗೇನೆ ಶೇಷಭೂತವೆಂದೂ ಭಾವಿಸುವವರು, (೨) **ನರಾಧಮಾಃ** - ಸಾಮಾನ್ಯವಾಗಿ ಸರ್ವೇಶ್ವರನ ಸ್ವರೂಪ ತಿಳಿದಿದ್ದರೂ, ಸರ್ವೇಶ್ವರಾಭಿಮುಖ್ಯಕ್ಕೆ ಅನರ್ಹರಾದ ನೀಚರು, (೩) **ಮಾಯಯಾಪಹೃತ ಜ್ಞಾನಾಃ** - ಸರ್ವೇಶ್ವರನ ವಿಷಯವಾದ ಮತ್ತು ಆತನ ಐಶ್ವರ್ಯ ವಿಷಯವಾದ ಜ್ಞಾನಕ್ಕೆ ವಿರುದ್ಧವಾದ ಮೋಹಜನಕವಾದ ಕುದೃಷ್ಟಿಗಳ ಮತ್ತು ವೇದಬಾಹ್ಯರ ಕುವಾದ ಕುತರ್ಕಗಳಿಂದ ಅಪಹರಿಸ

---

(೩) ತಿರುಮಾಲೈ ೩೭. (೪) ಗೀ. ೭ ೧೫.

**ಪ್ರಪನ್ನೇಷು ಹೈತುಕ ಸಂಸರ್ಗಃ ಕಿಂಕರೋತಿ ?**

**ಅಶರಣ್ಯ ಶರಣ್ಯನಾನ ಸರ್ವೇಶ್ವರನ್ಯೆ ಶರಣಮಾನ ಪ್ರತ್ತುಗಿರ ಪರ ಮಾಸ್ತಿಕನುಕ್ಕು ಚ್ಚಿಲರೋಡು ಶೇರ್ತಿಯಾಲ್ ಬಾಹ್ಯತೆ ವಾರಾದಾಗ**

---

ಲ್ಪಟ್ಟ ಜ್ಞಾನವುಳ್ಳವರು, (೪) ಆಸುರಂ ಭಾವಮಾಶ್ರಿತಾಃ - ಸರ್ವೇಶ್ವರನ ವಿಷಯವಾದ ಮತ್ತು ಆತನ ಐಶ್ವರ್ಯವಿಷಯವಾದ ಜ್ಞಾನವು ಭಗವಂತನನ್ನು ದ್ವೇಷಿಸುವದಕ್ಕಾಗಿಯೇ ಯಾರಿಗೆ ಆಗುವದೋ ಅಂತವರು, ಇವರು ನಾಲ್ಕು ಮಂದಿಯೂ ಉತ್ತರೋತ್ತರ ಹೆಚ್ಚು ಪಾಪಿಷ್ಠರು ಎಂಬ್ದಾಗಿ ಎಂದು ಗೀತೆಯ ಸಪ್ತಮಾಧ್ಯಾಯದಲ್ಲಿ ಹೇಳಿದರು, ಭಗವದಭಿಮಾನ ಬಾಹ್ಯವರ್ಗತ್ತಿಲ್ - ಭಗವಂತನ ಕೃಪೆಗೆ ಹೊರಗಿರುವವರ ಕೂಟದಲ್ಲಿ, ಕೊಪ್ಪುಣ್ಣಾಪ್ಪುಣ್ಣುಮ್-ನೇರಿ ಸಂಶ್ಲೇಷವಿಸುವ ಹಾಗೆ ಮಾಡುತ್ತದೆ ಹೀಗೆ ಹೈತುಕ ಸಂಸರ್ಗವು ಮೂರು ವಿಧ ಅನರ್ಥಗಳನ್ನುಂಟುಮಾಡಬಹುದು —(೧) ಒಳ್ಳೆ ಶಾಸ್ತ್ರಜ್ಞಾನ ಹೊಂದಿದ್ದರೂ ಆ ಹೈತುಕರ ಸಹವಾಸದಿಂದ ಜ್ಞಾನವು ತಿರಸ್ಕೃತವಾಗಬಹುದು (೨) ಸುಕೃತಿಗಳಾದ ಭಕ್ತಮಂಡಲಿಯಲ್ಲಿ ಸೇರದಹಾಗೆ ಮಾಡುತ್ತದೆ (೩) ದುಷ್ಕೃತಿಗಳ ಗುಂಪಿಗೆ ಸೇರಿಸಿ ಭಗವದನುಗ್ರಹಕ್ಕೆ ದೂರಮಾಡುತ್ತದೆ, ಎಂದು ಉಪದೇಶಿಸಿದರು

ಆದರೆ ಇವೆಲ್ಲಾ ಸಾಧಾರಣ ಜನಗಳಿಗುಂಟಾಗುವ ಅನರ್ಥಗಳು, ಉಪಾಯಾನುಷ್ಠಾನ ಮಾಡಿ ಪ್ರಪನ್ನನೆನಿಸಿದವನಿಗೆ ಈ ಹೈತುಕ ಸಂಸರ್ಗದಿಂದ ಉಂಟಾಗುವ ಅನರ್ಥ ತಾನೇ ಏನಿದೆ ? "ನ ವಾಸುದೇವ ಭಕ್ತಾನಾಮಶುಭಂ ವಿದ್ಯತೇ ಕ್ವಚಿತ್" ವಾಸುದೇವ ಭಕ್ತರುಗಳಿಗೆ ಸ್ವಲ್ಪವಾಗಲಿ ಅಮಂಗಳವಿಲ್ಲವು "ಜನಾರ್ದನಂ ಪ್ರಣಿಪತಿತೋ ನಸೀದತಿ" ಜನಾರ್ದನನಲ್ಲಿ ಶರಣಾಗತಿ ಮಾಡಿದವನು ದುಃಖಿಸುವುದಿಲ್ಲವು, "ನಮೇ ಭಕ್ತಃ ಪ್ರಣಶ್ಯತಿ" ನನ್ನ ಭಕ್ತನು ಎಂದಿಗೂ ನಾಶವನ್ನು ಹೊಂದುವುದಿಲ್ಲವು ಎಂದರೆ ಎಂದಿಗೂ ದುಃಖಭಾಕ್ಕಾಗುವುದಿಲ್ಲವು, ಹೀಗೆಲ್ಲಾ ಪ್ರಮಾಣಗಳಿರುವಾಗ ಭಗವದಭಿಮಾನ ಬಾಹ್ಯತಾ ಹೇಗೆ ಎಂದಾಕ್ಷೇಪಿಸಿದರೆ ಅದಕ್ಕೆ ಸಮಾಧಾನವನ್ನು ಹೇಳುತ್ತಾರೆ

**ಪ್ರಪನ್ನರುಗಳಲ್ಲಿ ಹೈತುಕ ಸಂಸರ್ಗವು ಏನು ಮಾಡೀತು ?**

ಭಗವದ್ವಿಮುಖರಿಗೇನೋ ಭಗವದಭಿಮಾನ ಬಾಹ್ಯತೆಯು ಬಂದರೂ ಬರಬಹುದು ಆದರೆ ಸದಾಚಾರ್ಯನ ಮೂಲಕ ಸದುಪದೇಶವನ್ನು ಹೊಂದಿ, ತನ್ನೊ

ಲುವರ್, ಅವನುಕ್ಕುಕ್ಕಲಕ್ಕಙ್ಗಳ್‌ವರವುಮ್, ಅದುಕ್ಕು ಸದಾಚಾರ್ಯರ್ ಗಳ್ ಪರಿಹಾರಮ್ ಪಣ್ಣುವುಮ್, ಕಾಣಾನಿನ್ರೋಮ್.

ಮಹರ್ಷಿಗಳುಮ್ (೧) ಏಕಂ ಯದಿ ಭವೇಚ್ಛಾಸ್ತ್ರಂ ಜ್ಞಾನಂ ನಿಸ್ಸಂಶಯಂ ಭವೇತ್ । ಬಹುತ್ವಾದಿಹ ಶಾಸ್ತ್ರಾಣಾಂ ಜ್ಞಾನತತ್ತ್ವಂ ಸುದುರ್ಲಭಮ್" ಎನ್ನುಮ್, (೨) "ನಿಸ್ಸಂಶಯೇಷು ಸರ್ವೇಷು ನಿತ್ಯಂ ವಸತಿ

---

ಲಕ ಅವರುಗಳ ಕೃಪೆಯಿಂದ ತುಂಬಾ ವಿಶ್ವಾಸಪೂರ್ವಕ ಭರನ್ಯಾಸಾನುಷ್ಠಾನ ಮಾಡಿದವನಿಗೆ ಇಂತಹ ಬಾಹ್ಯತೆ ಎಂದಿಗಾದರೂ ಉಂಟೋ ಎಂದರೆ, **ಅಶರಣ್ಯ ಶರಣ್ಯನಾನ** - ಅನನ್ಯಗತಿಕರಿಗೆಲ್ಲಾ ಪರಮಗತಿಯಾದ, ಸರ್ವೇಶ್ವರನನ್ನು, **ಶರಣಮಾಗ** - ಉಪಾಯವಾಗಿ, **ಪತ್ತುಗಿರ** - ಭರನ್ಯಾಸ ಮಾಡುವ, **ಪರಮಾಸ್ತಿಕನುಕ್ಕು** - "**ಅಸ್ತಿ ಬ್ರಹ್ಮೇತಿಚೇದ್ವೇದ ಸಂತಮೇನಂತತೋ ವಿದುಃ**" ಎಂದು ಹೇಳಿರುವ ಹಾಗೆ ತುಂಬಾ ಆಸ್ತಿಕನಾಗಿ ಸಂತರಲ್ಲಿ ಸೇರಲು ಯೋಗ್ಯನೆಂದಿರುವವನಿಗೆ, **ಶಿಲರೋಡು ಶೇರ್ತಿಯಾಲ್**-ಹೀಗೆ ಕೆಲವು ದ್ವೈತುಕರ ಸಂಸರ್ಗದಿಂದ, **ಬಾಹ್ಯತೆ ವಾರಾದಾಗಿಲುವರ್** - ಭಗವದಭಿಮಾನ ಬಾಹ್ಯತೆಯು ಬಾರದಿದ್ದರೂ, **ಅವನುಕ್ಕುಕ್ಕಲಕ್ಕಙ್ಗಳ್ ವರುಮ್** - ಬುದ್ಧಿಭ್ರಂಶಗಳು ಒರುವ ಸಂಭವ ಉಂಟು **ಅದುಕ್ಕು** - ಹಾಗೆ ಬಂದ ಜ್ಞಾನಭ್ರಂಶಕ್ಕೆ ಸದಾಚಾರ್ಯರುಗಳು ಪರಿಹಾರ ಮಾಡಿರುವವನ್ನು, **ಕಾಣಾನಿನ್ರೋಮ್** – ಕಂಡಿರುವೆವಷ್ಟೇ. ಅಂತವರುಗಳಿಗೆ ಆಚಾರ್ಯ ಕೃಪೆಯಿಂದ ಆ ಬುದ್ಧಿಭ್ರಮವು ತೊಲಗಿ ಪುನಃ ಸರಿಯಾದ ಜ್ಞಾನಪ್ರಾಪ್ತಿಯುಂಟಾದುದಕ್ಕೆ ನಿದರ್ಶನಗಳುಂಟೆಂದು ಹೇಳುತ್ತಾರೆ. ಶ್ರೀ ಎಂಬಾರರೇ ಮೊದಲಾದವರುಗಳಿಗೆ ವಿಪರೀತ ಸಂಸರ್ಗದಿಂದ ಬುದ್ಧಿಭ್ರಮವೂ ಆಚಾರ್ಯರ ಕೃಪೆಯಿಂದ ತತ್ಪರಿಹಾರವೂ ಉಂಟಾಯಿತೆಂದು ಶ್ರೀ ಸಾರಾಸ್ವಾದಿನಿಯವರು ತಿಳಿಸುತ್ತಾರೆ ಹಾಗೆಯೇ ಶ್ರೀ ಭಾಷ್ಯಕಾರರ ತಮ್ಮಂದಿರಾದ ಗೋವಿಂದ ಭಟ್ಟರಿಗೆ ಶೈವಸಂಸರ್ಗದಿಂದ ಬುದ್ಧಿಭ್ರಮವೂ ಅನಂತರ ತತ್ಪರಿಹಾರವೂ ಉಂಟಾದ ವೃತ್ತಾಂತವೂ ಉಂಟು. ತಮ್ಮ ಈ ಅಭಿಪ್ರಾಯವನ್ನು ಸಮರ್ಥನೆ ಮಾಡುವದಕ್ಕಾಗಿ ಮಹರ್ಷಿಗಳ ಸೂಕ್ತಿಗಳನ್ನು ಉದಾಹರಿಸಿರುತ್ತಾರೆ "**ಶಾಸ್ತ್ರಂ**-ಶಾಸ್ತ್ರವು, **ಏಕಂ ಯದಿ ಭವೇತ್** - ಒಂದೇಯಾಗಿದ್ದರೆ, ಅಥವಾ ಶಾಸ್ತ್ರವೆಲ್ಲಾ ಐಕಕಂಠ್ಯದಿಂದ ಸಮಂಜಸವಾಗಿ ಒಂದೇಯಾಗಿ ತೋರಿದರೆ, **ಜ್ಞಾನಂ ನಿಸ್ಸಂಶಯಂ ಭವೇತ್** - ಜ್ಞಾನವು ನಿಸ್ಸಂಶಯವಾದುದಾಗುತ್ತದೆ. ಇಹ - ಈ ಲೋಕದಲ್ಲಿ

---

(೧) ಇತಿಹಾಸ ಸಮುಚ್ಚಯಂ. (೨) ಭಾರ. ಶಾಂ. ೩೪೯-೭೧.

**ಸಸಂಶಯಾನ್ ಹೇತುಬಲಾನ್ನಾಧ್ಯಾವಸತಿ ಮಾಧವಃ” ಎನ್ನುವರ್ ಶೊನ್ನಾರ್‌ಗಳಿರೇ.**

---

ಯಾದರೋ, **ಶಾಸ್ತ್ರಾಣಾಂ ಬಹುತ್ವಾತ್** - ಶಾಸ್ತ್ರಗಳು ಬಹುವಾಗಿರುವದರಿಂದ, **ಜ್ಞಾನತತ್ತ್ವಂ** - ಯಥಾರ್ಥವಾದ ತತ್ತ್ವದ ಜ್ಞಾನವು ಅಥವಾ ಜ್ಞಾನಯಾಥಾರ್ಥ್ಯವು, **ಸುದುರ್ಲಭಮ್** – ಅತ್ಯಂತ ಕಷ್ಟತರವಾದುದು,” **ಎನ್ನುವರ್** - ಎಂದೂ, “**ನಿಸ್ಸಂಶಯೇಷು** - ಸಂಶಯವಿಲ್ಲದ, **ಸರ್ವೇಷು** - ಸಮಸ್ತರಲ್ಲೂ, **ಹರಿಃ** - ಶ್ರೀಕೃಷ್ಣನು, **ನಿತ್ಯಂ ವಸತಿ** - ಸದಾ ವಸಿಸುತ್ತಾನೆ, ಯಾವಾಗಲೂ ಸನ್ನಿಹಿತನಾಗಿರುತ್ತಾನೆ. **ಸಸಂಶಯಾನ್** - ಸಂಶಯಾವಿಷ್ಟರಾದ, **ಹೇತುಬಲಾನ್** - ಶಾಸ್ತ್ರಬಲವಿಲ್ಲದೆ ವಾದವೇ ಮುಖ್ಯಬಲವಾಗಿ ಉಳ್ಳ ಹೈತುಕರನ್ನು, **ಮಾಧವಃ**-ಲಕ್ಷ್ಮೀಪತಿಯು, **ನಾಧ್ಯಾವಸತಿ**-ಬಿಟ್ಟಗಲುವನು.” **ಎನ್ನುವರ್**-ಎಂಬದಾಗಿಯೂ, **ಶೊನ್ನಾರ್‌ಗಳಿರೇ**-ಹೇಳಿದರಷ್ಟೇ. ಎಲ್ಲವೂ ಶಾಸ್ತ್ರಗಳಾಗುವುದಿಲ್ಲವು ಯಾರು ಯಾರಿಗೆ ಹೇಗೆ ಹೇಗೆ ತೋರಿತೋ ಹಾಗೆಲ್ಲಾ ಬರೆದುದೆಲ್ಲವೂ ಶಾಸ್ತ್ರಗಳಲ್ಲವು. ವೇದಗಳೇ ಮುಖ್ಯ ಶಾಸ್ತ್ರಗಳು. ಅವುಗಳಿಗೆ ವಿರೋಧವಲ್ಲದೆ ಇವುಗಳ ಉಪಬೃಹ್ಮಣಗಳಾದ ಸ್ಮೃತಿ ಇತಿಹಾಸಗಳೇ ಪ್ರಮಾಣಗಳು, ಹೀಗೆ ಹದಿನಾಲ್ಕು ಶಾಸ್ತ್ರಗಳು ಉಪಾದೇಯಗಳು. ಅವುಗಳು ಯಾವುವೆಂದರೆ :— “**ಅಙ್ಗಾನಿ ವೇದಾಶ್ಚತ್ವಾರೋ ಮೀಮಾಂಸಾನ್ಯಾಯ ವಿಸ್ತರಃ । ಪುರಾಣಂ ಧರ್ಮಶಾಸ್ತ್ರಂ ಚ ವಿದ್ಯಾಹ್ಯೇತಾಶ್ಚತುರ್ದಶ॥**” ಎಂಬ ಶ್ಲೋಕದಲ್ಲಿ ಉಕ್ತವಾದಿತವು ಇಲ್ಲಿ **ಪುರಾಣಂ** ಎಂದರೆ ಬೇರೆ ಪ್ರಮಾಣ ಮೂಲಕ ಆರು ಸಾತ್ವಿಕ ಪುರಾಣಗಳು ಮಾತ್ರವೇ ಧರ್ಮಶಾಸ್ತ್ರವೆಂದರೆ ಮಾನವಾದಿ ಮುಖ್ಯ ಸ್ಮೃತಿಗಳು. ಇವು ವೇದಗಳಿಗೆ ವಿರುದ್ಧವಲ್ಲವೇ ಇರಬೇಕು.

ಇವುಗಳಿಗೆಲ್ಲಾ ಐಕಕಂಠ್ಯ ಉಂಟಾಗುವ ಹಾಗೆ ಸಮಂಜಸಾರ್ಥಗಳನ್ನು ಹೇಳಬಹುದು. ಯಾವನಿಗೆ ಇಂತಹ ಸಮಂಜಸಾರ್ಥವು ಉಪದೇಶ ಬಲದಿಂದಲೂ ಶ್ರೀ ಹರಿಕೃಪೆಯಿಂದಲೂ ಉಂಟಾಗುತ್ತದೋ ಆವನಿಗೆ ಶ್ರೀ ಹರಿಕೃಪೆಯುಂಟೆಂಬುವದು ಸಿದ್ಧವು. ಯಾವನಿಗೆ ಹಾಗೆ ಸಮಂಜಸಾರ್ಥ ತೋರದೆ ಐಕಕಂಠ್ಯವು ತೋರದೆ, ಪರಸ್ಪರ ವಿರುದ್ಧಗಳಾಗಿ ತೋರುತ್ತವೋ, ಅಂತವನು ಸಂಶಯಾವಿಷ್ಟ ಹೃದಯನು ಕುತರ್ಕಗಳನ್ನೂ ಯುಕ್ತಿವಾದಗಳನ್ನೂ ಮಾಡುತ್ತಾ ನಷ್ಟನಾಗುವನು, “**ಸಂಶಯಾತ್ಮಾ ವಿನಶ್ಯತಿ**” ಎಂದು ಹೇಳಲ್ಪಟ್ಟಿರುತ್ತದೆ. ಯದ್ಯಪಿ ಪುರಾಣಗಳೂ ಕೂಡ ಶ್ರುತಿಯ ಉಪಬೃಹ್ಮಣಗಳಾಗಿ ಪ್ರಮಾಣಗಳಾ

ದರೂ, ಶ್ರುತಿಯಲ್ಲಿರುವದೆಲ್ಲಾ ಹೇಗೆ ಉಪಾದೇಯವಲ್ಲವೋ, ಶ್ರೀ ಕೃಷ್ಣನೇ ಹಾಗೆ ಎಲ್ಲಾ ಉಪಾದೇಯವಲ್ಲವೆಂದು "ತ್ರೈಗುಣ್ಯವಿಷಯಾ ವೇದಾ ನಿಸ್ತ್ರೈಗುಣ್ಯೋ ಭವಾರ್ಜುನ" (ಗೀ. ೨.೪೫) ಎಂಬ ವಾಕ್ಯದಿಂದ ತಿಳಿಸಿ, ಸತ್ವಪ್ರಚುರ ಭಾಗಮಾತ್ರ ಹೇಗೆ ಉಪಾದೇಯವೋ, ಹಾಗೆಯೇ ೧೮ ಪುರಾಣಗಳಲ್ಲಿ ಆರು ಸಾತ್ವಿಕ, ಆರು ರಾಜಸ, ಆರು ತಾಮಸಗಳಾದುದರಿಂದ ೧೨ ಪುರಾಣಗಳನ್ನು ತ್ಯಜಿಸಿ, ಆರನ್ನು ಮಾತ್ರ ಪರಿಗ್ರಹಿಸತಕ್ಕದ್ದು. ಆದುದರಿಂದ ಶಾಸ್ತ್ರಗಳಿಗೆ ಹೈತುಕರ ಮೂಲಕ ಅಪಲಾಪ ಸಂಶಯಾದಿಗಳಿಲ್ಲದಹಾಗೆ ಉಪದೇಶ ಉಪಬೃಹ್ಮಣಗಳು ಆವಶ್ಯಕವೆಂದು ಏರ್ಪಟ್ಟಿತು. ಇಲ್ಲಿ ಮಹರ್ಷಿಗಳ್ ಪೂರ್ವಾರ್ಗಳಿರ ಎಂಬಲ್ಲಿ ಮಹರ್ಷಿಗಳು ಯಾರೆಂದರೆ, ಇತಿಹಾಸ ಸಮುಚ್ಚಯ ಗ್ರಂಥಕರ್ತರು ಮತ್ತು ವ್ಯಾಸ ಮಹರ್ಷಿಗಳು ಹೇಳಲ್ಪಟ್ಟರು. ಹೀಗೆ ಹೈತುಕ ಸಂಸರ್ಗದಿಂದ ಸಂಶಯ ಅದರಿಂದ ಅನರ್ಥಗಳೂ ಪ್ರಾಪ್ತವಾಗಬಹುದೆಂಬುದು ಸಮರ್ಥಿಸಲ್ಪಟ್ಟಿತು.

ಆದರೆ, ಪ್ರಪನ್ನನಿಗೆ ಅಂತಹ ಸಂಶಯ, ಬುದ್ಧಿಭ್ರಂಶ, ದುರ್ಗತಿಯು ಉಂಟಾಗುವುದಿಲ್ಲವೆಂದು ಶಾಸ್ತ್ರಗಳಲ್ಲಿ ಹೇಳಿದೆಯಲ್ಲಾ ಎಂದರೆ ಅದಕ್ಕೆ ಸಮಾಧಾನ ಹೇಳುತ್ತಾರೆ. ಆ ಪ್ರಮಾಣಗಳು ಯಾವುವೆಂದರೆ :—

"ಸ್ವಲ್ಪಮಪ್ಯಸ್ಯ ಧರ್ಮಸ್ಯ ತ್ರಾಯತೇ ಮಹತೋ ಭಯಾತ್" (ಗೀ. ೨.೪೦) ಸ್ವಲ್ಪವಾಗಿ ಅನುಷ್ಠಿಸಿದ ಧರ್ಮವೂ ಕೂಡ ಮಹತ್ತಾದ ಭಯದಿಂದ ರಕ್ಷಿಸುತ್ತದೆ.

"ನ ಹಿ ಕಲ್ಯಾಣಕೃತ್ಕಶ್ಚಿದ್ದುರ್ಗತಿಂ ತಾತಗಚ್ಛತಿ" (ಗೀ ೬.೪೦) ಭಗವದುಪಾಸನಾದಿ ಶುಭಕರ್ಮವನ್ನು ಮಾಡದವನಿಗೆ ದುರ್ಗತಿ ಎಂಬುದಿಲ್ಲವು.

"ನ ಕ್ರೋಧೋ ನ ಚ ಮಾತ್ಸರ್ಯಂ ನ ಲೋಭೋ ನಾಶುಭಾ ಮತಿಃ । ಭವಂತಿ ಕೃತಪುಣ್ಯಾನಾಂ ಭಕ್ತಾನಾಂ ಪುರುಷೋತ್ತಮೇ ।" ಪುರುಷೋತ್ತಮನಲ್ಲಿ ಭಕ್ತಿಯುಳ್ಳ ಕೃತೋಪಾಯರಿಗೆ ಕ್ರೋಧವಾಗಲಿ, ಮಾತ್ಸರ್ಯವಾಗಲಿ, ಮಾತ್ಸರ್ಯವೆಂದರೆ ದೋಷವಿಲ್ಲದ ಸ್ಥಳದಲ್ಲಿ ದೋಷಾರೋಪಣೆಯು, ಲೋಭವಾಗಲಿ, ಅಮಂಗಳ ಬುದ್ಧಿಯಾಗಲಿ, ಇದರಿಂದ ಸಂಶಯ ಮತಿಭ್ರಂಶಾದಿಗಳು ಹೇಳಲ್ಪಟ್ಟವು, ಇವು ಯಾವುವೂ ಉಂಟಾಗುವುದಿಲ್ಲವು.

"ಬುದ್ಧಿಭ್ರಂಶೋ ನ ಭವೇತ್" ಉಪಾಯನಿಷ್ಠರಿಗೆ ಬುದ್ಧಿಭ್ರಂಶವುಂಟಾಗುವುದಿಲ್ಲವು.

ಇತ್ಯಾದಿ ಪ್ರಮಾಣಗಳೆಲ್ಲಾ ಇರುವಾಗ ಕೃತೋಪಾಯನಾದ ಪ್ರಪನ್ನನಿಗೂ ಸಂಶಯ ಬುದ್ಧಿಭ್ರಂಶಾದಿಗಳುಂಟೆಂದು ಹೇಳಿದುದು ಹೇಗೆ? ಕರ್ಮಯೋಗ ಜ್ಞಾನಯೋಗಾದಿ ಉಪಾಸನೆಯಲ್ಲಿದ್ದು ಉಪಾಯ ಪೂರ್ತಿಯಲ್ಲದವರಿಗೇನೇ

(೧) "ನಕ್ರೋಧೋ ನಚಮಾತ್ಸರ್ಯಂ ನಲೋಭೋ ನಾಶುಭಾಮತಿಃ" ಇತ್ಯಾದಿಗಳುಮ್ ಆತ್ಮಗುಣ ಪರಿಪೂರ್ಣಾಧಿಕಾರಿ ವಿಶೇಷ ವಿಷಯತ್ತಿಲೆ ಯಾಗಕ್ಕಡವನ. ಅನ ಪಿನ್ಪು, ಆರುರುಕ್ಷುಕ್ಕಳುಕ್ಕುಕ್ಕಲಕ್ಕಮುಂಡೆನ್ರು ಮಿಡಮ್ (೨) "ಧ್ಯಾಯತೇಶಿಲಗೋವಿಂದೇ ಭಕ್ತಿಮುದ್ವಹತಾಂನೃಣಾಂ।

ಮಹದ್ಭಯವೂ ದುರ್ಗತಿಯೂ ಇಲ್ಲವೆಂದು ಹೇಳಿರುವಾಗ, ಪ್ರಪತ್ತಿಯನ್ನನುಷ್ಠಿಸಿ ಕೃತಕೃತ್ಯನಾದವನಿಗೆ ಬುದ್ಧಿಭ್ರಂಶವೂ, ಅಶುಭವೂ, ದುರ್ಗತಿಯೂ ಇಲ್ಲವೆಂಬುದು ಕೈಮುತಿಕ ನ್ಯಾಯಸಿದ್ಧವಲ್ಲವೇ ? ಎಂದರೆ, ಇವೆಲ್ಲಾ ಆತ್ಮಗುಣ ಪರಿಪೂರ್ಣರಾಗಿ ಸಂಶಯಾದಿಗಳಿಗೆ ಅವಕಾಶವಿಲ್ಲದವರ ವಿಷಯವೆಂದು ಗ್ರಹಿಸತಕ್ಕದ್ದೆಂದು ಹೇಳಬೇಕೆಂದೂ, ಉಪದೇಶಬಲದಿಂದ ಉಪಾಯಾನುಷ್ಠಾನ ಮಾಡಿದ ಮಂದ ಪ್ರಜ್ಞರಿಗೆ ಸಂಶಯ ಮತಿಭ್ರಂಶಾದಿಗಳು ಕುತರ್ಕಸಂಸರ್ಗದಿಂದ ಪ್ರಾಪ್ತವಾಗುವುದು ಸಿದ್ಧವೆಂದೂ, ಹೇಳುತ್ತಾರೆ.

"ನ ಕ್ರೋಧೋ ನ ಚ ಮಾತ್ಸರ್ಯಂ" ಇತ್ಯಾದಿಗಳುಮ್ - ಇವೇ ಮೊದಲಾದ ಪ್ರಮಾಣಗಳೂ, ಆತ್ಮಗುಣ ಪರಿಪೂರ್ಣಾಧಿಕಾರಿ ವಿಶೇಷ - ಜೀವಾತ್ಮನ ಸರ್ವಶ್ರೇಷ್ಠ ಗುಣಗಳು ಜ್ಞಾನ, ಭಕ್ತಿ ವೈರಾಗ್ಯಗಳು, ಇವುಗಳು ಪರಿಪೂರ್ಣವಾಗಿರುವ ವಿಶೇಷಾಧಿಕಾರಿಯನ್ನು, ವಿಷಯತ್ತಿಲೆ ಆಗಕ್ಕಡವನ - ಕುರಿತು ಹೇಳಿದುದಾಗಿ ಭಾವಿಸತಕ್ಕದ್ದೇ ಯುಕ್ತವು. ಹೀಗೆ ಜ್ಞಾನ ಭಕ್ತಿ ವೈರಾಗ್ಯಗಳು ಪರಿಪೂರ್ಣವಾಗಿರುವವನ ವಿಷಯದಲ್ಲಿ ಹೇಳಿದ ಪ್ರಮಾಣಗಳೆಂದು ಇವುಗಳಿಗೆ ಗತಿ ಕಲ್ಪಿಸತಕ್ಕದ್ದೇ ಯುಕ್ತವು. ಏಕೆಂದರೆ ಹಾಗೆ ಈ ಆತ್ಮಗುಣ ಪೂರ್ತಿಗಳು ಪೂರ್ಣವಾಗದ ಅಧಿಕಾರಿಗಳಿಗೆ ಸಂಶಯ ಭ್ರಮಾದಿಗಳು ತಪ್ಪುವುದಿಲ್ಲವೆಂದು ಮುಂದಿನ ವಾಕ್ಯದಿಂದ ಹೇಳುತ್ತಾರೆ.

ಅನ ಪಿನ್ಪು - ಹೀಗಾದ ಮೇಲೆ ಎಂದರೆ, "ನ ಕ್ರೋಧೋ ನ ಚ ಮಾತ್ಸರ್ಯಂ" ಇತ್ಯಾದಿ ಪ್ರಮಾಣಗಳು ಆತ್ಮಗುಣ ಪರಿಪೂರ್ಣಾಧಿಕಾರ ವಿಷಯವಾದ ನಂತರ, ಆರುರುಕ್ಷುಗಳುಕ್ಕು - ಹಾಗೆ ಆತ್ಮಗುಣ ಪರಿಪೂರ್ಣರಿಲ್ಲದ ಅಧಿಕಾರಿಗಳಾಗಿ ಭಗವದ್ವಿಷಯದಲ್ಲಿ ಪ್ರವರ್ತಿಸಲು ಇಚ್ಛೆಯುಳ್ಳವರಿಗೆ, ಅದಕ್ಕಾಗಿ ಶಾಸ್ತ್ರಾಭ್ಯಾಸ ಪ್ರಾರಂಭಿಸಿರುವವರಿಗೆ, ಕಲಕ್ಕಮುಂಡೆನ್ರುಮಿಡಮ್ - ಬುದ್ಧಿವೈಕಲ್ಯವು, ಬುದ್ಧಿಭ್ರಂಶವು ಉಂಟೆಂಬುದು, "ಗೋವಿಂದೇ - ಗೋವಿಂದನಲ್ಲಿ, ಭಕ್ತಿಂ - ಭಕ್ತಿಯನ್ನು, ಉದ್ವಹತಾಂ - ವಹಿಸುತ್ತಿರುವ,

(೧) ಭಾರತ. ಅನು (೨) ವಿಷ್ಣುಧರ್ಮ. ೨.೨೫.

"ಸಂಸಾರ ನ್ಯೂನತಾಭೀತಾ ಸ್ತ್ರಿದಶಾಃ ಪರಿಪನ್ಥಿನಃ" (೧) "ಸತ್ಯಂ ಶತೇನ ವಿಘ್ನಾನಾಂ ಸಹಸ್ರೇಣ ತಥಾ ತಪಃ । ವಿಘ್ನಾಯುತೇನ ಗೋವಿಂದೇ ನೃಣಾಂ ಭಕ್ತಿರ್ನಿವಾರ್ಯತೇ" ಇತ್ಯಾದಿಗಳಲ್ಲೇ ಪ್ರಸಿದ್ಧಮ್.

---

ನೃಣಾಂ - ಮನುಷ್ಯರಿಗೆ, ಸಂಸಾರನ್ಯೂನತಾ ಭೀತಾಃ - ತಮ್ಮ ಭೋಗರೂಪ ಸಂಸಾರಕ್ಕೆ ನ್ಯೂನತೆ ಬರುತ್ತದೆಂದು ಭಯಪಟ್ಟ, ತ್ರಿದಶಾಃ - ದೇವತೆಗಳು, ಪರಿಪಂಥಿನಃ - ಶತ್ರುಗಳು, ಎಂದು, ಶ್ರೂಯತೇ ಕಿಲ - ಶ್ರುತಿಯಲ್ಲಿ ಹೇಳಲ್ಪಟ್ಟಿರುತ್ತದಲ್ಲವೇ ? ಇಲ್ಲಿ ಭಕ್ತಿಮುದ್ವಹತಾಂ ಎಂದು ಹೇಳಿರುವುದರಿಂದ ಆರುರುಕ್ಷುಗಳೆಂಬುದು ವ್ಯಕ್ತವು, ಅಂತವರಿಗೆ ದೇವತೆಗಳಿಂದ ತೊಂದರೆಯುಂಟೆಂಬುದು ತೋರಬರುತ್ತದೆ. ಏಕೆಂದರೆ, ಇವರು ಭಕ್ತಿಯನ್ನು ಮಾಡಿ ಎಲ್ಲಿ ತಮ್ಮ ಪದವಿಗೆ ಬರುತ್ತಾರೋ, ಅದರಿಂದ ತಮಗೆಲ್ಲಿ ತೊಂದರೆಯುಂಟಾಗುತ್ತದೋ ಎಂದು ಭೀತರಾಗಿ ಅಂತಹ ಭಕ್ತಿ ಮಾಡುವವರನ್ನು ದ್ವೇಷಿಸಿ ಅವರಿಗೆ ಅನೇಕ ವಿಘ್ನಗಳನ್ನುಂಟುಮಾಡಿರುತ್ತಾರೆಂಬ ತಾತ್ಪರ್ಯವು. ಆದುದರಿಂದ ಇಂತಹ ಆರುರುಕ್ಷುಗಳಿಗೆ ದೇವತೆಗಳ ದ್ವೇಷದಿಂದ ಮತಿಭ್ರಂಶವು ಉಂಟಾಗಬಹುದೆಂಬ ಭಾವವು. ಇನ್ನೊಂದು ಪ್ರಮಾಣದಿಂದಲೂ ವಿಘ್ನಗಳುಂಟೆಂದು ತೋರಿಸುತ್ತಾರೆ. ನೃಣಾಂ-ಮನುಷ್ಯರಿಗೆ, ವಿಘ್ನಾನಾಂ ಶತೇನ-ವಿಘ್ನಗಳ ನೂರರಿಂದ, ಸತ್ಯಂ-ಸತ್ಯವು, ನಿವಾರ್ಯತೇ-ನಿವಾರಣೆ ಮಾಡಲ್ಪಡುತ್ತದೆ. ಸತ್ಯಕ್ಕೆ ನೂರು ವಿಘ್ನಗಳುಂಟು ಎಂದರೆ ಅನೇಕ ವಿಘ್ನಗಳುಂಟೆಂಬ ಭಾವವು. ತಥಾ - ಹಾಗೆಯೇ, ವಿಘ್ನಾನಾಂ ಸಹಸ್ರೇಣ - ಸಾವಿರ ವಿಘ್ನಗಳಿಂದ, ತಪಃ-ತಪಸ್ಸು, ನಿವಾರ್ಯತೇ-ನಿವಾರಣೆ ಮಾಡಲ್ಪಡುತ್ತದೆ. ವಿಘ್ನಾಯುತೇನ-ಹತ್ತುಸಾವಿರ ವಿಘ್ನಗಳಿಂದ ಗೋವಿಂದೇ ಭಕ್ತಿಃ-ಗೋವಿಂದನಲ್ಲಿರುವ ಭಕ್ತಿಯು, ನಿವಾರ್ಯತೇ-ನಿವಾರಣೆಮಾಡಲ್ಪಡುತ್ತದೆ. ಹೀಗೆ ಸತ್ಯಕ್ಕೂ, ತಪಸ್ಸಿಗೂ, ಭಕ್ತಿಗೂ ಸಹ ವಿಘ್ನಗಳುಂಟೆಂದು ಹೇಳಲ್ಪಟ್ಟಿರುತ್ತದೆ. ಇಲ್ಲಿಯೂ ವಿಘ್ನಕರ್ತರು ಯಾರೆಂಬುವ ಪ್ರಶ್ನೆಯುಂಟಾದರೆ, ಮೇಲಿನ ಶ್ಲೋಕದಲ್ಲಿ ತ್ರಿದಶಾಃ ಪರಿಪನ್ಥಿನಃ ಎಂದು ಹೇಳಿರುವ ಹಾಗೆ ದೇವತೆಗಳೇ ವಿಘ್ನಮಾಡುವವರು. ವಿಶ್ವಾಮಿತ್ರಾದಿಗಳ ತಪಸ್ಸಿಗೆ ದೇವತೆಗಳು ವಿಘ್ನಮಾಡಿರುವುದು ಸುಪ್ರಸಿದ್ಧವು. ಇತ್ಯಾದಿಗಳಿಂದ ಪ್ರಸಿದ್ಧವು ಇವೇ ಮೊದಲಾದ ಪ್ರಮಾಣಗಳಲ್ಲಿ ಬಹು ವ್ಯಕ್ತವಾಗಿ ತೋರುತ್ತದೆ. ಇಲ್ಲಿ ಎರಡು ಪರಸ್ಪರ ವಿರುದ್ಧಗಳಾದ ಪ್ರಮಾಣಗಳಿವೆ. ಕೆಲವು ನಕ್ರೋಧೋ ನ ಚ ಮಾತ್ಸರ್ಯಂ ಇತ್ಯಾದಿ ಪ್ರಮಾಣಗಳು, ಪ್ರಪನ್ನನಿಗೆ

---

(೧) ವಿಷ್ಣು ಧರ್ಮ. ೭೪.೯೪.

## ಸಿದ್ಧೋಪಾಯ ವಿಷಯೇ ಶಙ್ಕಾಃ, ತಾಸಾಂ ಪರಿಹಾರಾಶ್ಚ.

**ಅದಿಲ್ ಮುರ್ಪಡ ಸಿದ್ಧೋಪಾಯತ್ತೈಪ್ಪತ್ತ ವರುಮ್ ಕಲಕ್ಕಙ್ಗಳುಮ್, ಅವತ್ತಿನ್ ಪರಿಹಾರಙ್ಗಳುಮ್ ಶೊಲ್ಲುಗಿರೋಮ್.**

---

ಏನೊಂದೂ ತೊಂದರೆಗಳಿಲ್ಲವು, ಅತನಿಗೆ ಬುದ್ಧಿಭ್ರಂಶಾದಿಗಳಿಲ್ಲವೆಂದು ಹೇಳುತ್ತವೆ. ಇನ್ನು ಕೆಲವು "ಸತ್ಯಂ ಶಪೇನ" ಇತ್ಯಾದಿಗಳಿಂದ ವಿಘ್ನಗಳೂ ಅನರ್ಥಗಳೂ ಉಂಟೆಂದು ಹೇಳುತ್ತವೆ ಇವುಗಳಿಗೆ ಸಾಮಂಜಸ್ಯವನ್ನು ಕಲ್ಪಿಸುವದಕ್ಕಾಗಿ ಮೊದಲಿನ ಪ್ರಮಾಣಗಳು ಆತ್ಮಗುಣ ಪರಿಪೂರ್ಣಾಧಿಕಾರ ವಿಷಯವಾದುವು, ಎರಡನೆಯವು ಹಾಗೆ ಪರಿಪೂರ್ಣಾಧಿಕಾರಿ ವಿಷಯವಲ್ಲದೆ ಆರುರುಕ್ಷುಗಳ ವಿಷಯವಾದುವೆಂದೇ ನಿರ್ಧರಿಸಬೇಕಾಗಿದೆ ಎಂಬ ತಾತ್ಪರ್ಯವು. ಆದುದರಿಂದ ಉಪಾಯಾನುಷ್ಠಾನ ಮಾಡಿದವನಿಗೂ ಹೈತುಕವಾದಗಳಿಂದ ಬುದ್ಧಿ ಭ್ರಂಶವೇ ಮೊದಲಾದಅನರ್ಥಗಳು ಉಂಟೆಂಬುದು ಸ್ಥಾಪಿಸಲ್ಪಟ್ಟಿತು. ಆ ಕಾರಣದಿಂದಲೇ ಸ್ಥಿರೀಕರಣಭಾಗದ ಆರಂಭವು ಅತ್ಯಾವಶ್ಯಕವೆಂಬುದು ಏರ್ಪಟ್ಟಿತು. ಹೀಗೆ ಬುದ್ಧಿಭ್ರಂಶಗಳಿಂದ ಶಙ್ಕಾಗಳು ಉತ್ಪನ್ನವಾಗುವದರಿಂದ ಅವುಗಳಿಗೆ ಸಮಾಧಾನಗಳನ್ನು ಹೇಳತಕ್ಕದ್ದು ಅತ್ಯಾವಶ್ಯಕವು. ಹಿಂದೆಯೇ ಈ ಶಂಕಾಗಳು ನಾಲ್ಕು ಸಂದರ್ಭದಲ್ಲಿ ಪ್ರಾಪ್ತವಾಗಬಹುದೆಂದು ಹೇಳಲ್ಪಟ್ಟವು. ಅದರಲ್ಲಿ ಮೊದಲು ಸಿದ್ಧೋಪಾಯ ವಿಷಯದಲ್ಲುಂಟಾಗುವ ಶಂಕಾಗಳನ್ನು ಹೇಳಿ ಅವುಗಳಿಗೆ ಪರಿಹಾರಗಳನ್ನು ತಿಳಿಸುವುದಾಗಿ ಪ್ರತಿಜ್ಞೆ ಮಾಡಿರುತ್ತಾರೆ:—

### ಸಿದ್ಧೋಪಾಯ ವಿಷಯದಲ್ಲುಂಟಾಗುವ ಶಙ್ಕಾಗಳೂ, ಅವುಗಳ ಪರಿಹಾರಗಳೂ.

ಅದಿಲ್ – ಬರೀ ಯುಕ್ತಿವಾದದಿಂದ ಶಂಕಾಗಳು ಉತ್ಪನ್ನವಾಗುತ್ತವೆಂಬ ಸಂದರ್ಭದಲ್ಲಿ, ಮುರ್ಪಡ - ಮೊದಲು, ಸಿದ್ಧೋಪಾಯತ್ತೈಪ್ಪತ್ತ – ಸಿದ್ಧೋಪಾಯವನ್ನು ಕುರಿತು, ವರುಮ್ - ಯುಕ್ತಿ ಮೂಲಕ ಪ್ರಾಪ್ತವಾಗುವ, ಕಲಕ್ಕಙ್ಗಳುಮ್ - ಭ್ರಮೆಗಳನ್ನೂ, ಶಂಕಾಗಳನ್ನೂ, ಅವತ್ತಿನ್ ಪರಿಹಾರಙ್ಗಳುಮ್ – ಅವುಗಳ ಪರಿಹಾರಗಳನ್ನೂ, ಶೊಲ್ಲುಗಿರೋಮ್ - ಹೇಳುವೆವು, ಎಂಬುದಾಗಿ ಪ್ರತಿಜ್ಞಾ ವಾಕ್ಯವನ್ನು ಹೇಳಿ ಉಪದೇಶಿಸುತ್ತಾರೆ.

ಇಲ್ಲಿ ಮುಂದೆ ಉಪಪಾದಿಸಲ್ಪಡುವ ಶಂಕಾಗಳನ್ನು ಮೂರು ವಿಧವಾಗಿ ವಿಭಾಗಿಸಬಹುದು. ಅವು ಯಾವುವೆಂದರೆ:—(೧) ಸರ್ವೇಶ್ವರನ ಸ್ವಾತಂತ್ರ್ಯ

## ೧. ಭಗವತ್ಸ್ವಾತಂತ್ರ್ಯಕಾರುಣ್ಯಾಪೇಕ್ಷಯಾ ಪ್ರಪತ್ತ್ಯನನುಷ್ಠೇಯತ್ವಮಿತಿ ಶಙ್ಕಾ ನಿರಾಸಃ

ಅನಾದಿಕಾಲ ಮನಾದರಿತ್ತ ಈಶ್ವರರ್, ಇನ್ರೊರುತ್ತನೈ ಆದರಿಕ್ಕಿರದು ತನ್ ಸ್ವಾತಂತ್ರ್ಯಮಾತ್ರತ್ತಾಲೆ ಯನ್ರೋ? ಇಙ್ಙನನ್ರಾಗಿಲ್, (೧) "ಇನ್ರುನ್ನೈಪ್ಪೊರುಳಾಕ್ಕಿತ್ತನ್ನೈ ಯೆನ್ನುಳ್ ವೈತ್ತಾನ್, ಅನ್ರುನ್ನೈ

---

ಸಹಜಕಾರುಣ್ಯಮೂಲಕವಾಗಿ ಉಂಟಾಗುವ ಶಂಕಾಗಳೂ ಅವುಗಳ ಪರಿಹಾರಗಳೂ, (೨) ಗುಣವಿಶೇಷ ಸಂಬಂಧವಿಶೇಷ ಮೂಲಕವಾಗಿ ಉಂಟಾಗುವ ಶಂಕಾಗಳೂ ಪರಿಹಾರಗಳೂ, (೩) ಪತ್ನಿಯ ಸಂಬಂಧದಿಂದುಂಟಾಗುವ ಶಂಕಾಗಳೂ ಪರಿಹಾರಗಳೂ. ಇವುಗಳಲ್ಲಿ ಮೊದಲು ಸರ್ವೇಶ್ವರನ ಸ್ವಾತಂತ್ರ್ಯ ಸಹಜಕಾರುಣ್ಯ ಮೂಲಕ ಉಂಟಾಗುವ ಶಂಕಾಗಳೂ ಪರಿಹಾರಗಳೂ ಉಪಪಾದಿಸಲ್ಪಡುವುವು.

## ೧. ಭಗವಂತನ ಸ್ವಾತಂತ್ರ್ಯ ಕಾರುಣ್ಯಗಳ ಮುಂದೆ ಪ್ರಪತ್ತ್ಯನುಷ್ಠಾನವು ಬೇಕಿಲ್ಲವೆಂಬ ಶಙ್ಕೆಯ ನಿರಾಸವು.

ಮೊದಲು ಪೂರ್ವಪಕ್ಷ ರೀತಿಯಲ್ಲಿ ಶಂಕಾವನ್ನು ಅನಾದಿಕಾಲಂ ಎಂದಾರಂಭಿಸಿ, ಕೆಲಙ್ಗಳ್ವರ್‌ಗಳ್ ಎನ್ನುವವರೆಗೂ, ಉಪಪಾದಿಸುತ್ತಾರೆ :— ಅನಾದಿಕಾಲಂ-ಅನಂತವಾದ ಪೂರ್ವಕಾಲದಿಂದಲೂ, ಯಾವಾಗಲಿಂದ ಎಂದು ಹೇಳಲು ಸಾಧ್ಯವಿಲ್ಲದ ಕಾಲದಿಂದ, ಅನಾದರಿತ್ತ - ತನ್ನ ಭಕ್ತನನ್ನಾಗಿ ಭಾವಿಸಿ ದಿವ್ಯ ವೈಕುಂಠಪ್ರಾಪ್ತಿಯನ್ನು ಕೊಡದೆ ಅನಾದರ ಮಾಡಿದ್ದ ಸರ್ವೇಶ್ವರನು, ಇನ್ರು - ಈಗ, ಒರುತ್ತನೈ - ಒಬ್ಬ ಬದ್ಧಚೇತನನನ್ನು, ಆದರಿಕ್ಕಿರದು - ಆತನಲ್ಲಿ ಪ್ರೀತಿಮಾಡಿ ಆತನಿಗೆ ವೈಕುಂಠಪ್ರಾಪ್ತಿಯನ್ನು ದಯಪಾಲಿಸುವದು, ತನ್ ಸ್ವಾತಂತ್ರ್ಯ ಮಾತ್ರತ್ತಾಲೆಯನ್ರೋ - ತನಗಿರುವ ಸ್ವಾತಂತ್ರ್ಯ ಮೂಲಕವಾಗಿಯಲ್ಲವೇ? ಎಂದರೆ ಈಶ್ವರ ಸಹಜ ಸ್ವಾತಂತ್ರ್ಯವೇ ಮುಖ್ಯಕಾರಣವಾಗಿರುವಾಗ ಇದಕ್ಕೆ ಬೇರೆ ವ್ಯಾಜವೊಂದು ಬೇಕೇ? ಉಪಾಯಾನುಷ್ಠಾನವೆಂಬ ವ್ಯಾಜ ಬೇಕೇ? ಎಂಬದಾಗಿ ಆಕ್ಷೇಪವು ಅವರ ಸಮರ್ಥನೆಗಾಗಿ ನಮ್ಮಾಳ್ವಾರ್ರವರ ಪಾಶುರವೊಂದನ್ನು ಪೂರ್ವಪಕ್ಷ ರೀತ್ಯಾ ಉದಾಹರಿಸಬಹುದು, ಅದು ಯಾವುದೆಂದರೆ ಹೇಳುತ್ತಾರೆ :—

ಇನ್ರು - ಈಗ, ಎನ್ನೈ ಪ್ಪೊರುಳಾಕ್ಕಿ - "ಅಸನ್ನೇವ ಸ ಭವತಿ" ಎಂಬ

---

(೧) ತಿರುವಾಯ್ಮೊಳಿ ೧೦.೮ ೯.

ಹಾಗೆ ಅಸತ್ತೆಂದೆನಿಸಿಕೊಂಡಿದ್ದ ನನ್ನನ್ನು, "ಅಸ್ತಿ ಬ್ರಹ್ಮೇತಿಚೇದ್ವೇದ ಸಂತ ಮೇನಂತತೋವಿದುಃ" ಎಂದು ಹೇಳಿರುವ ಹಾಗೆ, ಎನ್ನೈ ತ್ತೋರಳಾಕ್ಕಿ - ನನ್ನನ್ನು ಒಂದು ವಸ್ತುವನ್ನಾಗಿ ಮಾಡಿ, ತನ್ನೈ - ವಿಶೇಷ ಭೋಗ್ಯನಾದ ತನ್ನನ್ನು, ಎನ್ನುಳ್ ವೈತ್ತಾನ್ ಹೇಯುವಾದ ನನ್ನ ಹೃದಯ ಗುಹೆಯಲ್ಲಿ ದಿವ್ಯ ಮಙ್ಗಳ ವಿಗ್ರಹಯುಕ್ತ ದಶೆಯನ್ನು ಹೊಂದುವ ಹಾಗೆ ಮಾಡಿಕೊಂಡನು. ಅಥವಾ ನನ್ನ ಮನಸ್ಸಿನಲ್ಲಿ ಸದಾ ಇರುವ ಹಾಗೆ ಮಾಡಿಕೊಂಡನು. ಅನ್ರು - ಅನಂತವಾದ ಪೂರ್ವಕಾಲದಲ್ಲಿ, ಎನ್ನೈ ಪ್ಪುರಮ್ಪೋಕ - ಬಾಹ್ಯ ವಿಷಯ ಮಾರ್ಗದಲ್ಲಿ ಹೋಗುವ ಹಾಗೆ ಮಾಡಿ, ಪ್ಪುಣರ್ತ್ತದು - ಬಂಧಕ್ಕೆ ಸಿಕ್ಕುವ ಹಾಗೆ ಮಾಡಿದುದು, ಎನ್ ಶೆಯ್ವಾ - ಏತಕ್ಕಾಗಿ ಮಾಡಿದನು ? "ಕುನ್ರನ್ನ ತ್ತಿಗಳ್ ಮಾಡಙ್ಗಳ್ ಶೂಳ್ ತಿರುಪ್ಪೇರಾ । ನೂನ್ರನಕ್ಕರುಳ್‌ಶೆಯ್ಯು ಪ್ಪುಣರ್ತ್ತಲುಱ್ಱನೇ" ಎಂಬುವದು ಉತ್ತರಾರ್ಧವು, ಇದರರ್ಥವು, ಕುನ್ರನ್ನ ತಿಗಳ್ ಮಾಡಙ್ಗಳ್ ಶೂಳ್ - ಬೆಟ್ಟಗಳೋ ಎಂದು ಹೇಳಬಹುದಾದ ಪ್ರಕಾಶಿ ಸುತ್ತಿರುವ ಹರ್ಮ್ಯಪ್ರಾಸಾದಗಳಿಂದ ತುಂಬಿದ, ತಿರುಪ್ಪೇರಾ - ತಿರುಪ್ಪೇರೆಂಬ ಕ್ಷೇತ್ರದಲ್ಲಿ ಬಿಜಮಾಡಿಸಿರುವ ಸ್ವಾಮಿಯು, ಒನ್ರು - ಹಿಂದೆ ಏಕೆ ದಯ ಪಾಲಿಸಲಿಲ್ಲ, ಈಗ ಏಕೆ ದಯಪಾಲಿಸಿದನು ಎಂಬೆರಡು ಪ್ರಶ್ನೆಯಲ್ಲಿ ಒಂದಕ್ಕೆ ಪ್ರತ್ಯುತ್ತರವನ್ನು, ಎನಕ್ಕರುಳ್ ಶೆಯ್ಯ - ನನಗೆ ಕೃಪೆ ಮಾಡಿ ಹೇಳಬೇಕೆಂದು ಉಣರ್ತ್ತಲುತ್ತೇನ್ - ನಿನ್ನ ಮನಸ್ಸಿಗೆ ಹಿಡಿಯುವಹಾಗೆ ತಿಳಿಸಬೇಕೆಂದು ಉದ್ಯೋಗಿಸಿದ್ದೆನು." ನಮ್ಮಾಳ್ವಾರವರು ಸರ್ವೇಶ್ವರನನ್ನು ಕೇಳುತ್ತಾರೆ :— ಹಿಂದೆ ಅನಾದಿ ಕಾಲದಿಂದಲೂ ಅನಾದರದಿಂದ ಕಂಡಿರಿ, ಈಗ ಆದರದಿಂದ ಕಾಣುತ್ತೀರಿ ಇವೆರಡರಲ್ಲಿ ಒಂದಕ್ಕಾದರೂ ದಯಮಾಡಿ ಕಾರಣವನ್ನು ತಿಳಿಸ ಬೇಕೆಂದು ಪ್ರಾರ್ಥಿಸಿರುತ್ತಾರೆ. ನಂಜೀಯರವರು ಈ ಪಾಶುರಾರ್ಥವನ್ನು ತಮ್ಮ ಆಚಾರ್ಯರಾದ ಭಟ್ಟರವರ ಮೂಲಕ ಸಂಗ್ರಹಿಸುವ ಕಾಲದಲ್ಲಿ ಸರ್ವೇಶ್ವರನು ಏನು ಪ್ರತ್ಯುತ್ತರವನ್ನು ಕೊಟ್ಟನೆಂದು ಕೇಳಲು ಅದಕ್ಕೆ ಭಟ್ಟರು, "ಈ ಆಳ್ವಾರ್ ತಳಿಗೆ ಇಷ್ಟು ದಿನವೂ ಏನೋ ದೋಷಗಳನ್ನು ಕಟ್ಟಿಬಿಟ್ಟೆನು, ಇದಕ್ಕೇನು ಉತ್ತರ ಹೇಳಲಾಗುತ್ತದೆ" ಎಂದು ಲಜ್ಜೆಯಿಂದ ಸುಮ್ಮನಿದ್ದನು ಎಂದು ಪ್ರತ್ಯುತ್ತರ ಕೊಟ್ಟರೆಂದು ಹೇಳುತ್ತಾರೆ ; ಹಿಂದೆ ಆಳ್ವಾರಿಗೆ ರುಚಿ ಹುಟ್ಟರಲಿಲ್ಲವೆಂದರೂ ಕಾರಣ ಹೇಳಲಾಗುವದಿಲ್ಲವು, ಈಗ ಸಾಧನಾನುಷ್ಠಾನ ಮಾಡಿದರು ಎಂದು

**ಪ್ಪಂತಿಯಾಯ್ಯು, ಸರ್ವೇಶ್ವರರ್ ತೂಳ್‌ವಿಶುಮ್ಬ್ ಅಣಿಮುಗಿಲ್ ತೂರಿಯ**
**ಮುಳಕ್ಕಿನ, ಇತೊಳಿಯವೇರೊರು ಉತ್ತರ ಮರುಳಿಚ್ಚೆಯ್‌ದಾನೋ ?**
**ಅಗ್ಗೈಯಾಲ್ ನಾಮೊರು ಉಪಾಯಾನುಷ್ಠಾನಮ್ ಪಣ್ಣುಗೈ ಯೆನ್ನೆನ್ಪದು**

---

ಕಾರಣವನ್ನೂ ಹೇಳಲಾಗುವದಿಲ್ಲವು, ಎಂದರು. ಹೀಗಾದರೆ, ಈಶ್ವರನಿಗೆ ವೈಷಮ್ಯ ನೈರ್ಘೃಣ್ಯಾದಿಗಳು ಉಂಟಾಗುವುದಿಲ್ಲವೇ ? ಮತ್ತು ಸರ್ವಮುಕ್ತಿ ಪ್ರಸಂಗವೂ ಉಂಟಾಗುವುದಿಲ್ಲವೇ? ಎಂಬಾಕ್ಷೇಪಗಳುಂಟಾಗುತ್ತವೆಯಲ್ಲಾ ಎಂದು ನಂಜೀಯರು ಕೇಳಲು, ಅವುಗಳಿಗೇನೂ ಕಾರಣವಿಲ್ಲವು ಏಕೆಂದರೆ, ಆತನೇ ಸಿದ್ಧೋಪಾಯನಾದುದರಿಂದ ಆತನೇ ಇಷ್ಟುದಿನ ಕಾದು ಇದ್ದು ಇವರಿಗೆ ಅದ್ವೇಷವೂ ಇದರಲ್ಲಿ ಅಭಿರುಚಿಯೂ ಉಂಟಾಗುವ ಹಾಗೆ ಆತನೇ ಮಾಡಿ ಈಗ ಕೃಪೆ ಮಾಡಿರುತ್ತಾನೆ. ಸರ್ವೇಶ್ವರನೇ ಇಲ್ಲಿ ಮುಖ್ಯಕಾರಣವಾದುದರಿಂದ ಈ ಆಳ್ವಾರ್ರವರ ಪ್ರಶ್ನೆಗೆ ಏನುತ್ತರವನ್ನೂ ಕೊಡಲಿಕ್ಕಾಗದೆ ಲಜ್ಜಿತನಾಗಿ ಸುಮ್ಮನಾದನು ಎಂದು ಶ್ರೀ ಭಟ್ಟರು ಉತ್ತರವನ್ನು ಕೊಟ್ಟರೆಂದು ಹೇಳುವರು. ಈ ಅಭಿಪ್ರಾಯವನ್ನು ಶ್ರೀ ದೇಶಿಕರವರು ಮುಂದೆ ಖಂಡಿಸುತ್ತಾರೆ. ಇನ್ನೂ ಪೂರ್ವಪಕ್ಷವನ್ನೇ ಉಪಪಾದಿಸುತ್ತಾರೆ:—ಸರ್ವೇಶ್ವರರ್ – ಸರ್ವೇಶ್ವರನು, ತೂಳ್‌ವಿಶುಮ್ಬು – ಈ ವ್ಯಾಪಿಸಿರುವ ಆಕಾಶದ, ಅಣಿ - ಅಲಂಕಾರಭೂತವಾದ, ಮುಗಿಲ್ ತೂರಿಯ– ಮೇಘತೂರ್ಯ, ಮೇಘಧ್ವನಿಗೆ ಸಮಾನವಾದ ಧ್ವನಿಯು, ಮುಳಕ್ಕಿನ - ಭೇರಿ ತಾಡನವು, ಇದೊಳಿಯ - ಇದನ್ನು ಬಿಟ್ಟು, ವೇರೊರು - ಬೇರೊಂದು, ಉತ್ತರಂ – ಪ್ರತ್ಯುತ್ತರವನ್ನು, ಅರುಳಿಚ್ಚೆಯ್‌ದಾನೋ – ದಯಪಾಲಿಸಿದನೋ. ಮೇಲೆ ಆಳ್ವಾರರು ಕೇಳಿದ ಎರಡು ಪ್ರಶ್ನೆಗಳಿಗೂ ಬರೀ ಆಕಾಶದಲ್ಲಿ ಮೇಘಧ್ವನಿಗೆ ಸಮಾನವಾದ ದೇವದುಂದುಭಿವಾದ್ಯವು ಕೇಳಿಸಿತೇ ವಿನಾ, ಸರ್ವೇಶ್ವರನು ಏನೊಂದೂ ಉತ್ತರ ಕೊಡಲಿಲ್ಲವು. ಏತಕ್ಕೆ ಉತ್ತರ ಕೊಡಲಿಲ್ಲವೆಂದರೆ, ಸರಿಯಾಗಿ ಹೇಳತಕ್ಕದ್ದೇನಾದರೂ ಇದ್ದರೆ, ಸುಮ್ಮನಿರುವನೋ ? ಯಾವಾಗ ಉತ್ತರವಿಲ್ಲವೋ ಅಲ್ಲಿ ಸರಿಯಾಗಿ ಹೇಳತಕ್ಕದ್ದೇನೂ ಇಲ್ಲವೆಂಬ ಭಾವವು. ಉಪಾಯಾನುಷ್ಠಾನವನ್ನು ಈಗ ನೀನು ಮಾಡಿರುತ್ತೀಯೆ, ಆದುದರಿಂದ ಈಗ ನಿನ್ನನ್ನು ಆದರಿಸುತ್ತೇನೆ, ಹಿಂದೆ ಮಾಡಲಿಲ್ಲವಾದುದರಿಂದ ಅನಾದರಿಸಿದೆನು ಎಂದೇನಾದರೂ ಹೇಳಿದ್ದರೆ ಉಪಾಯಾನುಷ್ಠಾನವು ಆವಶ್ಯಕವೆಂದು ಭಾವಿಸಬಹುದಾಗಿತ್ತೆಂಬ ಭಾವವು. ಅಗ್ಗೈಯಾಲ್ - ಆದುದರಿಂದ, ನಾಮೊರುಪಾಯಾನುಷ್ಠಾನಮ್ ಪಣ್ಣುಗೈ – ನಾವು ಒಂದುಪಾಯಾನುಷ್ಠಾನವನ್ನು ಮಾಡುವದು'

**(೮) "ನಡುವೇ ವಂದುಯ್ಯ ಕೊಳ್‌ಗಿನ್ರ ನಾಥ" ಎಹ್ಹ್ ರಪಡಿಯೇ ಅರುಳ್ ಪುರಿನ್ದ ಚಿನ್ದೈಯುಡಿಯಾರ್ ಮೇಲ್ ವೈತ್ತವನ್ತಾನೇ ರಕ್ಷಿತ್ತ ಪೋದು ಕಾಣುಮತ್ತನ್ಯ ಯನ್ರೋವೆನ್ರು ಶಿಲರ್ ಕಲಙ್ಗುವರ್‌ಗಳ್.**

ಎನ್ಪದು ಎನ್ನ - ಎಂದರೆ ಏನು ? ಎಂದರೆ ಯಾವ ಪ್ರಯೋಜನಕ್ಕಾಗಿ ಎಂಬ ಭಾವವು. ಸರ್ವೇಶ್ವರನು ಕೃಪಾಸಾಗರನು ಮತ್ತು ಸ್ವತಂತ್ರನು, ಹೀಗಿರುವಾಗ ನಾವುಗಳು ಉಪಾಯಾನುಷ್ಠಾನ ಮಾಡುವದು ಏತಕ್ಕೆ ಎಂಬುದು ಅಭಿಪ್ರಾಯವು. "ನಡುವೆ – ಜನ್ಮಪರಂಪರೆಯ ಮಧ್ಯದಲ್ಲಿ ಅಥವಾ ಸಮಯ ನೋಡಿ ಮಧ್ಯದಲ್ಲಿ ಆಕಸ್ಮಿಕವಾಗಿ ಸಂಪೂರ್ಣ ಪರತಂತ್ರರಾದ ನಮ್ಮಿಂದೇನೂ ಪ್ರಯತ್ನ ಮೊದಲಾದವುಗಳಿಲ್ಲದೆ ಇರುವಾಗ ಎಂಬ ಭಾವವು. ವನ್ದು - ಬಂದು, ಉಯ್ಯಕೊಳ್‌ಗಿನ್ರ ನಾಥನ್ಯ - ಉಜ್ಜೀವಿಸುವ ಹಾಗೆ ಮಾಡುವ ಸ್ವಾಮಿಯನ್ನು" ಎಂದು ನಮ್ಮಾಳ್ವಾರ್ರವರ ಪಾಶುರದಲ್ಲಿ ಹೇಳಿರುವ ಹಾಗೆ, ಅರುಳ್ ಪುರಿನ್ದ ಚಿನ್ದೈ - ದಯೆಯಿಂದ ಕೂಡಿಕೊಂಡಿರುವ ಮನಸ್ಸನ್ನು, ಅವರ್ ತಾನೇ - ಭಗವಂತನು ತಾನಾಗಿಯೇ, ಅಡಿಯಾರ್ ಮೇಲೆ ವೈತ್ತು – ದಾಸರಾದ ನಮ್ಮ ಮೇಲೆ ಇಟ್ಟು, ರಕ್ಷಿತ್ತ ಪೋದು – ರಕ್ಷಿಸಿದುದಾದರೆ, ಕಾಣುಮತ್ತನ್ಯ-ನಾವು ಸುಮ್ಮನೆ ಅದನ್ನು ನೋಡಿಕೊಂಡಿರುವದೆಷ್ಟೋ ಅಷ್ಟು ಮಾತ್ರವೇ, ಎನ್ರೋ - ಎಂಬದಾಗಿಯಲ್ಲವೇ, ಶಿಲರ್ - ಕೆಲವರು, ಕಲಙ್ಗುವರ್‌ಗಳ್ - ಭ್ರಾಂತರಾಗುವರು. ಸರ್ವೇಶ್ವರನು ಕೃಪೋದಧಿಯು ಮತ್ತು ಸ್ವತಂತ್ರನು. ತನಗೆ ಇಷ್ಟ ಬಂದಾಗ ಚೇತನನನ್ನು ರಕ್ಷಿಸಬಹುದು. ಆತನೇ ಸಿದ್ಧೋಪಾಯನಾದುದರಿಂದ, ಯಾವಾಗಲೋ ಒಂದು ಕಾಲದಲ್ಲಿ ಆಕಸ್ಮಾತ್ತಾಗಿ ಬಂದು ರಕ್ಷಿಸಿಬಿಡುತ್ತಾನೆಂಬ ತಾತ್ಪರ್ಯವು. ಈ ಚೇತನನಿಂದ ಯಾವ ಪ್ರಯತ್ನವನ್ನಾಗಲಿ ವ್ಯಾಜವನ್ನಾಗಲಿ ಅಪೇಕ್ಷಿಸುವದಿಲ್ಲವು ಎಂದು ಹೇಳುತ್ತಾರೆ. ನಮ್ಮಾಳ್ವಾರ್ರವರೂ ಹೀಗೆಯೇ ಹೇಳುವರೆಂದು ಅವರ ಪಾಶುರ ಒಂದನ್ನು ಉದಾಹರಿಸಿರುತ್ತಾರೆ. ಆ ಪಾಶುರವು ಯಾವುದೆಂದರೆ :—

ವಿಡುವೇನೋ ವೆನ್ನಿಳಕ್ಕ ಯೆನ್ನಾವಿಯ್ಯೈ
ತಡುವೇ ವನ್ದುಯ್ಯಕ್ಕೊಳ್‌ಗಿನ್ರ ನಾತನ್ಯ ।
ತೊಡುವೇ ಶೆಯ್‌ದಿಳವಾಯ್‌ಚ್ಚಿಯರ್ ಕಣ್ಣಿನುಳ್
ವಿಡವೇ ಶೆಯ್‌ದು ವಿಳುಕ್ಕುಮ್ಪಿರಾನ್ಯೆಯೇ ॥

(೧) ತಿರು. ೧. ೭, ೫.

**ಎನ್ ವಿಳಕ್ಕು** - ನನಗೆ ಪ್ರಕಾಶಕನೇ, ಬೆಳಕು ಹೇಗೆ ತನ್ನನ್ನೂ ತೋರಿಸಿ ಇತರ ಪದಾರ್ಥಗಳನ್ನೂ ತೋರಿಸುತ್ತದೆಯೋ ಹಾಗೆ, ಇವರಿಗೆ ತನ್ನನ್ನೂ ತೋರಿಸಿ, ಸ್ವಸ್ವರೂಪವನ್ನೂ ವಿರೋಧಿಸ್ವರೂಪವನ್ನೂ ತೋರಿಸಿಕೊಡುವವನಾದ, **ಎನ್ನಾವಿಯ್ಯೈ ನಡುವೆ ವನ್ದು** - ಪ್ರಕೃತಿ ಸಂಬಂಧದಿಂದ ನನ್ನದು ಈ ಆತ್ಮವೆಂದು ಭ್ರಮಿಸಿರುವುದನ್ನು, ಈ ಆತ್ಮ ನಿನ್ನದಾದುದರಿಂದ ನೀನೇ ಸ್ವತಂತ್ರಿಸಿ ನಿನಗೆ ಸಂಪ್ರೀಣನ ದೊರೆತ ಕಾಲದಲ್ಲಿ ಅಕಸ್ಮಾತ್ತಾಗಿ ಸ್ವತಂತ್ರಿಸಿ ಬಂದು, **ಉಯ್ ಕೊಳ್‌ಗಿನ್ರ** - ಇದೊಂದು ವಸ್ತುವು ಎಂದು ಹೇಳಿಸಿಕೊಳ್ಳಲು ಯೋಗ್ಯವಾದುದನ್ನಾಗಿ ಮಾಡಿದ, **ನಾತನ್ನೈ** - ಈ ವಸ್ತುವಿಗೆ ಒಡೆಯನಾದ ಸ್ವಾಮಿಯನ್ನು, **ತೊಡವೆ ಶೆಯ್‌ದು** - ಕಪಟ ವ್ಯಾಪಾರಗಳನ್ನು ಮಾಡಿ, **ಇಳೆವರ್ ಆಚ್ಚಿಯರ** - ಒಳ್ಳೇ ಯೌವನಾವಸ್ಥೆಯ ವಯಸ್ಸುಳ್ಳ ಗೋಪಸ್ತ್ರೀಯರ, **ಕಣ್ಣಿನುಳ್** - ಕಣ್ಣಿನ ಮೂಲಕ, **ವಿಡವೇ ಶೆಯ್‌ದು** - ಧೂರ್ತಕೃತ್ಯವನ್ನು ಮಾಡಿ, **ವಿಳುಕ್ಕುವನ್** - ಅವರನ್ನೇ ಕೃಪಾಕಟಾಕ್ಷದಿಂದ ನೋಡಿದ, **ಪಿರಾನ್ನೈ** - ಪರಮೋಪಕಾರಕನನ್ನು, **ವಿಡುವೇನೋ** - ನಾನು ಬಿಟ್ಟಿರುವೆನೋ ? ಎಂದಿಗೂ ಇಲ್ಲವೆಂಬ ಭಾವವು ಆಧೇಯತ್ವ ನಿಯಾಮ್ಯತ್ವಶೇಷತ್ವಗಳಿಂದ ಸರ್ವೇಶ್ವರನಿಂದ ಸತ್ತೆಯನ್ನು ಹೊಂದಿದನೆಂಬ ಜ್ಞಾನವು, ಈಗ ಸರ್ವೇಶ್ವರ ಕೃಪೆಯಿಂದ ಉಂಟಾಗಿ, ನನ್ನ ಯಥಾರ್ಥಸ್ವರೂಪಜ್ಞಾನ ಉಂಟಾಗಿರುತ್ತದೆ ಎಂದು ಎನ್ವಿಳಕ್ಕೆ ಎಂಬುದರಿಂದ ತಿಳಿಸಿರುತ್ತಾರೆ ಆದರೆ ಇಷ್ಟು ದಿನವೂ ಸ್ವಾಮಿ ಅನುಗ್ರಹ ಮಾಡದಿರುವದು "ಈ ಆವಿಯು ಯೆನ್ನಾವಿ" ಎಂದು ತಿಳಿದಿದ್ದೆನು. ಈಗಲಾದರೋ ನಿನ್ನ ಕೃಪಾಪ್ರಭಾವದಿಂದ, ಈ ಆತ್ಮ ನಿನ್ನದು, ನೀನು ಈ ಆತ್ಮವಿಗೆ ಸ್ವಾಮಿ, ನಾಥನೆಂದೂ, ನೀನೇ ಸಿದ್ಧೋಪಾಯನಾಗಿ ಬಂದು ನನ್ನನ್ನು ರಕ್ಷಿಸುವ ಮಹೋಪಕಾರನೆಂದೂ, ತಿಳಿದ ನಂತರ, ನಿನ್ನನ್ನು ಬಿಟ್ಟಗಲುವೆನೋ ಎಂದು ಹೇಳುತ್ತಾರೆ. ಗೋಪಸ್ತ್ರೀಯರಾದರೋ ನನ್ನ ಹಾಗಲ್ಲದೆ ಕಾಮಮೋಹಗಳಿಂದ ಯುಕ್ತರಾಗಿ ನಿನ್ನನ್ನು ವಂಚಿಸಿದವರು; ಅವರೊಂದಿಗೆ ಧೂರ್ತಕೃತ್ಯಗಳನ್ನು ನಡೆಸಿ, ಹಾಗಿದ್ದರೂ ಆ ಗೋಪಿಯರೇ ನಿನ್ನನ್ನಗಲಿರಲು ಇಷ್ಟವಿಲ್ಲದ ಹಾಗೆ ಮಾಡಿ, ಅಂತವರಿಗೂ ಉಪಕಾರಕನಾಗಿಯೂ, ಇರುವ ನಿನ್ನನ್ನು, ನೀನೇ ಸಮಸ್ತ ವಿಧದಲ್ಲೂ ಸತ್ತೆ ಮೊದಲಾದವುಗಳನ್ನಿತ್ತು ಕಾಪಾಡಿದವನೆಂದು ತಿಳಿದ ನಾನು ಅಗಲಿರುವೆನೋ ಎಂಬ ಭಾವವು. ಪೂರ್ವಪಕ್ಷವಾದವನ್ನು ಮಾಡುವರಭಿಪ್ರಾಯವಾದರೋ- "ಈ ಚೇತನನು ಯಾರ ವಸ್ತು ? ಸರ್ವೇಶ್ವರನದು; ಸರ್ವೇಶ್ವರನ ವಸ್ತುವಿನ ವಿಷಯದಲ್ಲಿ ಈ ಚೇತನನು ಏನಾದರೂ ಮಾಡತಕ್ಕದ್ದೇನಿರುತ್ತದೆ ? ನಾನ್ ಎಂಬುವುದೇ ಇಲ್ಲವು. ಅವನೇ ಸ್ವತಂತ್ರನು. ಅವನಿಗೆ ಯಾವಾಗ ಇಷ್ಟ ಬಂತೋ

## ವ್ಯಾಜಸಾಪೇಕ್ಷತ್ವೇ ಶ್ರೀ ಶಠಕೋಪಸೂರಿಸೂಕ್ತಿಃ.

**ಇವರ್ಗಳ್ಕ್ಕು ತ್ತಿಳಿವಿಕ್ಕುಮ್ ಪಡಿ :—ಈಶ್ವರ್ರ ಸ್ವತಂತ್ರನೇಯಾಗಿಲುಮ್, ವೈಷಮ್ಯ ನೈರ್ಘೃಣ್ಯಙ್ಗಳಾಗರ ದೋಷಙ್ಗಳ್ ತನಕ್ಕುತ್ತಟ್ಟಾ**

---

ಆಗ ನಡುವೇ ವನ್ದು ಯ್ಯ್ಕೊಳ್ಳುನಾಥನು, ಆದರಿಸುವನು, ರಕ್ಷಿಸುವನು "ಆರೇನುಮ್ಪ್ರೀಗ್ರಹಕ್ಕು ಆರೇನುಮ್ ಯತ್ನಂಪ್ಪಣ್ಣುವಾರ್ಗಳೋ ? ಗೋಪಿಕಾಸ್ತ್ರೀಯರೇನಾದರೂ ಯತ್ನ ಮಾಡಿದರೋ ? ತುಂಟತನಮಾಡಿದವನೆಲ್ಲಾ ಶ್ರೀ ಕೃಷ್ಣನಲ್ಲವೇ ? ಹೀಗಿರುವಾಗ ಈ ಚೇತನನು ಏಕೆ ಉಪಾಯಾವಲಂಬನ ಮಾಡತಕ್ಕದ್ದು ? ಈತನ ಪಾರತಂತ್ರ್ಯಕ್ಕೆ ವಿರುದ್ಧ ಧರ್ಮವಲ್ಲವೇ ? ನಡುವೇ ವನ್ದು ಎಂದಿರುವದರಿಂದ ತನ್ನ ಸ್ವಾತಂತ್ರ್ಯಾನುಗುಣವಾಗಿ ಯಾವಾಗ ರಕ್ಷಿಸಬೇಕೋ, ಆಗ ತನ್ನ ವಸ್ತುವನ್ನು ತಾನೇ ರಕ್ಷಿಸಿಬಿಡುವನು ಎಂಬುದು" ಈ ಅಭಿಪ್ರಾಯವು ಶಾಸ್ತ್ರಪ್ರಮಾಣವಿರುದ್ಧವಾದುದರಿಂದ ಶ್ರೀ ದೇಶಿಕರವರು ಈ ವಾದವನ್ನು ಅಙ್ಗೀಕರಿಸದೆ, ಹೀಗೆ ವಾದ ಮಾಡುವವರು ಶ್ರೀ ದೇಶಿಕರವರಿಗೆ ಪರಮ ಗೌರವವುಳ್ಳ ನಮ್ಮಾಳ್ವಾರ್ರವರ ಸಂಬಂಧವುಳ್ಳವರಾಗಿ, ಆ ನಮ್ಮಾಳ್ವಾರ್ರವರ ಶ್ರೀ ಸೂಕ್ತಿಯಲ್ಲಿ ಪರಮಾದರವುಳ್ಳವರಾದುದರಿಂದ ಅವರಿಗೆ ಹಿತೋಕ್ತಿಮೂಲಕ ಸಕಾರಣವಾಗಿ, ಹೇಳುವದಲ್ಲದೆ, ಶ್ರೀ ನಮ್ಮಾಳ್ವಾರ್ರವರಿಗೆ ಹಾಗೆ ಅಭಿಪ್ರಾಯವಲ್ಲವೆಂಬುದನ್ನು ಶ್ರೀ ನಮ್ಮಾಳ್ವಾರವರ ಇನ್ನೊಂದು ಪಾಶುರದಿಂದಲೇ ವ್ಯಕ್ತಪಡಿಸುತ್ತಾರೆ ಸರ್ವೇಶ್ವರನು ಕೃಪಾಶಾಲಿಯಾಗಿಯೂ ಸ್ವತಂತ್ರನಾಗಿಯೂ ಇದ್ದರೂ ಶಾಸ್ತ್ರಮರ್ಯಾದಾನುಗುಣವಾಗಿ ಒಂದು ವ್ಯಾಜಸಾಪೇಕ್ಷವಾಗಿಯೇ ರಕ್ಷಿಸುವನು. ಹಾಗೆ ವ್ಯಾಜವೂ ಆವಶ್ಯಕವೆಂದು ನಮ್ಮಾಳ್ವಾರ್ರವರೇ ಹೇಳಿರುತ್ತಾರೆಂದು ಅವರ ಸೂಕ್ತಿಯನ್ನೇ ಉದಾಹರಿಸುತ್ತಾರೆ ಆ ವ್ಯಾಜ ಯಾವುದೆಂದರೆ ಭಕ್ತಿ ಅಥವಾ ಪ್ರಪತ್ತಿ ರೂಪ ಉಪಾಯಾನುಷ್ಠಾನವು.

### ಒಂದು ವ್ಯಾಜವಾವಶ್ಯಕವೆಂಬುದಕ್ಕೆ ಶ್ರೀ ನಮ್ಮಾಳ್ವಾರವರ ದಿವ್ಯ ಸೂಕ್ತಿಯು

**ಇವರ್ಗಳ್ಕ್ಕು** - ಮೇಲೆ ಹೇಳಿದ ರೀತಿಯಲ್ಲಿ ಸರ್ವೇಶ್ವರನ ನಿರ್ಹೇತುಕ ಕೃಪೆಯೇ ರಕ್ಷಿಸುವದಕ್ಕೆ ಸಿದ್ಧವಾಗಿರುವಾಗ, ಈತನು ಉಪಾಯಾನುಷ್ಠಾನ ರೂಪದಲ್ಲಿ ಏನನ್ನೂ ಮಾಡುವದು ಅನಾವಶ್ಯಕವೆಂದು ವಾದಿಸುವವರಿಗೆ, **ತೆಳಿವಿಕ್ಕುಮ್ ಪಡಿ** – ಸಂಶಯ ಭ್ರಮಾದಿಗಳು ಹೋಗುವ ಹಾಗೆ ಹಿತೋಪದೇಶವು

**ನ್ನೈಕ್ಕಾಗ, ಇವರ್ಗಳಕ್ಕಲಿಲೇಯೊರುವ್ಯಾಜತ್ತೈ ಯುಣ್ಡಾಕ್ಕಿ, ಯತ್ತೈ ಅವಲಂಬಿತ್ತು ತಾನ್ ರಕ್ಷಿಕ್ಕುಮ್.**

---

ಹೇಗೆ ಎಂದರೆ; ಈಶ್ವರನು ಸ್ವತಂತ್ರನಾಗಿದ್ದರೂ, ವೈಷಮ್ಯ-ಪಕ್ಷಪಾತವು, ತನಗೆ ಕೃಪೆ ಮಾಡುವ ಸ್ವಾತಂತ್ರ್ಯವಿದ್ದರೂ ಒಬ್ಬನಿಗೆ ಸಂಸಾರದ ನಾನಾವಿಧವಾದ ಕ್ಲೇಶವೂ ಇನ್ನೊಬ್ಬನಿಗೆ ಮುಕ್ತಿಯೂ ಹೀಗೆ ಪಕ್ಷಪಾತವು, ನೈರ್ಘೃಣ್ಯ-ಒಬ್ಬನ ವಿಷಯದಲ್ಲಿ ಕೃಪೆ ಇಲ್ಲದಿರುವಿಕೆಯು ಕ್ರೂರವಾಗಿರೋಣವು; ಒಬ್ಬನು ಬಹಳ ದುಃಖಿಸುತ್ತಿದ್ದರೂ ಅದನ್ನು ನೋಡಿಕೊಂಡು ಲೀಲೆಯು ಹಾಗೆ ತಟಸ್ಥಭಾವದಿಂದ ರುವದು, ಇನ್ನೊಬ್ಬನಲ್ಲಿ ತುಂಬಾ ಕೃಪೆ, **ಈ ದೋಷಙ್ಗಳ್ ತನಕ್ಕು ತಟ್ಟಾವೈಕ್ಕಾಗ**-ಈ ದೋಷಗಳು ಸರ್ವೇಶ್ವರನಾಗಿ ಹೇಯಗುಣರಹಿತನಾದ ತನಗೆ ಅಂಟದಿರುವದಕ್ಕಾಗಿ, **ಇವರ್ಗಳಕ್ಕಲಿಲೇ**-ಈ ಬದ್ಧನಾದ ಜೀವಾತ್ಮನ ವಿಷಯದಲ್ಲಿ, **ಒರು ವ್ಯಾಜತ್ತೈ**-ಒಂದು ನೆಪರೂಪವಲ್ಲಿರುವ ಉಪಾಯಾನುಷ್ಠಾನವನ್ನು ಉಪಾಸನವನ್ನೋ ಅಥವಾ ಭರನ್ಯಾಸವನ್ನೋ, **ಉಣ್ಡಾಕ್ಕಿ**-ಉಂಟುಮಾಡಿ ಎಂದರೆ ಅನುಷ್ಠಿಸುವಹಾಗೆ ಮಾಡಿ, **ಅತ್ತೈ ಅವಲಂಬಿತ್ತು** - ಅದನ್ನು ಸಂಗ್ರಹಿಸಿ, **ತಾನ್ ರಕ್ಷಿಕ್ಕುಮ್** - ತಾನೇ ರಕ್ಷಿಸುವನು; ಈಗ ತತ್ತ್ವಾರ್ಥವು ಎಂಬಭಿಪ್ರಾಯವು ಸರ್ವೇಶ್ವರನು ಒಂದು ವ್ಯಾಜ, ನೆಪ ಅಥವಾ ಕಾರಣವಿಲ್ಲದೆ ರಕ್ಷಿಸುವದಿಲ್ಲವೆಂಬ ತನ್ನ ಸಙ್ಕಲ್ಪವನ್ನು ಶಾಸ್ತ್ರಮೂಲಕ ತಿಳಿಸಿರುತ್ತಾನೆ. ಮೋಕ್ಷವನ್ನಿತ್ತು ರಕ್ಷಿಸಬೇಕಾದರೆ, ಇಲ್ಲವೇ ಭಕ್ತಿಮಾರ್ಗರೀತ್ಯಾ, ಅಥವಾ ಭರನ್ಯಾಸರೀತ್ಯಾ ಉಪಾಯಾನುಷ್ಠಾನಮಾಡಬೇಕು ಹಾಗೆ ಪ್ರಪನ್ನನಾದರೇನೇ ಮೋಕ್ಷವು, ಇಲ್ಲದಿದ್ದರಿಲ್ಲವು ಎಂದು ತಿಳಿಸಿರುತ್ತಾನೆ. ಆದುದರಿಂದ ಈ ವ್ಯಾಜವನ್ನು ಅಪೇಕ್ಷಿಸುವನು. ಹೀಗಾದರೆ ಈ ವ್ಯಾಜವೇ ಫಲ ಕೊಡತಕ್ಕದ್ದಾಗುತ್ತದೆ, ಸರ್ವೇಶ್ವರನ ಸ್ವಾತಂತ್ರ್ಯಕ್ಕೆ ಕುಂದಕವುಂಟುಮಾಡಿದಹಾಗಾಗುತ್ತದೆಯಲ್ಲವೇ ಎಂದರೆ, ಉಪಾಯಾನುಷ್ಠಾನರೂಪಕರ್ಮವು ಜಡವಾಗಿ ಫಲವನ್ನು ಕೊಡತಕ್ಕದ್ದಲ್ಲವು, ಸರ್ವೇಶ್ವರನೇ ಕೊಡುವವನು; ಆತನ ಸ್ವಾತಂತ್ರ್ಯಕ್ಕೂ ಏನೊಂದೂ ಹಾನಿ ಇಲ್ಲವು. ಆತನು ಸ್ವತಂತ್ರನಾದುದರಿಂದಲೇ ವ್ಯಾಜವು ಆವಶ್ಯಕವೆಂಬ ಶಾಸ್ತ್ರರೂಪಕಾನೂನನ್ನು ಏರ್ಪಡಿಸಿ ಅದಕ್ಕನುಸಾರವಾಗಿ ವರ್ತಿಸುತ್ತಾನೆ ಹಾಗೆ ನಡೆಯುವದರಿಂದ ಪಕ್ಷಪಾತ ದೋಷವೂ ಇಲ್ಲವು, ಕರ್ಮಾನುಗುಣ ಆಜ್ಞಾಭ್ರಷ್ಟರಿಗೆ ಶಿಕ್ಷೆಯನ್ನು ವಿಧಿಸುವದರಿಂದ ನಿರ್ಘೃಣನೆಂಬ ದೋಷವೂ ಇಲ್ಲವು. ಲೋಕದಲ್ಲಿ ಕೂಡ ರಾಜನು ಸ್ವತಂತ್ರನಾಗಿದ್ದರೂ, ತಾನು ಪಕ್ಷಪಾತಿ ನಿರ್ಘೃಣ ಎಂಬ ಲೋಕಾಪವಾದಗಳನ್ನು ತಪ್ಪಿಸಿಕೊಳ್ಳುವದಕ್ಕಾಗಿ ಕಾನೂನುಗಳನ್ನು ಏರ್ಪಡಿಸಿ,

ಇವ್ವರ್ಥತ್ತೈ (೧) "ತಿರುಮಾಲಿರುಮ್ ಶೋಲೈಮಲೈ ಯೆನ್ರೇ ನೆನ್ನ ತಿರುಮಾಲ್ ವನ್ದೆನ್ನೆಞ್ಜುನಿರೈಯಪ್ಪುಗುನ್ದಾನ್" ಎನ್ರು ತಾಮೇ ಅಳ್ವಾರರುಳಿಚ್ಚೆಯ್‌ದಾರ್.

---

ಅವುಗಳನ್ನನುಸರಿಸಿ, ಧರ್ಮಕೆಲಸಗಳನ್ನು ಮಾಡಿದವರಿಗೆ ಮನ್ನಣೆಯೂ, ವಿರುದ್ಧಾಚರಣೆಮಾಡಿದವರಿಗೆ ಶಿಕ್ಷೆಯೂ ಉಂಟಾಗುವಹಾಗೆ ಮಾಡಿರುವನು ಆದುದರಿಂದ ಲೋಕದಲ್ಲೂ ಕೂಡ ವ್ಯಾಜಗಳನ್ನನುಸರಿಸಿಯೇ ಮನ್ನಣೆ ಶಿಕ್ಷೆಗಳು ; ಆದುದರಿಂದ ಈ ಭರನ್ಯಾಸರೂಪವ್ಯಾಜವಿಲ್ಲದೆ ಸರ್ವೇಶ್ವರನು ರಕ್ಷಿಸಲಾರನು. ಏಕೆಂದರೆ ತನ್ನ ಶಾಸ್ತ್ರ ಮರ್ಯಾದೆಗೆ ವಿರುದ್ಧವಾಗಿ ತಾನೇ ಎಂದಿಗೂ ನಡೆಯಲಾರನು ಹಾಗೆಯೇ ಶ್ರೀ ನಮ್ಮಾಳ್ವಾರವರು, ವ್ಯಾಜವು ಆವಶ್ಯಕವೆಂದು ಮುಂದಿನ ಪಾಶುರದಲ್ಲಿ ಉಪದೇಶಿಸುತ್ತಾರೆ

ಇವ್ವರ್ಥತ್ತೈ - ಈ ವ್ಯಾಜಸಾಪೇಕ್ಷವಾಗಿಯೇ ಸರ್ವೇಶ್ವರನು ರಕ್ಷಿಸುವನೆಂಬ ಅಭಿಪ್ರಾಯವನ್ನು ತಿರುಮಾಲಿರುಮ್ ಶೋಲೈ ಮಲೈ ಎನ್ರೇ ನಿನ್ನು ಇದು ಯಾವ ಪುಣ್ಯಕ್ಷೇತ್ರವೆನ್ನಲು, ತಿರುಮಾಲಿರುಮ್ ಶೋಲೈ ಮಲೆಯು ಎಂದು ಹೇಳಿದ ಒಡನೆಯೇ, ಎಂದರೆ ಶ್ರಿಯಃಪತಿ ಇರುವ ವನದುರ್ಗವೆಂದು ಹೇಳಿದುದನ್ನೇ ವ್ಯಾಜವಾಗಿ ಮಾಡಿಕೊಂಡು, ತಿರುಮಾಲ್ ವನ್ದು - ಶ್ರಿಯಃಪತಿಯು ಬೇಗನೇ ಬಂದು, ಹೇಗೆಂದರೆ ವಾಕ್ಯ ಹೇಗೆ ಹೇಳಲ್ಪಟ್ಟರೂ ಅದರ ನೈಜವಾದರ್ಥವನ್ನು ಹೇಗೆ ಬಿಡದೇ ಜೊತೆಯಲ್ಲೇ ಬರುತ್ತದೆಯೋ ಹಾಗೆ, ಶ್ರೀ ಪರಾಶರೋಕ್ತಿಯಾದ "ಅರ್ಥೋ ವಿಷ್ಣು ರಿಯಂವಾಣೀ" (ವಿ ಪು ೧.೮.೧೭) ಎಂಬುವಹಾಗೆ ನಿತ್ಯಾನಪಾಯಿನಿಯಾದ ಲಕ್ಷ್ಮಿಯೊಂದಿಗೆ ಬಂದು, (ಇದರಿಂದ ವ್ಯಾಜಸಾಪೇಕ್ಷತೆಯೂ ಅಲ್ಲದೆ, ತಿರುಮಾಲ್ ವನ್ದು ಎಂಬುದರಿಂದ ಲಕ್ಷ್ಮಿಯ ಪುರುಷಕಾರತ್ವ ಉಪಾಯತ್ವವೂ ಹೇಳಲ್ಪಟ್ಟವು. ಅದೂ ಅಲ್ಲದೆ ದ್ವಯದ ಪೂರ್ವಖಂಡದ ಶ್ರೀಮಚ್ಛಬ್ದಾರ್ಥವೂ ಇಲ್ಲಿ ಉಪಪಾದಿಸಲ್ಪಟ್ಟಿತು) ಯಾವಾಗ ಶ್ರಿಯಃಪತಿ ಇರುವ ವನಗಿರಿ ಎಂದು ಹೇಳಲ್ಪಟ್ಟಿತೋ, ಆಗ ಶ್ರಿಯಃಪತಿಯು ಅದರಿಂದ ಹೃಷ್ಟಮನಸ್ಕನಾಗಿ, ಈ ವ್ಯಾಜವನ್ನಂಗೀಕರಿಸಿ, ಎನ್ನೆಂಜು ನಿರೈಯಪ್ಪುಗುನ್ದಾನ್-ನನ್ನ ಮನಸ್ಸು ಪರಿಪೂರ್ಣತೆಯನ್ನು ಹೊಂದುವಹಾಗೆ, ಲಕ್ಷ್ಮಿಯೊಂದಿಗೆ ತಾನೂ ಸಹ ಒಡನೆ ಪ್ರವೇಶಿಸಿದನು. ಇಷ್ಟು ದಿವ, ಅನಾದಿ ಕಾಲದಿಂದಲೂ ಕೃಪೆ ಮಾಡದೇ ಈಗ ಕೃಪೆ ಮಾಡಲು ಕಾರಣವೇನು ? ಎಂಬುದು ಈಗಲೂ

---

(೧) ತಿರು ೯೦. ೮. ೧.

**ಇನ್ದ ವ್ಯಾಜನ್ದಾನುಮ್ ಈಶ್ವರ್ರ ತನ್ನಾಲೇ ಯಾಗಿಲಿತ್ತೈ**
**ಮುನ್ಪೇಯುಂಡಾಕ್ಕಾದೇ ವಿಟ್ಟದೆನ್ನೆನ್ನಿಲ್, ಇವ್ವಾತ್ಮಾಕ್ಕಳುಕ್ಕು**

---

ಪ್ರಶ್ನೆಯು ಹಿಂದೆ ತವ್ಮ (೧. ೭ ೫.) ನೆಯ ಪಾಶುರದಲ್ಲಿ ಸರ್ವೇಶ್ವರನನ್ನು ಕೇಳಿದ ಪ್ರಶ್ನೆಗೆ ಈಗ ತಾವೇ ಉತ್ತರವನ್ನು ದಯಪಾಲಿಸುತ್ತಾರೆ ಹಿಂದೆ ಶ್ರಿಯಃಪತಿಯನ್ನು ನಂಬಿ, ನಾಮೋಚ್ಚಾರಣೆ ಧ್ಯಾನ ಮುಂತಾದ ಯಾವ ವ್ಯಾಜಗಳನ್ನೂ ಅಂಗೀಕರಿಸಲಿಲ್ಲವು. ಈಗ ಶ್ರಿಯಃಪತಿಯ ನಾಮೋಚ್ಚಾರಣೆಯನ್ನು ಮಾಡಿದೆನು, ಅದಕ್ಕೆ ಸುಪ್ರೀತನಾಗಿ ಈಗ ನನ್ನ ಹೃದಯಗುಹೆಯನ್ನು ಪ್ರವೇಶಿಸಿದನು ಅಲ್ಲಿನ ಸನ್ನಿವೇಶ ಹೇಗೆಂದರೆ —ಪ್ರಣವದ ಹಾಗೆ ಅಕಾರ ಉಕಾರ ಮಕಾರಗಳಿಂದ ಯುಕ್ತರಾಗಿರುವಿಕೆಯು. ಆದುದರಿಂದ ಸರ್ವೇಶ್ವರನು ರಕ್ಷಣೆಗೆ ಒಂದು ವ್ಯಾಜವನ್ನು ನಿರೀಕ್ಷಿಸುತ್ತಾ ಏನೂ ಉತ್ತರ ಕೊಡಲಿಲ್ಲವೆಂಬ ಭಾವವು. ಉತ್ತರಾರ್ಧದಿಂದ ಆ ತಿರುವಾಲಿರುಕ್ಕ್ರೈಲ್ಯ ಮಲ್ಯೆ ಎಂತಹ ಪ್ರದೇಶವೆಂಬುದನ್ನು ತಿಳಿಸುತ್ತಾರೆ :—

**ಕುರುಮಾಮಣಿಯುನ್ದು ಪುನಲ್ಪೊನ್ನಿತ್ತೆನ್ಪಾಲ್ ।**
**ತಿರುಮಾಲ್ ಶೆನ್ರು ಶೇರ್ವಿಡನ್ತೆನ್ತಿರುಪ್ಪೇರೇ ॥**

**ತಿರುಮಾಲ್** - ಶ್ರಿಯಃಪತಿಯು, **ಶೆನ್ರು ಶೇರ್ವಿಡಮ್** - ಬಂದು ವಾಸಮಾಡುತ್ತಿರುವ ಈ ದೇಶವಿಶೇಷವು, **ಕುರುಮಾಮಣಿ ಉನ್ದು** - ಶ್ಲಾಘ್ಯವಾದ ಸುಂದರವಾದ ರತ್ನಗಳನ್ನು ತೆಗೆದುಕೊಂಡು ಬರುವ, **ಪುನಲ್ ಪೊನ್ನಿ** - ನೀರನ್ನುಳ್ಳ ಕಾವೇರೀ ನದಿಯ, **ತೆನ್ ಪಾಲ್** - ದಕ್ಷಿಣತೀರದ, **ತೆನ್ ತಿರುಪ್ಪೇರ್** ಎಂಬ ದಿವ್ಯದೇಶವು.

ಆಗಲಿ ವ್ಯಾಜಸಾಪೇಕ್ಷವೇನೋ ಆವಶ್ಯಕವೆಂಬುದನ್ನು ಒಪ್ಪಿಕೊಳ್ಳೋಣ. ಆ ವ್ಯಾಜವೇನು ಈಶ್ವರಾಯತ್ತವೇ, ಅಲ್ಲವೇ ಈತನ ಅಧೀನವೇ, ಎಂಬ ಶಂಕೆಯಲ್ಲಿ ಈಶ್ವರಾಯತ್ತವಲ್ಲ, ಈತನಧೀನವೆಂದರೆ, ಈಶ್ವರನ ಸ್ವಾತಂತ್ರ್ಯಕ್ಕೆ ಹಾನಿಯು. ಈಶ್ವರಾಯತ್ತವೆಂದರೆ, ಸ್ವತಂತ್ರನಾದ ಈಶ್ವರನು ಇದುವರೆಗೂ ಏಕೆ ಈ ವ್ಯಾಜವನ್ನುಂಟುಮಾಡಲಿಲ್ಲವೆಂದು ಆಗಲೂ ಕೇಳಬೇಕಾಗುತ್ತದೆ ಹೀಗೆ ಪೂರ್ವಪಕ್ಷ ಬಂದೀತೆಂದು ಭಾವಿಸಿ ಸಮಾಧಾನವನ್ನು ಹೇಳುತ್ತಾರೆ.

**ಇನ್ದ ವ್ಯಾಜಮ್ ತಾನುಮ್** - ಈ ವ್ಯಾಜವಿಶೇಷವಾದರೋ, **ಈಶ್ವರ್ರ ತನ್ನಾಲ್** – ಈಶ್ವರನ ಮೂಲಕವಾಗಿ, **ಆಗಿಲ್** - ಉಂಟಾದುದು ಆದರೂ, **ಇತ್ತೈ** - ಈ ವ್ಯಾಜವನ್ನು, **ಮುನ್ಪೇ** - ಇಷ್ಟು ಜನ್ಮಗಳು ಕಳೆಯುವದಕ್ಕೆ

**ಅನಾದಿಯಾನ ಕರ್ಮಪ್ರವಾಹಙ್ಗಳ್ ವಿಷಮವಿಪಾಕ ಸಮಯಙ್ಗಳಾಯ್ಕ್ಕೊಂಡು ಪೋರುಗೈಯಾಲೇ, ಈಶ್ವರ್ನ ಕರ್ಮಾನುರೂಪ ಫಲಪ್ರದನಲ್ಲಾದ ಪೋದು ವೈಷಮ್ಯದೋಷಮ್ ವರುಗೈಯಾಲೆ, ಮುನ್ಪಿದಕ್ಕು ಅವಸರಮಾಯಿತ್ತಿಲ್ಲೈ ಯೆನ್ನುಮಿಡಮ್ ಕಾರ್ಯವಿಶೇಷದರ್ಶನತ್ತಾಲೇ ಕಲ್ಪಿತಮ್.**

---

ಮುಂಚೆಯೇ, **ಉಂಡಾಕ್ಕಾದೆ** - ಉಂಟುಮಾಡದೆ, **ವಿಟ್ಟದೆನ್ನೆನ್ನಿಲ್** - ಬಿಟ್ಟದ್ದಕ್ಕೆ ಕಾರಣವೇನೆಂದರೆ :— **ಇವ್ವಾತ್ಮಾಕ್ಕಳುಕ್ಕು** - ಈ ಬದ್ಧಚೇತನರಿಗೆ, **ಅನಾದಿಯಾಗಿ** ಬಂದಿರುವ ಕರ್ಮಪ್ರವಾಹಗಳು, **ವಿಷಮ ವಿಪಾಕ ಸಮಯಙ್ಗಳಾಯ್ಕ್ಕೊಂಡು, ವಿಷಮ** - ವ್ಯತ್ಯಸ್ತನಾದ, **ವಿಪಾಕ** - ಕರ್ಮದ ಫಲಕೊಡುವ ದೆಶೆಯು, **ಸಮಯಙ್ಗಳಾಯ್ಕೊಂಡು** – ಕಾಲವಾದುದಾಗಿ, **ಪೋರುಗೈಯಾಲ್** - ಪರಿಣಮಿಸುವದರಿಂದ, **ಈಶ್ವರನು ಕರ್ಮಾನುರೂಪವಾಗಿ** ಫಲವನ್ನು ಕೊಡುವದರಿಂದ, **ಅವಸರಮಾಯುತ್ತಿಲ್ಲೈ** - ರಕ್ಷಿಸುವ ಕಾಲವು ಇನ್ನೂ ಒದಗಲಿಲ್ಲವು , ಏಕೆಂದರೆ —**ಕರ್ಮಾನುಸಾರ ಫಲಪ್ರದನಲ್ಲಾದಪೋದು** - ಹಾಗೆ ಕರ್ಮಾನುಗುಣವಾಗಿ ಫಲವನ್ನು ಕೊಡದೆ ಇದ್ದರೆ, **ವೈಷಮ್ಯ ದೋಷಮ್ ವರುಮ್** – ವೈಷಮ್ಯ ನೈರ್ಘೃಣ್ಯಾವೇ ಮೊದಲಾದ ದೋಷಗಳು ಬರುವುವು, **ಎನ್ನುಮಿಡಮ್** – ಎಂಬ ಸಂದರ್ಭವು, **ಕಾರ್ಯವಿಶೇಷ ದರ್ಶನತ್ತಾಲೆ ಕಲ್ಪಿತಮ್** - ಕಾರಣದ ಫಲರೂಪವಾಗಿ ಕಾರ್ಯವಿಶೇಷವು ತೋರಿಬಂದರೆ ವ್ಯಾಜರೂಪವಾದ ಒಂದು ಕಾರಣಮೂಲಕವೇ ಅದು ಉಂಟಾಯಿತೆಂದು ಭಾವಿಸತಕ್ಕದ್ದು. ಇದೀಗ ಸಮಂಜಸವಾದ ವಿಷಯವೆಂಬ ಭಾವವು. ಸರ್ವೇಶ್ವರನು ಸ್ವತಂತ್ರನು, ನಾವೇನೂ ಮಾಡತಕ್ಕದ್ದಿಲ್ಲವು, ಏನೊಂದೂ ವ್ಯಾಜವು ಬೇಕಿಲ್ಲವು, ಅವನು ಯಾವ ಸಮಯದಲ್ಲಿ ಬೇಕೋ ಆಗ ರಕ್ಷಿಸುವನು ಎಂದು ನೀವು ಹೇಳುವುದಕ್ಕೂ, ಸ್ವತಂತ್ರನಾದರೂ ಒಂದು ವ್ಯಾಜ ಬೇಕು, ಅದನ್ನು ಅಪೇಕ್ಷಿಸುವನು ಹಿಂದಿನ ದುಷ್ಕೃತಗಳ ವ್ಯಾಜದಿಂದ ಇದುವರೆಗೂ ಆದರಿಸಲಿಲ್ಲವು, ಈಗ ಸುಕೃತ ವ್ಯಾಜದಿಂದ ಈ ಅನುಗ್ರಹವುಂಟಾಗಿರುತ್ತದೆ ಎಂದು ನಾವು ಹೇಳಿರುವುದಕ್ಕೂ, ಏನೂ ತುಂಬಾ ವ್ಯತ್ಯಾಸವಿಲ್ಲವು ನೀವೂ ಅವನೇ ಸಿದ್ಧೋಪಾಯನೆಂದು ಹೇಳಿದಿರಿ, ನಾವೂ ಹಾಗೆಯೇ ಹೇಳುವೆವು ನಿಮ್ಮ ಹೇಳಿಕೆಯಲ್ಲಿ ಸರ್ವೇಶ್ವರನು ವ್ಯಾಜನಿರಪೇಕ್ಷನೆಂದು ಹೇಳುವುದರಿಂದ ವೈಷಮ್ಯ ನೈರ್ಘೃಣ್ಯಾದಿ ದೋಷಗಳು ಪ್ರಾಪ್ತವಾಗುತ್ತವೆ. ವ್ಯಾಜಸಾಪೇಕ್ಷನೆಂದು ನಾವು ಹೇಳುವದರಿಂದ, ಪಕ್ಷಪಾತವಿಲ್ಲದೆ

ಒಂದು ನಿಯಮವನ್ನನುಸರಿಸಿ ನಡೆಯುವುದರಿಂದ ವೈಷಮ್ಯ ನೈರ್ಘೃಣ್ಯಾದಿ ದೋಷಗಳಿಗೆ ಕಾರಣವಿಲ್ಲವು "ಸರ್ವಸ್ಯ ಶರಣಮ್ ಸುಹೃತ್" ಎಲ್ಲರಿಗೂ ಉಪಾಯಭೂತನು, ಪರಮ ಸ್ನೇಹಿತನು, "ಸಮೋಹಂ ಸರ್ವಭೂತೇಷು" ಎಲ್ಲಾ ಚೇತನರ ವಿಷಯದಲ್ಲೂ ಸಮನಾಗಿರುವೆನು, "ನಮೇದ್ವೇಷ್ಯೋಸ್ತಿ ನಪ್ರಿಯಃ" ನನಗೆ ದ್ವೇಷಿಗಳೂ ಇಲ್ಲವು ಪ್ರಿಯರೂ ಇಲ್ಲವು, ಇತ್ಯಾದಿ ಪ್ರಮಾಣಗಳೆಲ್ಲಾ ನಮಗೆ ಪರಿಪೋಷಗುತ್ತದೆಂಬ ತಾತ್ಪರ್ಯವು ಆಗಲಿ, ಒಂದು ನಿಯಮವನ್ನನ್ನು ಸರಿಸಿ ಸರ್ವೇಶ್ವರನು ನಡೆಯುವನೆಂದು ಹೇಳಿದರೆ, ಸರ್ವೇಶ್ವರನ ಸ್ವಾತಂತ್ರ್ಯಕ್ಕೆ ನ್ಯೂನತೆ ಕಲ್ಪಿಸಿದಹಾಗಾಗುವುದಿಲ್ಲವೇ ಎಂದರೆ, ಇಲ್ಲವು ಏಕೆಂದರೆ ಆ ನಿಯಮವೂ ಕೂಡ ಸರ್ವೇಶ್ವರ ಸ್ವಾತಂತ್ರ್ಯವಾದ ಸಂಕಲ್ಪ ಮೂಲಕ ಉಂಟಾದುದೇ. ಇದಕ್ಕೆ ಒಂದು ಸಮಂಜಸವಾದ ದೃಷ್ಟಾಂತವನ್ನು ಹೇಳಬಹುದು. ಎಲ್ಲಾ ವನಸ್ಪತಿಗಳಿಗೂ ಬೇಕಾದ ಜಲವು ಭೂಮಿಯಲ್ಲಿ ಬಿದ್ದರೆ ಬೀಜಗಳಿಗನುಸಾರವಾಗಿ, ತತ್ಫಲವಾಗಿ ವನಸ್ಪತಿಗಳು ಹುಟ್ಟುತ್ತವೆ ನೀರೇನೋ ಸಮವಾಗಿ ಎಲ್ಲಾದಕ್ಕೂ ಬೇಕು. ಹಾಗೆಯೇ ನೀರಿನೋಪಾದಿಯಲ್ಲಿರುವ ಭಗವತ್ಕೃಪೆಯು ಎಲ್ಲಾ ಚೇತನರಿಗೂ ಸಮವಾದುವೇ. ತನ್ಮೂಲಕ ಚೇತನರ ಕರ್ಮಬೀಜಾನುಸಾರವಾಗಿ ತಿರಸ್ಕಾರ ಸತ್ಕಾರಗಳು ಪ್ರಾಪ್ತವಾಗುತ್ತವೆ ಬೇವಿನ ಬೀಜ ನೆಲದಲ್ಲಿದ್ದರೆ ನೀರಿನ ಸಹಾಯದಿಂದ ಕಹಿಯಾದ ಬೇವಿನ ಫಲ ಸಿಕ್ಕುತ್ತದೆ. ಮಾವಿನ ಬೀಜ ವಿದ್ದರೆ ನೀರಿನ ಸಹಾಯದಿಂದ ರುಚಿಯಾದ ಮಾವಿನ ಫಲವು ಸಿಕ್ಕುತ್ತದೆ. ನೀರು ಹೇಗೆ ಸಾರ್ವತ್ರಿಕವಾಗಿ ಸರ್ವ ವನಸ್ಪತಿಗಳಿಗೂ ಸಮವಾಗಿ ಬೇಕೋ, ಹಾಗೆಯೇ ಸರ್ವೇಶ್ವರನ ಸಹಾಯವು ಎಲ್ಲಾ ಚೇತನರಿಗೂ ಬೇಕು, ಅದು ಎಲ್ಲರಿಗೂ ಸಮವು, ಅದಿಲ್ಲದೆ ಏನೊಂದೂ ನಡೆಯುವುದಿಲ್ಲವು. ಇಷ್ಟು ದಿನವೂ ಅನುಗ್ರಹವಿಲ್ಲದೆ ಈಗ ಅನುಗ್ರಹಕ್ಕೆ ಕಾರಣವೇನೆಂದರೆ, ಅನಾದಿಯಾಗಿ ಮಾಡುತ್ತಿದ್ದ ದುಷ್ಕರ್ಮ ಫಲಗಳಿಂದ ಅನುಗ್ರಹವಿಲ್ಲವು, ಈಗ ಸುಕೃತ ಸಂಚಿತವಿದ್ದುದರಿಂದ ಅನುಗ್ರಹವು. ಆದುದರಿಂದ ವ್ಯಾಜ ಸಾಪೇಕ್ಷವಾಗಿಯೇ ಸರ್ವೇಶ್ವರಾನುಗ್ರಹವೇ ವಿನಾ ಅನ್ಯಥಾ ಇಲ್ಲವೆಂಬುದೇ ಸರ್ವಸಮಂಜಸವಾದ ವಿಷಯವು. ಲೋಕದಲ್ಲಿ ಒಬ್ಬನು ಹೆಚ್ಚು ಸುಖ ಭೋಗಗಳನ್ನು ಹೊಂದಿರುವುದಕ್ಕೂ, ಇನ್ನೊಬ್ಬನು ಅನಂತ ಕ್ಲೇಶಗಳನ್ನು ಹೊಂದಿರುವುದಕ್ಕೂ, ಸರ್ವೇಶ್ವರನ ಸಂಕಲ್ಪದೊಂದಿಗೆ ಈ ಚೇತನನ ಸಂಬಂಧವಾದುದು ಏನೋ ಕಾರಣವಿರಬೇಕೆಂದು ಕಲ್ಪಿಸುವುದು ಯುಕ್ತವಾದುದೇ. ನಿಗ್ರಹಾನುಗ್ರಹಗಳು, ಚೇತನನ ಸಂಬಂಧವಾದ ವ್ಯಾಜವಿಲ್ಲದೆ ಎಂದಿಗೂ ಉಂಟಾಗಲಾರದೆಂಬುದು ಶಾಸ್ತ್ರಸಮ್ಮತವಾದ ಲೋಕಸಮ್ಮತವಾದ ವಿಷಯವು. ಆ ಕಾರಣದಿಂದ ಉಪಾಯಾನುಷ್ಠಾನ ಮಾಡಿದರೇನೆ ಮೋಕ್ಷವೆಂದು ಸ್ವಾಮಿಯು "ಮಾ

ಇಜ್ಜ ನಿಶ್ಶೈಯೊಡಪೋದು ಸರ್ವಸಿದ್ಧಾನ್ತಿಗಳುಕ್ಕುಮ್ ಇದುಕ್ಕು ಮುನ್ಬಿಲ್ಲಾದ ಮೋಕ್ಷಶ್ರದ್ಧಾದಿಗಳಿಪ್ಪೋದು ಪಿರಕ್ಕೈಕ್ಕಡಿಯೆನ್ನೆನ್ನಾಲ್ ಉತ್ತರಮ್ ಶೊಲ್ಲವಿರಗಿಲ್ಲೈ. ಅನಾದಿಕರ್ಮಪ್ರವಾಹ ವೈಚಿತ್ರ್ಯತ್ತಾಲೆ ಎನ್ನುಮ್ ಉತ್ತರಮ್ ಈಶ್ವರನೈ ಇಶ್ಶೈನ್ಬಾರ್ಕ್ಕುಮಿಶ್ಶೈಯಾದಾರ್ಕ್ಕುಮ್

---

ಮೇಕಂ ಶರಣಂ ವ್ರಜ" ಇತ್ಯಾದಿ ಅನೇಕ ಪ್ರಮಾಣಗಳಿಂದ ಸರ್ವಸ್ವತಂತ್ರನಾಗಿ ಸಂಕಲ್ಪಿಸಿರುವುದರಿಂದ, ಈ ಭರನ್ಯಾಸರೂಪ ಉಪಾಯಾನುಷ್ಠಾನವು ಬೀಜರೂಪವಾಗಿ ವ್ಯಾಜವಾದರೆ ಆಗ ಉತ್ಕೃಷ್ಟ ಫಲರೂಪ ಮೋಕ್ಷವು ಸಿದ್ಧಿಸುವುದು. ಬೀಜವೇ ಇಲ್ಲದಿದ್ದರೆ ಫಲವೆಲ್ಲಿಯದು ?

ಹೀಗೆ ವ್ಯಾಜ ಸಾಪೇಕ್ಷತ್ವವನ್ನು ಅಂಗೀಕರಿಸದಿದ್ದರೆ, ಸರ್ವೇಶ್ವರನಿಗೆ ವೈಷಮ್ಯ ನೈರ್ಘೃಣ್ಯ ದೋಷಾಪಾದನೆಯಲ್ಲದೆ ಇನ್ನೇನಾದರೂ ಬಾಧಕವುಂಟೋ ಎಂದರೆ ಹೇಳುತ್ತಾರೆ. ಇಜ್ಜನಿಶ್ಶೈಯೊಡಪೋದು – ಹೀಗೆ ವ್ಯಾಜ ಸಾಪೇಕ್ಷತ್ವವನ್ನಂಗೀಕರಿಸದೇ ಹೋದರೆ, ಸಮಸ್ತ ಸಿದ್ಧಾಂತಗಳಿಗೂ ಈಶ್ವರನೊಬ್ಬನಿದ್ದಾನೆಂಬುವವರಿಗೂ ಈಶ್ವರನಿಲ್ಲವೆಂಬುವವರಿಗೂ, ಇದಕ್ಕು ಮುನ್ಬಿಲ್ಲಾದ – ಇದಕ್ಕೆ ಮೊದಲಿಲ್ಲದೇ ಇರುವ, ಮೋಕ್ಷದಲ್ಲಿ ಶ್ರದ್ಧೆಯೇ ಮೊದಲಾದವುಗಳು, ಇಪ್ಪೋದು ಪಿರಕ್ಕೈಕ್ಕು – ಈಗ ಉಂಟಾಗುವುದಕ್ಕೆ, ಅಡಿ ಎನ್ನೆನ್ನಾಲ್ – ಮೂಲಕಾರಣವೇನೆಂದು ಕೇಳಿದರೆ, ಉತ್ತರಂ ಶೊಲ್ಲವಿರುಗಿಲ್ಲೈ – ಉತ್ತರವನ್ನು ಹೇಳಲು ಮಾರ್ಗವಿಲ್ಲವು. ಒಂದು ವ್ಯಾಜ ಉಂಟೆಂದು ಹೇಳುವವರು ಕಾರಣವನ್ನು ಹೇಳಬಹುದು, ವ್ಯಾಜವೇ ಬೇಕಿಲ್ಲವೆಂಬುವವರು ಏನು ಕಾರಣವನ್ನೂ ಹೇಳಲಾಗುವದಿಲ್ಲವೆಂಬ ಭಾವವು.

ಆದರೆ ಒಂದು ವ್ಯಾಜವನ್ನಂಗೀಕರಿಸಿದರೆ ಸರ್ವಸಿದ್ಧಾಂತಿಗಳೂ ಈ ಪ್ರಶ್ನೆಗೆ ಉತ್ತರವನ್ನು ಹೇಳಬಹುದು ಅದೇನೆಂದರೆ, ಅನಾದಿ ಕರ್ಮಪ್ರವಾಹ ವೈಚಿತ್ರ್ಯವೆಂದು ಹೇಳುತ್ತಾರೆ.—ಅನಾದಿಕರ್ಮಪ್ರವಾಹ ವೈಚಿತ್ರ್ಯತ್ತಾಲೆ – ಅನಾದಿ ಕರ್ಮ ಪ್ರವಾಹದ ವೈಲಕ್ಷಣ್ಯದಿಂದ, ಎನ್ನುಮ್ ಉತ್ತರಮ್ – ಎಂಬದಾಗಿ ಮೇಲಿನ ಪ್ರಶ್ನೆಗೆ ಉತ್ತರವು, ಈಶ್ವರನೈ ಇಶ್ಶೈನ್ಬಾರ್ಕ್ಕುಮ್ – ಈಶ್ವರನನ್ನಂಗೀಕರಿಸುವ ಸಿದ್ಧಾಂತಿಗಳಿಗೂ, ಇಶ್ಶೈಯಾತಾರ್ಕ್ಕುಮ್ – ಹಾಗೆ ಈಶ್ವರನನ್ನಂಗೀಕರಿಸದ ಸಿದ್ಧಾಂತಿಗಳಿಗೂ, ತುಲ್ಯಮ್ – ಸಮಾನವಾದುದೇ ; ಫಲಕ್ಕೆ ಕಾರಣವಾಗಿ ಒಂದು ಕರ್ಮವೆಂದೂ, ಕರ್ಮಕ್ಕೆ ಅನುಗುಣವಾಗಿ ಫಲವೆಂದೂ ಸಮಸ್ತ ಸಿದ್ಧಾಂತಿಗಳೂ ಒಪ್ಪತಕ್ಕದ್ದಾಗಿದೆ. ಈ ಅಂಶವು ಹಿಂದೆಯೇ ಉಪಪಾದಿತವಾ

**ತುಲ್ಯವನ್, ಈಶ್ವರ ಸ್ವಾತಂತ್ರ್ಯ ಮೊರು ವ್ಯಾಜತ್ತೈ ಕೊಂಡು ಅವನ್ ನಿನೈತ್ತ ಪೋದೇ ರಕ್ಷಿಕ್ಕೈಕ್ಕುಮ್ ವಿಲಕ್ಕುವಲ್ಲಾರಿಲ್ಲಾಮೈಕ್ಕು ಮುರುಪ್ಪಾವ್.**

---

ಗಿದೆ ೧೯೦ನೆಯ ಪುಟ ನೋಡಿ. ವ್ಯಾಜವನ್ನಂಗೀಕರಿಸದೇ ಇರುವವರಿಗೀಗ ಮೇಲಿನ ಪ್ರಶ್ನೆಗೆ ಉತ್ತರ ದೊರೆಯುವದಿಲ್ಲವೇ ವಿನಾ, ವ್ಯಾಜವನ್ನಂಗೀಕರಿಸುವ ಸರ್ವಸಿದ್ಧಾಂತಿಗಳಿಗೂ ಉತ್ತರ ಉಂಟು ಅದೇನೆಂದರೆ ಅನಾದಿಕರ್ಮ ಪ್ರವಾಹ ವಿಚಿತ್ರತೆಯು ಇಷ್ಟುಕಾಲವೂ ದುಷ್ಕರ್ಮಪರಿಪಾಕದಿಂದ ಉಂಟಾಗಲಿಲ್ಲವು, ಸುಕೃತ ಪರಿಪಾಕದಿಂದ ಈಗ ಉಂಟಾಯಿತೆಂಬ ತಾತ್ಪರ್ಯವು. ಹೀಗೆ ಈ ಉತ್ತರವು ಆಸ್ತಿಕ ನಾಸ್ತಿಕರಿಬ್ಬರಿಗೂ ಸಮನಾದರೆ ಅನಾದಿ ಕರ್ಮಪ್ರವಾಹವಿಚಿತ್ರ್ಯತೆಯೇ ಫಲಕ್ಕೆ ಕಾರಣಭೂತವಾದುದಾಗಿ ಈಶ್ವರನಿಂದ ಏನೂಪ್ರಯೋಜನ ವಿಲ್ಲವಾದುದರಿಂದ ಆತನ ಸ್ವಾತಂತ್ರ್ಯವನ್ನು ಅಂಗೀಕರಿಸುವದು ಏತಕ್ಕೆ? ಎಂದು ಆತನ ಸ್ವಾತಂತ್ರ್ಯಕ್ಕೂ ಹಾನಿಯಿಲ್ಲವೇ, ಎಂದರೆ ಸ್ವಾಮಿಸಙ್ಕಲ್ಪವೂ ಆವಶ್ಯಕವೆಂದೂ, ಆತನ ಸ್ವಾತಂತ್ರ್ಯಕ್ಕೂ ಏನೊಂದು ಕುಂದಕವಿಲ್ಲವೆಂದೂ, ಮುಂದಿನ ವಾಕ್ಯದಿಂದ ತಿಳಿಸುತ್ತಾರೆ

ಈಶ್ವರನ ಸ್ವಾತಂತ್ರ್ಯವು, ಒರುವ್ಯಾಜತ್ತೈಕ್ಕೊಂಡು - ಒಂದು ಅಲ್ಪ ವ್ಯಾಪಾರರೂಪ ನೆಪವನ್ನು ಮೂಲ ಮಾಡಿಕೊಂಡು, ಅವನ್ ನಿನೈತ್ತಪೋದೆ- ಸರ್ವೇಶ್ವರನು ಸಂಕಲ್ಪಿಸಿದಾಗಲೇ, ರಕ್ಷಿಕ್ಕೈಕ್ಕುಮ್-ರಕ್ಷಿಸುವದಕ್ಕೂ, ವಿಲಕ್ಕವಲ್ಲಾರಿಲ್ಲಾಮೈಕ್ಕು - ಹೀಗೆ ರಕ್ಷಿಸುವಾಗ ಅದಕ್ಕೆ ಪ್ರತಿಬಂಧಕರ್ಯಾರೂ ಇಲ್ಲದೆ ಇರುವದಕ್ಕೂ, ಉರುಪ್ಪಾವ್-ಕಾರಣವಾಗಬಹುದು ಈಶ್ವರ ಸ್ವಾತಂತ್ರ್ಯಕ್ಕೆ ಯಾವ ವಿಧವಾದ ಕುಂದಕವೂ ಇಲ್ಲವು, ಅದರಿಂದ ಮೂರು ಪ್ರಯೋಜನಗಳುಂಟೆಂದು ಹೇಳುತ್ತಾರೆ:—(೧) ಸ್ವಾತಂತ್ರ್ಯವಿರುವದರಿಂದಲೇ ಈ ಅಲ್ಪ ವ್ಯಾಪಾರವಾದ ಭರನ್ಯಾಸದಿಂದ ಮಹತ್ತಾದ ಮೋಕ್ಷಫಲವು ಸಿದ್ಧಿಸಲಿ ಎಂದು ಸಙ್ಕಲ್ಪಿಸಿರುತ್ತಾನೆ (೨) ಈ ಅಲ್ಪವ್ಯಾಪಾರವಾದ ಭರನ್ಯಾಸವು ಯಾವಾಗ ಅನುಷ್ಠಿಸಲ್ಪಟ್ಟಿತೋ ಆಗ, ಸರ್ವೇಶ್ವರನೇ ರಕ್ಷಿಸಬೇಕೆಂದು ಸಙ್ಕಲ್ಪಿಸಿ, ತಾನೇ ಸಿದ್ಧೋಪಾಯನಾಗಿ ನಿಂತು ರಕ್ಷಿಸುವನು. (೩) ಹೀಗೆ ರಕ್ಷಿಸುವಾಗ ಸರ್ವೇಶ್ವರನಿಗೆ ಯಾವ ವಿಧವಾದ ಅಡ್ಡಿಯೂ ಇರುವದಿಲ್ಲವು ಒಂದನೆಯದು **"ಸರ್ವ ಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ"** ಎಂಬಿವೇ ಮೊದಲಾದ ಪ್ರಮಾಣಗಳಿಂದ ವ್ಯಕ್ತವು. ಎರಡನೆಯದು **"ಯಮೇವೈಷ ವೃಣುತೇ ತೇನಲಭ್ಯಃ"**,

ಇಪ್ಪಡಿಯಾನಾಲ್ "ಇನ್ರೈನ್ನ್ನೈ" ಯೆಂಜ್ಗರ ಪಾಟ್ಟುಕ್ಕು ಮಿದುಕ್ಕು ಮೂಲಮಾನ ವಚನಙ್ಗಳುಕ್ಕುಮ್ ನಿರ್ವಾಹಮೇದೆನ್ನಿಲ್ ? ಅದು ಶೊಲ್ಲುಗಿರೋಮ್.

---

"ಕೃಷ್ಣಂ ಧರ್ಮಂ ಸನಾತನಂ" "ಸರ್ವಸ್ಯ ಶರಣಂ ಸುಹೃತ್" ಇತ್ಯಾದ್ಯನೇಕ ಪ್ರಮಾಣಗಳಿಂದ ವ್ಯಕ್ತವು ಮೂರನೆಯದು, "ರಿರಕ್ಷಿಷತಿ ಯತ್ರ ಚ ಪ್ರತಿಭಯಂ ನ ಕಿಂಚಿತ್ ಕ್ವಚಿತ್" ಎಂಬಲ್ಲಿಯೂ ಇದೇ ಅಭಿಪ್ರಾಯವನ್ನೇ ಉಪಪಾದಿಸಿರುತ್ತಾರೆ. "ಯಸ್ಯ ಮನ್ತ್ರೀಚ ಗೋಪ್ತಾಚ ಸುಹೃಚ್ಚೈವ ಜನಾರ್ದನಃ । ಹರಿಸ್ತ್ರೈಲೋಕ್ಯ ನಾಥಸ್ಸಕಿನ್ನು ತಸ್ಯನನಿರ್ಜಿತಂ" ॥ ರಾಜಸೂಯ ಕಾಲದಲ್ಲಿ ಧೃತರಾಷ್ಟ್ರನು ಹೇಳುತ್ತಾನೆ. ''ಯಾರಿಗೆ ಹಿತಾಲೋಚನೆಯನ್ನು ಹೇಳುವನೂ, ರಕ್ಷಕನೂ, ಪ್ರಿಯ ಸ್ನೇಹಿತನೂ, ಸಹ ಶತ್ರುಪಕ್ಷದವರನ್ನೆಲ್ಲಾ ಮರ್ದನಮಾಡುವ ತ್ರಿಲೋಕಾಧಿಪತಿಯಾದ ಶ್ರೀ ಹರಿಯೋ, ಅಂತವರಿಗೆ ಎಂದರೆ ಪಾಂಡವರಿಗೆ ಯಾವದು ತಾನೇ ಜಯಿಸಲ್ಪಡದೆ ಇರುತ್ತದೆ. ಸರ್ವವಿಧದಲ್ಲೂ ಜಯವುಂಟೆಂಬ ಭಾವವು.'' ಎಂಬ ಭಾರತ ವಚನವು ಈ ಮೂರನೆಯ ಅಭಿಪ್ರಾಯವನ್ನು ಸಮರ್ಥನೆ ಮಾಡುತ್ತದೆ.

ಹೀಗೆ ವ್ಯಾಜಸಾಪೇಕ್ಷವಾಗಿಯೇ ಮುಕುಂದನು ಮುಕ್ತಿದಾಯಕನೆಂದು ಒಪ್ಪಿಕೊಂಡರೆ, "ಪ್ರಪನ್ನಾದನ್ಯೇಷಾಂ ನದಿಶತಿ ಮುಕುಂದೋ ನಿಜಪದಂ" (೮೪೮ನೆಯ ಪುಟ ನೋಡಿ) ಎಂಬುದು ಯಥಾರ್ಥವಾದ ಅಭಿಪ್ರಾಯವಾದರೆ, ಹಿಂದೆ ಪೂರ್ವಪಕ್ಷಿಯು ತಂದ "ಇನ್ರೈನ್ನೈ" ಎಂಬ ನಮ್ಮಾಳ್ವಾರವರ ಪಾಶುರಕ್ಕೆ ಸರಿಯಾದಭಿಪ್ರಾಯವೇನೆಂದು ಕೇಳುವದು ಯುಕ್ತವಾದ ಪ್ರಶ್ನೆಯಾದುದರಿಂದ ಆ ಪಾಶುರಕ್ಕೆ ಪೂರ್ವಪಕ್ಷಿಗಳು ಹೇಳಿದರ್ಥವಲ್ಲವು, ಸರಿಯಾದ ಅರ್ಥವು ಹೀಗೆಂಬದಾಗಿ ತಿಳಿಸುತ್ತಾರೆ .

ಇಪ್ಪಡಿಯಾನಾಲ್ - ಈಶ್ವರಸ್ವಾತಂತ್ರ್ಯ ಮಾತ್ರವೇ ಬಂಧಮೋಕ್ಷಗಳಿಗೆ ಕಾರಣವೆಂದೂ, ಅದು ವ್ಯಾಜನಿರಪೇಕ್ಷವೆಂದೂ, ಆ ಈಶ್ವರಸ್ವಾತಂತ್ರ್ಯವು ರಕ್ಷಿಸದೆ ಇದ್ದಕಾಲದಲ್ಲಿ ಸ್ವಾಮಿಯಲ್ಲಿ ಕಾರುಣ್ಯವಿಲ್ಲವೆಂದೂ, ಹೀಗೆಲ್ಲಾ ಹೇಳದೆ, ಈಶ್ವರಸ್ವಾತಂತ್ರ್ಯವು ವ್ಯಾಜಸಾಪೇಕ್ಷವಾಗಿಯೇ ಬಂಧಮೋಕ್ಷಗಳಿಗೆ ಕಾರಣವೆಂದೂ ಅದೂ ಅಲ್ಲದೆ ಅತನು ಕರುಣಾಸಾಗರನೆಂದೂ ಒಪ್ಪಿಕೊಂಡರೆ, "ಇನ್ನೆನ್ನೈ" ಎಂಬ ಹಿಂದೆ ಪೂರ್ವಪಕ್ಷಕ್ಕಾಗಿ ತಂದ ನಮ್ಮಾಳ್ವಾರ್ರವರ ಪಾಶುರಕ್ಕು, ಇದುಕ್ಕು - ಈ ಪಾಶುರಕ್ಕೆ, ಮೂಲಮಾನ ವಚನಙ್ಗಳುಕ್ಕುಮ್

ಪ್ರಮಾಣರೂಪದಲ್ಲಿ ಕಾರಣಭೂತವಾದ ವಚನಗಳಿಗೂ, ನಿರ್ವಾಹಮೇದೆನ್ನಿಲ್ ಸಮಂಜಸಾಭಿಪ್ರಾಯವು ಯಾವುದೆಂದರೆ ? ಅದು ಶೊಲ್ಲುಗಿರೋಮ್ - ಅದನ್ನು ಹೇಳುವೆವು:—ಈ ಪಾಶುರಕ್ಕೆ ಮೂಲಭೂತಗಳಾದ ವಚನಗಳು ಯಾವುವೆಂದರೆ :—

(೧) "ನಾಯಮಾತ್ಮಾ ಪ್ರವಚನೇನ ಲಭ್ಯೋ ನ ಮೇಧಯಾ ನ ಬಹುನಾ ಶ್ರುತೇನ । ಯಮೇವೈಷ ವೃಣುತೇ ತೇನ ಲಭ್ಯಸ್ತಸ್ಯೈಷ ಆತ್ಮಾ ವಿವೃಣುತೇ ತನೂಗ್ ಸ್ವಾಂ ॥" (ಕಠ. ೧. ೨. ೨೩)

ಇದಕ್ಕೆ ಸರಿಯಾದರ್ಥವೇನೆಂದರೆ. ಈ ಶ್ರುತಿಯಲ್ಲೂ ಸಹ ಈತನು ತನಗೆ ಪ್ರಿಯತಮನೆಂದು ವರಿಸಿ ಉಪಾಯಭೂತನಾಗಿ ರಕ್ಷಿಸುವದಕ್ಕೂ, ಪ್ರಾಪ್ಯನಾಗುವದಕ್ಕೂ, ವ್ಯಾಜಸಾಪೇಕ್ಷವೆಂದೇ ಹೇಳಲ್ಪಟ್ಟಿರುತ್ತದೆ. ಈ ಆತ್ಮನು ಬರೀ ಮನನ, ಜ್ಞಾನ, ತುಂಬಾ ವೇದವನ್ನು ತಿಳಿದವನು ಎಂಬದಾಗಿ ಸ್ವಾಮಿಗೆ ಪ್ರಿಯನಾಗುವದಿಲ್ಲವು ಈ ಚೇತನನು ಮಾಡಿದ ಉಪಾಸನಾದಿಗಳಿಂದ ಸುಪ್ರೀತನಾಗಿ ಯಾವನು ಯೋಗ್ಯನೆಂದು ಆತನು ವರಿಸುವನೋ ಅಂತವನಿಗೆ ಪ್ರಾಪ್ತಿ ಹೇತುಭೂತನಾಗುವನು, ಅಂತಹ ಉಪಾಸಕನಿಗೇಗ ಈ ಪರಮಾತ್ಮನು ತನ್ನ ಸ್ವರೂಪವನ್ನು ಪ್ರಕಾಶಗೊಳಿಸುವನು"

(೨) "ಕೇವಲಂ ಕೃಪಯೈವಾಹಂ ಪ್ರೇಕ್ಷ್ಯೇ ಕಂಚಿತ್ಕದಾಚನ" "ಕೇವಲ ಕೃಪೆಯಿಂದೀಗ ನಾನು ಯಾವನೋ ಒಬ್ಬೊಬ್ಬನನ್ನು ಯಾವಾಗಲೋ ಈಕ್ಷಿಸುವೆನು" ಇಲ್ಲಿಯೂ ಇಷ್ಟಬಂದಹಾಗೆ ಆತನು ಕೃಪೆಮಾಡುವನೆಂಬರ್ಥವಲ್ಲವು, ಈತನು ಸಹಸ್ರಾಪರಾಧಿಯಾಗಿದ್ದರೂ ಈತನು ಮಾಡಿದ ಉಪಾಯಾನುಷ್ಠಾನರೂಪ ವ್ಯಾಜದಿಂದ ಸುಪ್ರೀತನಾಗಿ, ಕೇವಲ ಕೃಪೆಯಿಂದಲೇ ಆತನನ್ನು ನೋಡುವೆನು ಎಂಬರ್ಥವು ಹಾಗೆ ಅನುಷ್ಠಾನಮಾಡುವನು ಯಾವನೋ ಒಬ್ಬನೂ ಎಲ್ಲಿಯೋ ಒಂದು ಕಾಲದಲ್ಲಿಯಾದುದರಿಂದ "ಕಂಚಿತ್ಕದಾಚನ" ಎಂಬ ಪ್ರಯೋಗವು ಅಂತವರು ಅತಿ ವಿರಳವೆಂಬ ಭಾವವು.

(೩) "ಅಜ್ಞೋಜಂತು ರನೀಶೋಯ ಮಾತ್ಮನ ಸ್ಸುಖದುಃಖಯೋಃ। ಈಶ್ವರಪ್ರೇರಿತೋಗಚ್ಛೇತ್ಸ್ವರ್ಗಂ ವಾ ಶ್ವಭ್ರಮೇವಚ ॥"

ಈ ಜನ್ಮವೆತ್ತಿದ ಪ್ರಾಣಿಯು ಅಜ್ಞನು, ತನ್ನ ಸುಖದುಃಖಗಳಿಗೂ ಪರಾಧೀನನು, ಈಶ್ವರಪ್ರೇರಿತನಾಗಿ ಸ್ವರ್ಗಕ್ಕಾದರೂ ಹೋಗುವನು ಅಥವಾ ನರಕಕ್ಕಾಗಲಿ ಹೋಗುವನು ಇಲ್ಲಿಯೂ ಈಶ್ವರನು ಸರ್ವಸ್ವತಂತ್ರನಾಗಿ ತನ್ನ ಇಷ್ಟಬಂದಹಾಗೆ ಸುಖವಾದರೂ ಕೊಡುವನು, ದುಃಖವನ್ನಾದರೂ ಉಂಟುಮಾಡುವನು, ಸ್ವರ್ಗಕ್ಕಾದರೂ ಕಳುಹಿಸುವನು, ಇಲ್ಲವೇ ನರಕದ ಗುಂಡಿಯಲ್ಲಾದರೂ

ಶ್ರಿಯಃಪತೇಃ ಸ್ವಾತಂತ್ರ್ಯಕಾರುಣ್ಯೇ ಚೇತನ ನಿಗ್ರಹಾನುಗ್ರಹಯೋಃ ಪ್ರಧಾನ ಹೇತೂ.

ಈಶ್ವರನುಕ್ಕು ಸಹಜಙ್ಗಳಾನ ಸ್ವಾತಂತ್ರ್ಯ ಕಾರುಣ್ಯಙ್ಗಳಿನುಡೈಯ ಪ್ರಾಧಾನ್ಯತ್ತಾಲೆ ಇವತ್ತುಕ್ಕು ವ್ಯಾಜಭೂತಙ್ಗಳಾನ ವಿಶೇಷ ಕಾರಣಙ್ಗಳೈ ಅನಾದರಿತ್ತು ಪಣ್ಡೆನ್ನೈ ಪರಾಙ್ಮುಖನಾಕ್ಕು ಕೈಕ್ಕುವರ್, ಇನ್ರು

---

ಬೀಳಿಸುವವನು ಎಂಬರ್ಥವಲ್ಲವು. ಇವುಗಳನ್ನು ಆತನು ಮಾಡುವದು ಇವರಿವರ ಕರ್ಮಾನುಗುಣವಾಗಿಯಾದುದರಿಂದ, ಹೀಗೆ ವ್ಯಾಜಸಾಪೇಕ್ಷನಾಗಿಯೇ, ಈ ವ್ಯಾಜಕ್ಕನುಗುಣವಾಗಿಯೇ ಸುಖದುಃಖಗಳನ್ನುಂಟುಮಾಡುವನು; ಸ್ವರ್ಗನರಕಾದಿಗಳುಂಟಾಗುವ ಹಾಗೆ ಮಾಡುವನು

(೪) ಹೀಗೆ ಇನ್ನೂ ಅನೇಕಗಳಾದ "ಯೋಽಮೇ ಗರ್ಭಗತಸ್ಯಾಪಿ" "ಸ್ವಯಂ ಮೃತ್ಪಿಂಡ ಭೂತಸ್ಯ" ಎಂಬೀ ಪ್ರಮಾಣಗಳನ್ನು ಶ್ರೀ ದೇಶಿಕರೆವರೇ ಮುಂದೆ ಉದಾಹರಿಸಿ ಅವುಗಳಿಗೆ ಸಮಂಜಸವಾದ ಅರ್ಥಗಳನ್ನುಪದೇಶಿಸುತ್ತಾರೆ. ಈ ಪ್ರಮಾಣಗಳನ್ನೆಲ್ಲಾ ಸರಿಯಾಗಿ ಪರಿಶೀಲಿಸದೆ ವ್ಯಾಜವು ಬೇಕಾಗಿಯೇ ಇಲ್ಲವು; ಸರ್ವೇಶ್ವರನೇ ಸ್ವತಂತ್ರನಾದುದರಿಂದ ತನ್ನಿಷ್ಟಬಂದಂತೆ ನಡೆಯುವನೆಂದು ಅಪಾರ್ಥಗಳನ್ನು ಹೇಳುತ್ತಾರೆ. ಆದುದರಿಂದಲೇ ಇದುಕ್ಕು ಮೂಲಮಾನ ವಚನಙ್ಗಳುಕ್ಕುಮ್ ಎಂಬ ಪ್ರಯೋಗವು

ಶ್ರಿಯಃಪತಿಯ ಸ್ವಾತಂತ್ರ್ಯ ಕಾರುಣ್ಯಗಳು ಈ ಚೇತನನ ನಿಗ್ರಹಾನುಗ್ರಹಗಳಿಗೆ ಪ್ರಧಾನ ಕಾರಣಗಳು.

ಈಶ್ವರನುಕ್ಕು - ಸರ್ವೇಶ್ವರನಿಗೆ ಸಹಜಙ್ಗಳಾನ - ಸಹಜ ಧರ್ಮಗಳಾದ ಸ್ವಾತಂತ್ರ್ಯಕಾರುಣ್ಯಗಳ, ಪ್ರಾಧಾನ್ಯತ್ತಾಲೆ - ಮುಖ್ಯಕಾರಣವಾಗಿರೋಣದರಿಂದ ಎಂದರೆ, ಸ್ವಾತಂತ್ರ್ಯವು ಲೀಲೋಪಕರಣವಾಗಿ ಮಾಡಿ ಬಂಧನಿಗ್ರಹಾದಿಗಳಿಗೆ ಪ್ರಧಾನ ಕಾರಣವು, ಕಾರುಣ್ಯವು ಭೋಗೋಪಕರಣವಾಗಿ ರಕ್ಷಣಾನುಗ್ರಹಗಳಿಗೆ ಕಾರಣವು ಎಂಬ ಭಾವವು; ಇವತ್ತುಕ್ಕು - ಈ ಸ್ವಾತಂತ್ರ್ಯಕಾರುಣ್ಯಗಳಿಗೆ, ವ್ಯಾಜಭೂತಙ್ಗಳಾನ - ಕಾರಣಗಳು ದುಷ್ಕೃತ ಸುಕೃತರೂಪಗಳಾದ ವಿಶೇಷ ಕಾರಣಙ್ಗಳೈ - ವಿಶೇಷ ಕಾರಣಗಳನ್ನು, ಅನಾದರಿತ್ತು - ಪರಿಗಣಿಸದೆ, ಪಣ್ಡು - ಇದಕ್ಕೆ ಹಿಂದಿನ ಕಾಲದಲ್ಲಿ, ಎನ್ನೈ - ನನ್ನನ್ನು ಪರಾಙ್ಮುಖನಾಕ್ಕುಗೈಕ್ಕುವರ್ - ಸರ್ವೇಶ್ವರನಿಗೆ ಅಭಿಮುಖನಾಗದೇ ಇರುವದಕ್ಕೂ,

ನ್ನೈಯಭಿಮುಖನಾಕ್ಕು ಕೈಕ್ಕುಮ್, ಉನ್ ಸ್ವಾತಂತ್ರ್ಯಮುಮ್ ಕೃಪೈಯುಮ್ ಒಳಿಯ ವೇರೊರು ಪ್ರಧಾನ ಕಾರಣಂ ಕಣ್ಡಿಲೇನ್, ಎನಕ್ಕುಕ್ಕಾಟ್ಟಾದೇ ಸ್ವತಸ್ಸರ್ವಜ್ಞನಾನ ನೀ ಕಣ್ಡದುಣ್ಡಾಗಿಲ್ ಅರುಳಿಚ್ಚೆಯ್ಯವೇಣುಮೆನ್ನ ; ಈಶ್ವರನ್ ನಿರುತ್ತರನಾಯಿರುಕ್ಕಿರ ಇರುಪ್ಪಾಲೇ ಸ್ವಾತಂತ್ರ್ಯ ಕೃಪೆಗಳಿನುಡೈಯ ಪ್ರಾಧಾನ್ಯತ್ತೈ ನಾಟ್ಟುಕ್ಕು ವೆಳಿಯಿಡುಗಿರಾರ್.

---

ಇನ್ರು - ಈಗ ಎನ್ನೈ - ನನ್ನನ್ನು, ಅಭಿಮುಖನಾಕ್ಕುಕ್ಕೈಕ್ಕುಮ್ - ಅಭಿಮುಖನಾಗಿರುವುದಕ್ಕೂ ಸಹ, ಉನ್ ಸ್ವಾತಂತ್ರ್ಯಮುಮ್ ಕೃಪೆಯುಮ್ ಒಳಿಯ-ನಿನ್ನ ಸ್ವಾತಂತ್ರ್ಯ ಕೃಪೆಗಳಲ್ಲದೆ, ವೇರೊರು ಪ್ರಧಾನ ಕಾರಣಂ-ಬೇರೊಂದು ಮುಖ್ಯ ಕಾರಣವನ್ನೂ, ಕಣ್ಡಿಲೇನ್ ನಾನು ಕಂಡಿಲ್ಲವು, ಎನಕ್ಕುಕಾಟ್ಟಾದೆ-ನನಗೆ ತಿಳಿಯಪಡಿಸದೇನೆ, ಸ್ವತಸ್ಸರ್ವಜ್ಞನಾದ, ನೀ ಕಣ್ಡದುಣ್ಡಾಗಿಲ್-ನಿನಗೆ ಗೊತ್ತಿರುವದೇನಾದರೂ ಇದ್ದರೆ, ಅರುಳಿಚ್ಚೆಯ್ಯ ವೇಣುಮೆನ್ನ ದಯಮಾಡಿ ತಿಳಿಸಬೇಕೆಂದು ಪ್ರಾರ್ಥಿಸಲಾಗಿ, ಅದಕ್ಕೆ, ಈಶ್ವರನ್-ಸರ್ವೇಶ್ವರನು, ನಿರುತ್ತರನಾಯಿರುಕ್ಕಿರ – ಮೌನಧ್ವನಿಯನ್ನುಂಟುಮಾಡಿದನೇ ಹೊರತು ಏನೊಂದೂ ಉತ್ತರವನ್ನು ಕೊಡದೇ ಇರುವ, ಇರುಪ್ಪಾಲೇ – ಸ್ಥಿತಿಯಿಂದ, ಸ್ವಾತಂತ್ರ್ಯ ಕೃಪೆಗಳ, ಪ್ರಾಧಾನ್ಯತ್ತೈ - ಪ್ರಾಮುಖ್ಯತೆಯನ್ನು, ನಾಟ್ಟುಕ್ಕು - ಲೋಕದ ಜನರಿಗೆಲ್ಲಾ, ವೆಳಿಯಿಡುಗಿರಾರ್ - ಪ್ರಕಟಿಸುತ್ತಾರೆ ಈ ಮೇಲಿನ ವಾಕ್ಯದಿಂದ ಇನ್ರೆನ್ನೈ ಎಂಬ ಪಾಶುರಕ್ಕೆ ಸರಿಯಾದ ಅರ್ಥವನ್ನು ತಿಳಿಸುತ್ತಾರೆ ಸರ್ವೇಶ್ವರನಿಗೆ ಸಹಜ ಧರ್ಮಗಳಾದ ಸ್ವಾತಂತ್ರ್ಯಕಾರುಣ್ಯಗಳು ಈ ಚೇತನನ ಬಂಧಮೋಕ್ಷಾದಿಗಳಿಗೆ ಪ್ರಧಾನಹೇತುಗಳೆಂದು ತಿಳಿಸುತ್ತಾರೆ ಸ್ವಾತಂತ್ರ್ಯವು ಈ ಚೇತನನ ದುಷ್ಕೃತಗಳನ್ನೇ ವ್ಯಾಜಮಾಡಿ ಗುರಿಮಾಡಿಕೊಂಡು ಭಗವನ್ನಿಗ್ರಹರೂಪವಾದ ಬಂಧಾದಿ ಶಿಕ್ಷೆಗಳಿಗೆ ಈ ಚೇತನನನ್ನು ಲೀಲೋಪಕರಣಭೂತವಾಗಿ ಮಾಡುತ್ತದೆ; ಕಾರುಣ್ಯವು ಈ ಚೇತನನ ಸುಕೃತಗಳನ್ನು ನೆಪಮಾಡಿಕೊಂಡು ಭಗವದನುಗ್ರಹರೂಪವಾದ ಮೋಕ್ಷವನ್ನುಂಟುಮಾಡಿ, ಭೋಗೋಪಕರಣವಾಗಿ ಮಾಡುತ್ತದೆ. ಇವತ್ತುಕ್ಕು ವ್ಯಾಜಭೂತಙ್ಗಳಾನ ವಿಶೇಷ ಕಾರಣಙ್ಗಳೈ ಅನಾದರಿತ್ತು ಎಂಬುದರಭಿಪ್ರಾಯವೇನೆಂದರೆ, ಮೊದಲು ಈ ಚೇತನನು ಸರ್ವೇಶ್ವರನಿಗೆ ಅಭಿಮುಖನಾಗದೆ ಪುನಃಪುನಃ ಬಂಧಾದಿಗಳನ್ನು ಹೊಂದಿದುದಕ್ಕೆ ಕಾರಣವೇನೆಂದರೆ, ಕಾರುಣ್ಯಕ್ಕೆ ವ್ಯಾಜಭೂತವಾದ ವಿಶೇಷ ಕಾರಣವು ಅಲ್ಪ

## ಇತ್ತಾಲಿ ಚ್ಚೇತನನ್ನೈ ಲೀಲೋಪಕರಣ ಮಾಕ್ಕುಗೈಕ್ಕು ಪ್ರಧಾನ

ಸುಕೃತವು, ಇದನ್ನು ಅನಾದರಿಸಿ ಸ್ವಾತಂತ್ರ್ಯಮೂಲಕವಾಗಿ ಹಾಗೆ ಲೀಲಾ ವಿಭೂತಿಯಲ್ಲೇ ಅಲೆಯುವ ಹಾಗೆ ಮಾಡುತ್ತದೆ ಹಾಗೆಯೇ ಈ ಚೇತನನು ಈಗ ಸ್ವಾಮಿಗೆ ಅಭಿಮುಖನಾಗಿ ರಕ್ಷಿಸಲ್ಪಡಲು ಕಾರಣವೇನೆಂದರೆ:—ಸ್ವಾತಂತ್ರ್ಯಕ್ಕೆ ವ್ಯಾಜಭೂತವಾದ ವಿಶೇಷ ಕಾರಣವು ಅಲ್ಪ ದುಷ್ಕೃತವು, ಇದನ್ನು ಅನಾದರಿಸಿ, ಕಾರುಣ್ಯಮೂಲಕವಾಗಿ ಭೋಗವಿಭೂತಿಯನ್ನು ಹೋಗಿ ಸೇರುವಹಾಗೆ ಮಾಡುತ್ತದೆಂಬ ತಾತ್ಪರ್ಯವು ಈ ಅಭಿಪ್ರಾಯವನ್ನೇ ಶ್ರೀ ನಮ್ಮಾಳ್ವಾರ್ರವರು ಇನ್ರೆನ್ನೈ ಎಂಬ ಪಾಶುರದಲ್ಲಿ ಉಪದೇಶಿಸಿರುತ್ತಾರೆ ಹೇಗೆಂದರೆ —ಇನ್ರು ಎನ್ನೈ ಪ್ಪೊರುಳಾಕ್ಕಿ ಎನ್ನೈಯುಳ್ಳೈಯ್ವೈತ್ತದು, ಅನುಗ್ರಹಿಸಿದುದು ಕಾರುಣ್ಯದ ಪ್ರಭಾವವು, ಅನ್ರು ಎನ್ನೈ ಪುರವ್ಪೋಗ ಪ್ಪುಣರ್ತ್ತದು ಸ್ವಾತಂತ್ರ್ಯದ ಪ್ರಭಾವವು, ಹೀಗೆ ಇವುಗಳಲ್ಲದೆ ಬೇರೆ ಯಾವ ಪ್ರಧಾನ ಕಾರಣವೂ ನನಗೆ ತಿಳಿಯದು, ನೀನು ಸರ್ವಜ್ಞನಾದುದರಿಂದ ನಿನಗೇನಾದರೂ ತಿಳಿದಿದ್ದರೆ ತಿಳಿಸೈಯ್ಯಾ ಎಂಬದಾಗಿ ಸರ್ವೇಶ್ವರನನ್ನು ಪ್ರಶ್ನಿಸಿದರು ಇವುಗಳೇ ಪ್ರಧಾನ ಕಾರಣಗಳಾಗಿ ಇನ್ನು ಯಾವ ಕಾರಣಗಳೂ ಇಲ್ಲವಾದುದರಿಂದ ನಿರುತ್ತರನಾಗಿ, ಮೌನಧ್ವನಿಯ ಮೂಲಕ ಆಳ್ವಾರರಭಿಪ್ರಾಯವೇ ಸರಿಯಾದುದೆಂದು ಲೋಕಕ್ಕೆಲ್ಲಾ ಸರ್ವೇಶ್ವರನು ಪ್ರಕಟಿಸಿದನು ಎಂಬ ಭಾವವು ಇಲ್ಲಿ ಮುಖ್ಯವಾಗಿ ಗ್ರಹಿಸತಕ್ಕ ಅಂಶವು ಇಷ್ಟೇ:— ಸಂಸಾರ ಬಂಧಕ್ಕೆ ಈ ಚೇತನನ ದುಷ್ಕೃತವು ವ್ಯಾಜವಾಗಿ ಸರ್ವೇಶ್ವರನಿಗೆ ಲೀಲೋಪಕರಣವಾಗುವುದ. ಮೋಕ್ಷಕ್ಕೆ ಈ ಚೇತನನ ಸುಕೃತರೂಪವಾದ ಉಪಾಯಾನುಷ್ಠಾನವು ವ್ಯಾಜವಾಗಿ ಸ್ವಾಮಿಯ ಭೋಗೋಪಕರಣವಾಗುವುದು, ಎಂಬುದು ; ಹೀಗೆ ಚೇತನನ ವಿಷಯದಲ್ಲಿ ಸ್ವಾತಂತ್ರ್ಯಕ್ಕೂ ಕೃಪೆಗೂ ಪರಸ್ಪರ ಸ್ಪರ್ಧೆಯುಂಟು, ಈ ಸ್ಪರ್ಧೆಯಲ್ಲಿ ಭಗವತ್ಕೃಪೆಯೇ ಪ್ರಬಲತರವಾದುದು ಈ ಸರ್ವಮಂಗಳದಾಯಕವಾದ ಕೃಪಾಪ್ರಭಾವವನ್ನೇ ಮಹರ್ಷಿಯು "ವ್ಯಸನೇಷು ಮನುಷ್ಯಾಣಾಂ ಭೃಶಂ ಭವತಿ ದುಃಖಿತಃ । ಉತ್ಸವೇಷು ಚ ಸರ್ವೇಷು ಪಿತೇವ ಪರಿತುಷ್ಯತಿ" (ರಾ ಅಯೋಧ್ಯಾ) ಎಂದು ಕೊಂಡಾಡಿರುತ್ತಾರೆ ಆದುದರಿಂದ ಈ ಪ್ರಬಲವಾದ ಕೃಪೆಯುಂಟಾಗುವ ಹಾಗೆ ಮಾಡಿಕೊಳ್ಳತಕ್ಕದ್ದು ನಮ್ಮ ಮುಖ್ಯ ಕರ್ತವ್ಯವು

ಹಿಂದಿನ ವಾಕ್ಯದಲ್ಲಿ ಹೇಳಿದುದನ್ನೇ ಬಹು ವಿಶದವಾಗಿ, ಇತ್ತಾಲಿ ಚ್ಚೇತನನ್ನೈ" ಎಂಬ ಮುಂದಿನ ವಾಕ್ಯದಿಂದ ವಿಶದೀಕರಿಸುತ್ತಾರೆ:—ಇತ್ತಾಲ್-ಹೀಗೆ

ಕಾರಣವ್ ಈಶ್ವರ ಸ್ವಾತಂತ್ರ್ಯಮ್ ; ಇದುಕ್ಕು ಸಹಕಾರಿ ಕಾರಣಮ್ ಪ್ರವಾಹಾನಾದಿಯಾನ ಸ್ವತಂತ್ರಾಜ್ಞಾತಿಲಂಘನಮ್. ಇವನೈ ಭೋಗೋಪಕರಣಮಾಕ್ಕುಗೈಕ್ಕು ಪ್ರಧಾನಕಾರಣವ್ ಈಶ್ವರನುಡೈಯ ಸ್ವಾಭಾವಿಕ ಕಾರುಣ್ಯಮ್ ; ಇದುಕ್ಕು ಪ್ರತಿಬಂಧಕಮಾನ ಈಶ್ವರನಿಗ್ರಹತ್ತೈ ಶಮಿಪ್ಪಿತ್ತುಕ್ಕೊಂಡು ಸಹಕಾರಿ ಕಾರಣಮೆನ್ನು ಪೇರ್‌ಪೆತ್ತದು, ಇವನುಡೈಯ ಸುಕೃತ ವಿಶೇಷ ದ್ವಾರಕ ಕೃಪೈಯಡಿಯಾಗ ವನ್ದ ವಶೀಕರಣ ವಿಶೇಷಙ್ಗಳ್ ; ಎನ್ನು ಈಶ್ವರನುಡೈಯ ಸ್ವಭಾವತ್ತೈಯುಮ್, ವೈಷಮ್ಯ

---

ನಮ್ಮಾಳ್ವಾರ್ರವರು ಸ್ವಾತಂತ್ರ್ಯ ಕಾರುಣ್ಯಗಳೇ ಪ್ರಧಾನ ಹೇತುಗಳೆಂಬ ಉಪದೇಶದಿಂದ, ಇಚ್ಚೇತನನೈ - ಈ ಚೇತನನನ್ನು, ಲೀಲೋಪಕರಣ ಮಾಕ್ಕುಗೈಕ್ಕು – ಈ ಲೀಲಾವಿಭೂತಿಗೆ ಸೇರಿದ ವಸ್ತುವಾಗಿ ಮಾಡಲು, ಎಂದರೆ ಜನ್ಮಸಂತತಿಗಳನ್ನುಂಟುಮಾಡಿ ಪುನಃಪುನಃ ಸಂಸಾರಬಂಧಕ್ಕೆ ಸಿಕ್ಕುವ ಹಾಗೆ ಮಾಡಲು, ಪ್ರಧಾನ ಕಾರಣವ್ - ಮುಖ್ಯ ಕಾರಣವು, ಈಶ್ವರಸ್ವಾತಂತ್ರ್ಯಮ್ ಸರ್ವೇಶ್ವರನ ಸ್ವಾತಂತ್ರ್ಯವು. ಇದಕ್ಕು - ಹೀಗೆ ಪುನಸ್ಸಂಸೃತಿಗೆ, ಸಹಕಾರಿ ಕಾರಣಮ್ - ಎರಡನೆಯ ಸಹಾಯಕಾರಣವು ಎಂದರೆ ವ್ಯಾಜರೂಪಕಾರಣವು, ಪ್ರವಾಹಾನಾದಿಯಾನ - ಪ್ರವಾಹರೂಪದಲ್ಲಿ ಅನಾದಿಯಾಗಿರುವ, ಸ್ವತಂತ್ರಾಜ್ಞಾತಿಲಂಘನಮ್ – ತಾನೇ ಸ್ವತಂತ್ರಿಸಿ ಸ್ವಾಮಿಯ ಆಜ್ಞೆಯನ್ನುಲ್ಲಂಘಿಸೋಣವು ಇವನೈ - ಈ ಚೇತನನನ್ನು, ಭೋಗೋಪಕರಣಮಾಕ್ಕುಗೈಕ್ಕು - ಭೋಗವಿಭೂತಿಯಾದ ನಿತ್ಯವಿಭೂತಿಯಲ್ಲಿ ಮುಕ್ತನನ್ನಾಗಿ ಮಾಡಲು, ಪ್ರಧಾನ ಕಾರಣವು, ಈಶ್ವರನ ಸ್ವಾಭಾವಿಕವಾದ ಕಾರುಣ್ಯವು ; ಇದುಕ್ಕು ಪ್ರತಿಬಂಧಕಮಾನ ಈಶ್ವರನಿಗ್ರಹತ್ತೈ - ಹೀಗೆ ಮುಕ್ತನನ್ನಾಗಿ ಮಾಡುವದಕ್ಕೆ ಅಡ್ಡಿಯಾಗಿರುವ ಭಗವನ್ನಿಗ್ರಹವನ್ನು, ಶಮಿಪ್ಪಿತ್ತುಕ್ಕೊಂಡು - ಹೋಗಲಾಡಿಸಿಕೊಂಡು ಸಹಕಾರಿ ಕಾರಣಮೆನ್ನು ಪೇರ್‌ಪೆತ್ತದು-ಎರಡನೆಯದಾದ ಸಹಾಯ ಕಾರಣವೆಂದರೆ ವ್ಯಾಜರೂಪಕಾರಣವೆಂಬ ಹೆಸರನ್ನು ಹೊಂದಿರುವದು, ಯಾವುದೆಂದರೆ ಹೇಳುತ್ತಾರೆ.— ಇವನುಡೈಯ ಈ ಚೇತನನ, ಸುಕೃತ ವಿಶೇಷದ್ವಾರಕ – ಸುಕೃತವಿಶೇಷವೇ ಮೂಲವಾಗಿ ಉಳ್ಳ ಎಂದರೆ ಸುಕೃತವಿಶೇಷದಿಂದ ಉಂಟಾಗುವ ಕೃಪೈಯಡಿಯಾಗ - ಕೃಪೆಯ ಮೂಲಕವಾಗಿ, ವನ್ದ - ಪ್ರಾಪ್ತವಾದ, ವಶೀಕರಣ ವಿಶೇಷಙ್ಗಳ್ - ಸರ್ವೇಶ್ವರನನ್ನು ವಶಮಾಡಿಕೊಳ್ಳುವ ಉಪಾಯ ವಿಶೇಷಗಳು, "ತಸ್ಯ ಚ ವಶೀಕರಣಂ ತಚ್ಛರಣಾಗತಿರೇವ" ಆ ಕರುಣಾಸಾಗರ

**ನೈರ್ಘೃಣ್ಯಙ್ಗಳಿಲ್ಲಾಮೈಯೈಯುಮ್, ಬಂಧಮೋಕ್ಷಾದಿ ವ್ಯವಸ್ಥೈಯೈಯುಮ್, ಪ್ರಮಾಣ ಪ್ರತಿನಿಯತಮಾನ ಪಡಿಯಿಲೇ ಅನುಸಂಧಿತ್ತು ಸ್ವತಂತ್ರನುಡೈಯ ಕೃಪೈಯಿಲೇ ಯೂನ್ರಿಪ್ಪೋರ ವಡಕ್ಕು ಮೆನ್ರು ಕರುತ್ತು.**

---

ನನ್ನು ವಶಮಾಡಿಕೊಳ್ಳುವ ಮಾರ್ಗವು, ಆತನಲ್ಲಿ ಮಾಡುವ ಶರಣಾಗತಿಯೇ, ಅದ್ವಾರಕ ಪ್ರಪತ್ತಿಯಾಗಲಿ ಸದ್ವಾರಕ ಪ್ರಪತ್ತಿಯಾಗಲಿ ಆಗಬಹುದು ಹೀಗೆ ಸರ್ವ ಫಲಗಳಿಗೂ ಬಂಧರೂಪವೇ ಆಗಲಿ ಮೋಕ್ಷರೂಪವೇ ಆಗಲಿ ಎರಡೆರಡು ಕಾರಣಗಳುಂಟೆಂದು ಹೇಳಲ್ಪಟ್ಟವು. ಒಂದು ಪ್ರಧಾನ ಕಾರಣವು, ಸರ್ವೇಶ್ವರನ ಸ್ವಾತಂತ್ರ್ಯವಾಗಲಿ, ಕಾರುಣ್ಯವಾಗಲಿ ; ಇನ್ನೊಂದು ವ್ಯಾಜರೂಪವಾಗಿ ಸಹಕಾರಿ ಕಾರಣವು, ಭಗವದಾಜ್ಞಾತಿ ಲಂಘನವು ಅಥವಾ ಉಪಾಯಾನುಷ್ಠಾನವು. ಹೀಗೆ ಸರ್ವೇಶ್ವರನಿಂದ ಒಂದೂ, ಜೀವನಿಂದ ಒಂದೂ, ಎರಡು ಕಾರಣಗಳೂ ಸೇರಿದ ರೇನೇ ಫಲವು. ಒಂದರಿಂದ ಮಾತ್ರವೇ ಉಂಟಾಗುವದಿಲ್ಲವು. ಸರ್ವೇಶ್ವರನ ಸ್ವಾತಂತ್ರ್ಯ, ಚೇತನನ ಆಜ್ಞಾತಿಲಂಘನ, ಇವುಗಳಿಂದ ಬಂಧವು, ಸರ್ವೇಶ್ವರನ ಸ್ವಾತಂತ್ರ್ಯಯುಕ್ತ ಕಾರುಣ್ಯ, ಚೇತನನ ವಶೀಕರಣೋಪಾಯ, ಇವುಗಳಿಂದ ಮೋಕ್ಷವು ಎಂಬ ಭಾವವು. ಇದರಿಂದ ಸರ್ವೇಶ್ವರನೇ ಫಲಪ್ರದನು, ಆತನು ಚೇತನನ ಒಂದು ವ್ಯಾಜವನ್ನು ಅಪೇಕ್ಷಿಸಿಯೇ ಫಲವನ್ನು ಕೊಡುವನೇ ವಿನಾ ಅನ್ಯಥಾ ಇಲ್ಲವೆಂದು ಸ್ಥಾಪಿತವಾಯಿತು.

ಇನ್ನು ವಾಕ್ಯಶೇಷದಿಂದ ಹೀಗೀಗ ಮೇಲಿನ **ಇನ್ರೆನ್ನೈ** ಎಂಬ ಪಾಶುರಕ್ಕೆ ಅರ್ಥ ಹೇಳಿದರೆ ಸರ್ವಸಮಂಜಸವೂ ಉಂಟಾಗುತ್ತದೆಂದು ಹೇಳುತ್ತಾರ :— **ಎನ್ರು** - ಮೇಲೆ ಉಪಪಾದಿಸಿದಹಾಗೆ ಅರ್ಥ ಹೇಳುವದರ ಮೂಲಕ, **ಈಶ್ವರನುಡೈಯ ಸ್ವಭಾವತ್ತೈಯುಮ್** - ಸರ್ವೇಶ್ವರನ ಸ್ವಭಾವಗಳಾದ ಸ್ವಾತಂತ್ರ್ಯ ಕಾರುಣ್ಯಗಳನ್ನೂ, ವೈಷಮ್ಯ ನೈರ್ಘೃಣಾದಿಗಳಿಲ್ಲವೆಂಬುವದನ್ನೂ, **ಬಂಧಮೋಕ್ಷಾದಿ ವ್ಯವಸ್ಥೈಯುಮ್** - ಬಂಧಮೋಕ್ಷಾದಿಗಳುಂಟಾಗುವದಕ್ಕೆ ಕಾರಣಗಳು ಯಾವುವು ಎಂಬ ವ್ಯವಸ್ಥೆಯನ್ನೂ, ವ್ಯವಸ್ಥೆ ಹೇಗೆಂದರೆ, ಆಜ್ಞಾತಿ ಲಂಘನದಿಂದ ಬಂಧವೂ, ವ್ಯಾಜರೂಪೋಪಾಯಾನುಷ್ಠಾನದಿಂದ ಮೋಕ್ಷವೂ ಎಂಬದಾಗಿ ವ್ಯವಸ್ಥೆಯು, **ಪ್ರಮಾಣಪ್ರತಿನಿಯತಮಾನ ಪಡಿಯಿಲೇ**-ಪ್ರಮಾಣವನ್ನನುಸರಿಸಿ ತೋರಿಬರುವಹಾಗೆ, ಅನುಸಂಧಾನಮಾಡಿ, **ಸ್ವತಂತ್ರನುಡೈಯ ಕೃಪೈಯಿಲೆ** – ಸ್ವತಂತ್ರನಾದ ಸರ್ವೇಶ್ವರನ ಕೃಪೆಯಲ್ಲಿ, **ಊನ್ರಿಪ್ಪೋರ** - ಮುಖ್ಯವಾಗಿ ಅವಲಂಬನವಾಗಿ **ನೆನಿಸಿ** ಆಶ್ರಯಿಸುವದು, **ಅಡಕ್ಕುಮ್**-ಉಚಿತವು, **ಎನ್ರು ಕರುತ್ತು**-

ಎಂಬಭಿಪ್ರಾಯವು ; ಎಂದರೆ ವ್ಯಾಜವನ್ನನುಷ್ಠಿಸಿ ಅವನನ್ನು ವಶಮಾಡಿಕೊಂಡು ಅನುಗ್ರಹವನ್ನು ಹೊಂದುವದು ಉಚಿತವೆಂಬ ಭಾವವು. ವ್ಯಾಜ ನಿರಪೇಕ್ಷವಾದಿಗಳು ಹೇಳುವದರಲ್ಲಿ ನಾಲ್ಕು ವಿಧ ದೋಷಗಳುಂಟೆಂದೂ ತಾವು ಈಗ ಹೇಳಿದ ವ್ಯಾಜಸಾಪೇಕ್ಷವಾದದಲ್ಲಿ ನಾಲ್ಕು ವಿಧ ಗುಣಗಳುಂಟೆಂದು ತಿಳಿಸುತ್ತಾರೆ.

೧ ಅವರುಗಳು ಹೇಳಿದುದರಲ್ಲಿ ಈಶ್ವರ ಸ್ವಾತಂತ್ರ್ಯಕ್ಕೆ ಪ್ರಾಮುಖ್ಯತೆ ಹೇಳಲ್ಪಟ್ಟಿತೇ ವಿನಾ, ಸ್ವಾತಂತ್ರ್ಯದಿಂದ ಸೇರಿದ ಕಾರುಣ್ಯದ ಮಹಿಮೆಯು ಹೇಳಲ್ಪಡಲಿಲ್ಲವು ಈ ಎರಡು ಸ್ವಭಾವಗಳೂ ಲೀಲಾವಿಭೂತಿ ಭೋಗ ವಿಭೂತಿಗಳ ವ್ಯಾಪಾರಗಳಿಗೆಲ್ಲಾ ಹೇತುವಾಗಿ ಮುಖ್ಯವೆಂದು ತೋರಿಸಲ್ಪಟ್ಟಿತು.

೨ ಆ ವಾದದಲ್ಲಿ ವೈಷಮ್ಯನೈರ್ಘೃಣ್ಯಗಳನ್ನು ಸರ್ವೇಶ್ವರನಿಗೆ ಆರೋಪಿಸಿದಹಾಗೆ ಆಗುತ್ತದೆ. ಅನಾದಿಕರ್ಮ ವಿಶೇಷಗಳಿಗನುಸಾರವಾಗಿ ಶಿಕ್ಷೆ ರಕ್ಷಣೆಗಳೂ ಎಂದು ಹೇಳುವದರಿಂದ ವೈಷಮ್ಯನೈರ್ಘೃಣ್ಯಗಳಿಗೆ ಅವಕಾಶವೇ ಇಲ್ಲವು. ಈ ಅಭಿಪ್ರಾಯವು "ವೈಷಮ್ಯನೈರ್ಘೃಣ್ಯೇ ನಸಾಪೇಕ್ಷತ್ವಾತ್ ತಥಾಹಿ ದರ್ಶಯತಿ" ಎಂಬ ಬ್ರಹ್ಮಸೂತ್ರದಲ್ಲಿ (೨. ೧. ೩೪) ಉಪಪಾದಿತವಾಗಿರುತ್ತದೆ ಇದು ಸೃಷ್ಟಿ ಕ್ರಮವನ್ನು ಕುರಿತು ಹೇಳಿದುದಾದರೂ, ಸಾರ್ವತ್ರಿಕವಾಗಿಯೂ ಅನ್ವಯಿಸಬಹುದು. ಭಿನ್ನಭೋಗಗಳನ್ನುಂಟುಮಾಡಿದನೆಂಬ ವೈಷಮ್ಯವೂ, ಕ್ರೂರ ದುಃಖವನ್ನುಂಟುಮಾಡಿದನೆಂಬ ನೈರ್ಘೃಣ್ಯವೂ ಆತನಿಗಿಲ್ಲವು ಏಕೆಂದರೆ ಕ್ಷೇತ್ರಜ್ಞರ ಪೂರ್ವಕರ್ಮಾನುಗುಣವಾಗಿ ಸುಖದುಃಖಗಳುಪಭೋಗವು, ಶ್ರುತಿಯೂ ಹಾಗೆಯೇ ಹೇಳುತ್ತದೆ, "ಸಾಧುಕಾರೀ ಸಾಧುರ್ಭವತಿ, ಪಾಪಕಾರೀ ಪಾಪೋ ಭವತಿ" ಎಂಬದಾಗಿ, ಆದುದರಿಂದ ಶಿಕ್ಷೆರಕ್ಷಣೆ ಇವುಗಳು ವ್ಯಾಜಸಾಪೇಕ್ಷವಾಗಿಯೇ ಎಂದು ತಿಳಿಯತಕ್ಕದ್ದು

೩ ಆ ವಾದದಲ್ಲಿ ಬಂಧಕ್ಕೇನು ಕಾರಣ, ಮೋಕ್ಷಕ್ಕೇನುಕಾರಣವೆಂದರೆ ಸರ್ವೇಶ್ವರನ ಸ್ವಾತಂತ್ರ್ಯದಿಂದುಂಟಾದ ಸಂಕಲ್ಪವೆಂದು ಹೇಳಬೇಕಾಗುತ್ತದೆ ಇದರಿಂದ ಸರ್ವಮುಕ್ತಿ ಪ್ರಸಂಗ ಏಕೆ ಕೂಡದೆಂಬ ಆಕ್ಷೇಪಕ್ಕೆ ಉತ್ತರವಿಲ್ಲವು. ಈ ವ್ಯಾಜಸಾಪೇಕ್ಷವಾದದಲ್ಲಾದರೋ, ಚೇತನನ ದುಷ್ಕೃತ ಸುಕೃತಗಳು ಕಾರಣವಾಗಿ, ಭಗವನ್ನಿಗ್ರಹಾನುಗ್ರಹಗಳುಂಟಾಗಿ ಬಂಧಮೋಕ್ಷಪ್ರಾಪ್ತಿಗೆ ಸರಿಯಾದ ವ್ಯವಸ್ಥೆಯು ದೊರೆಯುತ್ತದೆ

೪. ಆ ವಾದದಲ್ಲಿ ವಿಧಿವಾಕ್ಯಗಳಾದ ಪ್ರಮಾಣಗಳು ದೂರೀಕೃತಮಾಡಲ್ಪಟ್ಟವು. "ಓ ಮಿತ್ಯಾತ್ಮಾನಂ ಯುಂಜೀತ" "ಮಾಮೇಕಂ ಶರಣಂ ವ್ರಜ" "ಆತ್ಮಾನಂ ಮಯಿ ನಿಕ್ಷಿಪೇತ್" "ಸಕೃದೇವ ಪ್ರಪನ್ನಾಯ

**ಸ್ವಾತಂತ್ರ್ಯ ಕಾರುಣ್ಯಯೋರುಭಯೋರಾವಶ್ಯಕತಾಂದರ್ಶಯತಿ**

**ನಿಷ್ಕೃಪನುಡೈಯ ಸ್ವಾತಂತ್ರ್ಯಮ್ ಬಾಧಕಮ್, ಅಸ್ವತಂತ್ರನುಡೈಯ ಕಾರುಣ್ಯಮ್ ಪಿರರ್ಕ್ಕುಮ್ ಅನುಪಕಾರಕಮಾಯ್, ತನಕ್ಕುಮ್ ಕ್ಲೇಶಾವಹಮಾಯಿರುಕ್ಕುಮ್.**

---

ತವಾಸ್ಮೀತಿ ಚ ಯಾಚತೇ" ಇತ್ಯಾದಿ ವ್ಯಾಜಗಳ ಆವಶ್ಯಕತೆಯೂ ಈಗ ತಾವು ಹೇಳಿದ ಪಾಶುರಾರ್ಥದಿಂದ ಪ್ರದರ್ಶಿಸಲ್ಪಟ್ಟಿತು

ಆದುದರಿಂದ ಇನ್ನ್ರನ್ನ್ ಎಂಬ ಪಾಶುರಾರ್ಥವು ಅವರುಗಳು ಹೇಳಿದ ಹಾಗಲ್ಲವೆಂದೂ, ತಾವು ಈಗ ಅನುಗ್ರಹಿಸಿದ ಅರ್ಥವು ಈ ನಾಲ್ಕು ವಿಧವಾಗಿ ಸಾಮಂಜಸ್ಯವನ್ನುಂಟುಮಾಡುವದರಿಂದ ಗ್ರಾಹ್ಯವೆಂದೂ ತಿಳಿಸಿರುತ್ತಾರೆ ಆದ ಕಾರಣ ಏಕಾಂತಿಗಳು ಭಗವಂತನ ಸ್ವಾತಂತ್ರ್ಯಯುಕ್ತ ಕಾರುಣ್ಯವನ್ನೇ ಅನುಸಂಧಾನಮಾಡತಕ್ಕದ್ದು

**ಸ್ವಾತಂತ್ರ್ಯಕಾರುಣ್ಯಗಳೆರಡೂ ರಕ್ಷಣೆಗೆ ಆವಶ್ಯಕವೆಂದು ತೋರಿಸುತ್ತಾರೆ.**

---

ಸ್ವಾತಂತ್ರ್ಯ ಕಾರುಣ್ಯಗಳಲ್ಲಿ ಒಂದೊಂದೇ ನಿಗ್ರಹಾನುಗ್ರಹಗಳಿಗೆ ಸಾಲವೇ ? ಎಂದರೆ ಎರಡೂ ಆವಶ್ಯಕವು ಎಂದು ಉಪಪಾದಿಸುತ್ತಾರೆ **ನಿಷ್ಕೃಪನುಡೈಯ** – ಕಾರುಣ್ಯವಿಲ್ಲದಿರುವವನ, ಸ್ವಾತಂತ್ರ್ಯವು, **ಬಾಧಕಮ್** – ಬಾಧಕವಾದುದು ; **ಅಸ್ವತಂತ್ರನುಡೈಯ** – ಸ್ವಾತಂತ್ರ್ಯವಿಲ್ಲದಿರುವವನ, **ಕಾರುಣ್ಯಮ್** – ಕೃಪೆಯು, ಪಿರರ್ಕ್ಕುಮ್ **ಅನುಪಕಾರಕಮಾಯ್** – ಇತರರಿಗೆ ಉಪಕಾರಮಾಡಲು ಶಕ್ತಿ ಇಲ್ಲದ್ದಾಗಿಯೂ, **ತನಕ್ಕುಮ್ ಕ್ಲೇಶಾವಹಮಾಯ್** – ಸಹಾಯ ಮಾಡಲು ಶಕ್ತಿ ಇಲ್ಲವೇ ಎಂಬ ಪರಿತಾಪದಿಂದ ತನಗೂ ದುಃಖಕರವಾಗಿ, ಇರುಕ್ಕುಮ್ ಇರುತ್ತದೆ ಶಿಕ್ಷಿಸುವವಕ್ಕೆ ಸ್ವಾತಂತ್ರ್ಯ ಮಾತ್ರವಿದ್ದರೆ ಸಾಲದೇ ? ಶಿಕ್ಷಿಸುವವನಲ್ಲಿ ಕೃಪೆಯೂ ಇರಬೇಕೇ ? ಎಂದರೆ ನಿಷ್ಕೃಪೆಯುಳ್ಳವನ ಸ್ವಾತಂತ್ರ್ಯವು ತುಂಬಾ ಬಾಧಕವು ಎಂದು ಹೇಳುತ್ತಾರೆ ಯಾರಿಗೆಂದರೆ ಆಶ್ರಿತರಿಗೂ ಕೂಡ ಬಾಧಕವೇ ಎಂಬ ತಾತ್ಪರ್ಯವು ಅತೃಪ್ತರಾದ ಪ್ರಜೆಗಳು ರಾಜನನ್ನು ಆಶ್ರಯಿಸಿ ಯಾಚಿಸಲು ಗುಂಪುಕೂಡಿದರೆ, ಇದನ್ನು ಸಹಿಸದೆ ಅಧಿಕಾರಿಗಳು ನಿಷ್ಕೃಪೆಯುಳ್ಳ ಪೋಲೀಸಿನವರಿಗೆ ಗುಂಪನ್ನು

**ಸ್ವತಂತ್ರನುಡೈಯ ಕಾರುಣ್ಯಮ್ ನಿನ್ಱೈತ್ತದು ಮುಡಿಕ್ಕೈಯಾಲೇ ತನಕ್ಕುಮ್ ಅತಿರಸಮಾಯ್, ಆಶ್ರಯಿಪ್ಪಾರ್ಕೆಲ್ಲಾಮ್ ಅನ್ಱೇ ಅನಿಷ್ಟ ನಿವೃತ್ತಿಕ್ಕುಮ್ ಇಷ್ಟಪ್ರಾಪ್ತಿಕ್ಕು ಮುಡಲಾಯಿರುಕ್ಕುಮ್.**

ಚದರಿಸುವ ಸ್ವಾತಂತ್ರ್ಯವನ್ನು ಕೊಟ್ಟರೆ ಅವರು ಹೇಗೆ ವಿಪರೀತ ನಡೆದು ತುಂಬಾ ಬಾಧಕವನ್ನುಂಟುಮಾಡುವರೋ ಹಾಗೆ ಎಂಬ ಭಾವವು. ಆದರೆ ನಿಷ್ಠುರರಾದ ಪೋಲೀಸ್‌ನವರಿಗೆ ಬದಲಾಗಿ ಕೃಪಾಯುಕ್ತರಾದ ಮೇಜಿಸ್ಟ್ರೇಟು ಮೊದಲಾದ ಅಧಿಕಾರಿಗಳಿಗಾಗಲಿ, ಸಹೃದಯರಾದ ಮಂತ್ರಿಗಳಿಗಾಗಲಿ ಸ್ವಾತಂತ್ರ್ಯವನ್ನು ಕೊಟ್ಟರೆ ಅನಾಹುತಗಳೇನೂ ನಡೆಯುವದಿಲ್ಲವು. ಆದುದರಿಂದ ಸರ್ವೇಶ್ವರನು ಸ್ವತಂತ್ರನೂ ಕೃಪಾಪರಿಪೂರ್ಣನೂ ಆಗಿರುವದರಿಂದ ಕೃಪಾವಿಶಿಷ್ಟ ಮ್ಯಾಜಿಸ್ಟ್ರೇಟಿನೋಪಾದಿಯಲ್ಲಿ ಯುಕ್ತ ಶಿಕ್ಷೆಯನ್ನು ವಿಧಿಸಿ ಆತನನ್ನು ಒಳ್ಳೇ ಮಾರ್ಗಕ್ಕೆ ತರುವನು. ಆಗ ಬಾಧಕವೇನೂ ಇಲ್ಲವು. ಹಾಗೆಯೇ ಸ್ವಾತಂತ್ರ್ಯವಿಲ್ಲದಿರುವ ಕೃಪಾವಿಶಿಷ್ಟನಿಂದ ಅನುಗ್ರಹವು ಉಂಟಾಗುವದಿಲ್ಲವು, ಇತರರಿಗೆ ಪ್ರಯೋಜನವೂ ಇಲ್ಲವು, ಸಹಾಯ ಮಾಡಲು ಶಕ್ತಿ ಇಲ್ಲವೇ ಎಂಬ ಪರಿತಾಪದಿಂದ ತನಗೂ ಕ್ಲೇಶವು ಎಂದು ತಿಳಿಸುತ್ತಾರೆ. ಹೇಗೆಂದರೆ, ಮಹಾ ಕೃಪೆಯುಳ್ಳ ಸ್ವಾತಂತ್ರ್ಯವಿಲ್ಲದ ರಾಜಭಟನನ್ನು ಆಶ್ರಯಿಸುವವರಿಂದ ಬಡ ಬ್ರಾಹ್ಮಣನ ದಾರಿದ್ರ್ಯವು ಹಿಂಗೀತೇ? ಆ ರಾಜಭಟನು ಈತನ ದೈನ್ಯವನ್ನು ನೋಡಿ ಶೋಕಿಸಬಹುದು. ಉಪಕಾರವೆಸಗಲು ಆತನಿಗೆ ಸ್ವಾತಂತ್ರ್ಯವೆಲ್ಲಿಯದು? ಆದರೆ ಸ್ವಾತಂತ್ರ್ಯವುಳ್ಳವನಾಗಿಯೂ ಕೃಪಾಯುಕ್ತನಾಗಿಯೂ ಇರುವ ರಾಜನನ್ನಾಶ್ರಯಿಸಿದರೆ ತನ್ನ ಮನೋರಥವು ಪೂರ್ಣವಾಗುವ ಸಂಭವವು ಉಂಟು. ಹಾಗೆಯೇ ಸರ್ವೇಶ್ವರನು ಸ್ವತಂತ್ರನಾಗಿಯೂ ಕೃಪಾಶಾಲಿಯಾಗಿಯೂ ಇರುವದರಿಂದ ಪರಮನಿಶ್ರೇಯಸ್ಸೂ ಕೂಡ ಸಾಧ್ಯವು. ಈ ಅಭಿಪ್ರಾಯವನ್ನೇ ಮುಂದಿನವಾಕ್ಯದಿಂದುಪದೇಶಿಸುತ್ತಾರೆ. ಸ್ವತಂತ್ರನುಡೈಯ ಕಾರುಣ್ಯಮ್ – ಸ್ವತಂತ್ರನಾಗಿರುವವನ ಕರುಣೆಯು, ನಿನ್ಱೈತ್ತದು ಮುಡಿಕ್ಕೈಯಾಲೇ - ಸಂಕಲ್ಪಿಸಿದುದನ್ನು ಪೂರ್ತಿ ಮಾಡಿಬಿಡುವದರಿಂದ, ತನಕ್ಕುಮ್ ಅತಿರಸಮಾಯ್- ತನಗೂ ತುಂಬಾ ಆನಂದಕರವಾಗಿ, ಆಶ್ರಯಿಪ್ಪಾರ್ಕೆಲ್ಲಾಮ್ - ಆಶ್ರಯಿಸಿದ ಎಲ್ಲರಿಗೂ, ಅನ್ಱೇ - ಆಗಲೇ, ಒಡನೇ ಅನಿಷ್ಟ ನಿವೃತ್ತಿಗೂ ಇಷ್ಟಪ್ರಾಪ್ತಿಗೂ ಉಡಲಾಯಿರುಕ್ಕುಮ್ - ಹೇತುವಾಗಿರುತ್ತದೆ. ಅಸ್ವತಂತ್ರನ ಕಾರುಣ್ಯವು ಯಾರಿಗೂ ಪ್ರಯೋಜನವಾಗದೆ ತನಗೆ ಕ್ಲೇಶಕ್ಕೆ ಕಾರಣವೆಂದು ಹೇಳಿ, ಸ್ವತಂತ್ರನ

**ಇಪ್ಪಡಿ (ಇರುಗ್ಗೈಯಾಲೇ) ಯಾಗ್ಗೈಯಾಲೇ ಅವತಾರ ದಶೈಯಿಲುಮ್ (೧) "ವ್ಯಸನೇಷು ಮನುಷ್ಯಾಣಾಂ ಭೃಶಂ ಭವತಿ ದುಃಖಿತಃ" ಎನ್ರಿಪ್ಪಡೈಗಳಿರ್ಚ್ಚೊಲ್ಲುಮವೈಯೆಲ್ಲಾಮ್ ಅನುಗ್ರಹ ವಿಷಯಮಾಯಿರುಪ್ಪಾರ್ ಶಿಲರೈ ರಂಜಿಪ್ಪಿಕ್ಕೈಕ್ಕುಮ್, ಆಸುರ ಪ್ರಕೃತಿಗಳೈ ಮೋಹಿಪ್ಪಿಕ್ಕೈಕ್ಕು ಮಾಗವತ್ತನೈ.**

---

ಕಾರುಣ್ಯವು ಆಶ್ರಿತರಿಗೆಲ್ಲಾ ಅನಿಷ್ಟನಿವೃತ್ತಿ ಇಷ್ಟಪ್ರಾಪ್ತಿಯುಂಟಾಗುವದಲ್ಲದೆ ತನಗೂ ಸಂತೋಷಕರವಾಗುತ್ತದೆ ಎಂಬ ಭಾವವು.

ಸ್ವತಂತ್ರನ ಕಾರುಣ್ಯವು ತನಗೆ ಆಹ್ಲಾದಕರವೆಂದು ಹೇಳಲ್ಪಟ್ಟಿತು. ಆದರೆ ಶ್ರೀ ವಾಲ್ಮೀಕಿ ಮಹರ್ಷಿಯು, ಶ್ರೀರಾಮನು ಸ್ವತಂತ್ರನಾದರೂ ತನ್ನ ಪ್ರಜೆಗಳ ವ್ಯಸನದಲ್ಲಿ ತಾನೂ ತುಂಬಾ ದುಃಖವುಳ್ಳವನಾಗುವನೆಂದು ಹೇಳಿರುತ್ತಾರಲ್ಲಾ ? ಎಂದು ಆಕ್ಷೇಪಿಸಿದರೆ, ಅದಕ್ಕೆ ಸಮಾಧಾನವನ್ನು ಮುಂದಿನ ವಾಕ್ಯದಿಂದ ಹೇಳುತ್ತಾರೆ. **ಇಪ್ಪಡಿ ಇರುಗ್ಗೈಯಾಲೆ** - ಸ್ವತಂತ್ರನ ಕರುಣೆಯು ಆತನಿಗೆ ಆಹ್ಲಾದಕರವಾಗಿರುವದರಿಂದ **ಅವತಾರ ದಶೈಯಿಲುಮ್** - ಅವತಾರವನ್ನು ಮಾಡಿದ ಸ್ಥಿತಿಯಲ್ಲಿ, "**ಮನುಷ್ಯಾಣಾಂ**-ಅಂತಹ ಪುರಜನಗಳಾದ ಸ್ವಕೀಯರಲ್ಲಿ ಮಾತ್ರವೇಯಲ್ಲದೆ ಸಾಧಾರಣರಾದ ಮನುಷ್ಯಸಾಮಾನ್ಯರ **ವ್ಯಸನೇಷು**-ವ್ಯಸನಗಳಲ್ಲಿ, **ಭೃಶಂ**-ಬೇಗ, **ದುಃಖಿತಃ**-ದುಃಖವನ್ನು ಹೊಂದಿರುವವನು, **ಭವತಿ**-ಆಗುವನು ಇದಕ್ಕೆ ಉತ್ತರಾರ್ಧವು—**ಉತ್ಸವೇಷು ಚ ಸರ್ವೇಷು ಪಿತೇವ ಪರಿತುಷ್ಯತಿ** - ಸಮಸ್ತಗಳಾದ ಉತ್ಸವಗಳಲ್ಲಿ, **ಪಿತೇವ** - ಸ್ವಂತ ತಂದೆಯೋಪಾದಿಯಲ್ಲಿ, **ಪರಿತುಷ್ಯತಿ** - ಪುನಃಪುನಃ ಸಂತೋಷಪಡುವನು" **ಎನ್ರಿಪ್ಪಡೈಗಳಿಲ್** ಎಂಬೀ ಸ್ಥಳಗಳಲ್ಲಿ, **ಚೊಲ್ಲುಮವೈ ಯೆಲ್ಲಾಮ್** - ಹೇಳುವದೆಲ್ಲವೂ, **ಅನುಗ್ರಹ ವಿಷಯಮಾಯಿರುಪ್ಪಾರ್ ಶಿಲರೈ** - ಶ್ರೀರಾಮನ ಅನುಗ್ರಹವನ್ನು ಸಂಪಾದಿಸಬೇಕೆಂದಿರುವ ಕೆಲವರನ್ನು, **ರಂಜಪ್ಪಿಕ್ಕೈಕ್ಕುಮ್** - ತನ್ನನ್ನು ಆಶ್ರಯಿಸುವ ಹಾಗೆ ಪ್ರೇಮೋತ್ಪಾದನವಾಗುವದಕ್ಕಾಗಿ ಚಿತ್ತರಂಜನ ಉಂಟುಮಾಡುವದಕ್ಕಾಗಿಯೂ, ಮತ್ತು **ಆಸುರಪ್ರಕೃತಿಗಳೈ** - ಆಸುರಸ್ವಭಾವವುಳ್ಳವರಿಗೆ, **ಮೋಹಿಪ್ಪೈಕ್ಕುಕ್ಕು ಮಾಗವತ್ತನೈ** - ಶ್ರೀರಾಮನು ಸರ್ವೇಶ್ವರನಲ್ಲವೆಂದು ಭ್ರಮೆಯನ್ನುಂಟುಮಾಡುವದಕ್ಕಾಗಿಯೂ, ಎಂದು **ಅತ್ತನೈ** - ಅಷ್ಟು ಮಾತ್ರಕ್ಕಾಗಿ ಎಂದು ಆ ಶ್ಲೋಕಾಭಿಪ್ರಾಯವು. **ವ್ಯಸ**

(೧) ರಾಮಾ. ಅಯೋಧ್ಯಾ. ೨.೪೦.

**ನೇಷು ಮನುಷ್ಯಾಣಾಂ** ಎಂಬ ಶ್ಲೋಕದಲ್ಲಿ ಸರ್ವೇಶ್ವರನಾದ ಶ್ರೀರಾಮನ ಕಾರುಣ್ಯಾತಿಶಯವು ಉಪಪಾದಿಸಲ್ಪಟ್ಟಿರುತ್ತದೆ ಹಿಂದಿನ ವಾಕ್ಯದಲ್ಲಿ ಸ್ವತಂತ್ರನ ಕೃಪೆಯು ಆಹ್ಲಾದಕರವಾದುದು ಎಂದು ಹೇಳಿದುದಕ್ಕೆ ಮಹರ್ಷಿಯ ಸೂಕ್ತಿಯು ವಿರೋಧವಾಯಿತಲ್ಲಾ ? **“ನ ತೇ ವಾಗ ನೃತಾ ಕಾವ್ಯೇ ಕಾಚಿದತ್ರ ಭವಿಷ್ಯತಿ”** “ನೀನು ಬರೆಯುವ ರಾಮಾಯಣ ಕಾವ್ಯದಲ್ಲಿ ಸುಳ್ಳಾದ ವಾಕ್ಕು ಎಂದಿಗೂ ಉಂಟಾಗಲಾರದು” ಎಂಬ ಬ್ರಹ್ಮನ ಅನುಗ್ರಹವು ಮಹರ್ಷಿಗೆ ಇರುವಾಗ **“ವ್ಯಸನೇಷು”** ಎಂಬ ಶ್ಲೋಕಾಭಿಪ್ರಾಯವು ಎಂದಿಗೂ ಸುಳ್ಳಾಗಲಾರದಷ್ಟೇ. ಹಾಗಾದರೆ ಸರಿಯಾದ ಶ್ಲೋಕಾಭಿಪ್ರಾಯವೇನೆಂದರೆ ಹೇಳುತ್ತಾರೆ ಮನುಷ್ಯರು ದೈವ ಸ್ವಭಾವವುಳ್ಳವರು ಆಸುರಸ್ವಭಾವವುಳ್ಳವರು ಎಂಬದಾಗಿ ಎರಡು ವಿಧವೆಂದು ಗೀತೆಯಲ್ಲಿ ಹೇಳಲ್ಪಟ್ಟಿರುತ್ತದೆ. ಸರ್ವೇಶ್ವರನಿಗೆ ವ್ಯಸನವೆಲ್ಲಿಯದು ? ಶ್ರೀರಾಮನು ಮನುಷ್ಯಾವತಾರಿಯಾದುದರಿಂದ ಮನುಷ್ಯರಹಾಗೆ ನಟನೆಯು ಇತರರು ದುಃಖಪಟ್ಟರೆ ತಾನೂ ಅವರೊಂದಿಗೆ ಖಿನ್ನನಾಗುವನು ಇದರಿಂದ ದೈವ ಸ್ವಭಾವವುಳ್ಳವರಿಗೆ ಈತನು ಸಹೃದಯನಾಗಿ ವರ್ತಿಸಿದರಿಂದ, ತನ್ನನ್ನು ಅವರು ಆಶ್ರಯಿಸುವಹಾಗೆ ಮಾಡಿಕೊಳ್ಳುವನು, ಆಸುರಸ್ವಭಾವದವರಲ್ಲಿ ತನ್ನ ಈ ವಿಡಂಬನದಿಂದ ಸಾಧಾರಣ ಮನುಷ್ಯನೆಂದು ಭಾವಿಸಿ, ತನ್ನನ್ನು ಆಶ್ರಯಿಸದೇ ಇರುವರು. ಹೀಗೆ ಈತನ ವ್ಯಸನರೂಪ ನಾಟಕವು ದೈವಸ್ವಭಾವದವರನ್ನು ಆಶ್ರಯಿಸುವ ಹಾಗೆ ಮಾಡುವದಕ್ಕೂ, ಆಸುರಸ್ವಭಾವದವರನ್ನು ಆಶ್ರಯಿಸದ ಹಾಗೆ ಮಾಡುವದಕ್ಕೂ ಸಹಕಾರಿಯಾಗುತ್ತದೆಂಬ ಭಾವವು. ಮನುಷ್ಯರ ವ್ಯಸನದಲ್ಲಿ ದುಃಖ ನಟನೆಯೂ ಉತ್ಸವದಲ್ಲಿ ಸಂತೋಷದ ನಟನೆಯೂ, ಸಹ ಸ್ವಾತಂತ್ರ್ಯಕಾರುಣ್ಯಗಳುಳ್ಳ ಸರ್ವೇಶ್ವರನ ಲೀಲಾರಸದ ಪರೀವಾಹವೇ ವಿನಾ ಬೇರೆಯಲ್ಲವು. ಆದುದರಿಂದ ವಿರೋಧವೇನೂ ಇಲ್ಲವೆಂಬ ಭಾವವು ಸತ್ವಗುಣಾಧಿಕ್ಯವುಳ್ಳ ಪುರುಷನು ಇತರರು ಕಷ್ಟಪಡುತ್ತಲಿರುವದನ್ನೂ, ಕೆಟ್ಟುಹೋಗುತ್ತಿರುವದನ್ನೂ ಕಂಡು ಪರಿತಾಪಪಡುವದೂ ಸಹಜವಾದ ಕಲ್ಯಾಣಗುಣವೇ ಸರಿ ಆದುದರಿಂದ ತನ್ನನ್ನು ಆಶ್ರಯಿಸಿದ್ದುದಾದರೆ ಇಂತಹ ವ್ಯಸನಗಳಿಗೆ ಕಾರಣವಿರುತ್ತಿರಲಿಲ್ಲವೇ ? ಇಂತಹ ಸುಲಭೋಪಾಯವನ್ನವಲಂಬಿಸುವದಿಲ್ಲವೇ ? ಎಂಬ ಪಶ್ಚಾತ್ತಾಪದ ಪ್ರಕಟನೆಯಾದರೂ ಆಗಬಹುದು. ಉತ್ಸವವು ಯಾವಾಗವೆಂದರೆ, ತನ್ನನುಗ್ರಹವನ್ನು ಹೊಂದಿದಾಗ ; ಆದುದರಿಂದ ತನ್ನನುಗ್ರಹಕ್ಕೆ ಪಾತ್ರರಾದರಲ್ಲಾ ಎಂಬ ಹರ್ಷಪ್ರದರ್ಶನವನ್ನು ಶ್ರೀರಾಮನು ಮಾಡಿದನೆಂದೂ ಭಾವಿಸಬಹುದು, ಅಂತೂ ಕಾರುಣ್ಯ ಪ್ರದರ್ಶನವು ತನಗೆ ತುಂಬಾ ರಸಾವಹವಾದುದೆಂದು ಹೇಳಲು

**ಇನ್ವರ್ಥತ್ರ್ಯ** (೧) "**ಕಾಲಸ್ಯ ಹಿ ಚ ಮೃತ್ಯೋಶ್ಚ ಜಙ್ಗಮ ಸ್ಥಾವರಸ್ಯಚ । ಈಶತೇ ಭಗವಾನೇಕಸ್ಸತ್ಯ ಮೇತದ್ಬ್ರವೀಮಿತೇ । ಈಶನ್ನಪಿ ಮಹಾಯೋಗೀ ಸರ್ವಸ್ಯ ಜಗತಃಪ್ರಭುಃ । ಕರ್ಮಾಣ್ಯಾ**

ಅಭ್ಯಂತರವಿರುವದಿಲ್ಲವು. ಹೀಗೆ ವ್ಯಸನಪ್ರದರ್ಶನ ಮೊದಲಾದವೆಲ್ಲಾ ಕೇವಲ ವಿಡಂಬನವೇ; ವಿನಾ ಯಥಾರ್ಥವಾದುದಲ್ಲವು. ಕಾಲಯವನನಿಗೆ ಅಂಜಿ ಪಲಾಯನಮಾಡಿದಹಾಗೆ ನಟಿಸಿದುದು, ಮುಚುಕುಂದರು ತಮ್ಮ ನಿದ್ರೆ ತಿಳಿದು ಕಣ್ಣು ಬಿಟ್ಟು ನೋಡಿದಾಗ ಕಾಲಯವನನು ಭಸ್ಮವಾಗಲಿ ಎಂಬ ಉದ್ದೇಶ್ಯದಿಂದೆಂದು ಭಾವಿಸತಕ್ಕದ್ದು. ಸರ್ವಶಕ್ತನಾಗಿ "**ಅಂಗುಳ್ಯಗ್ರೇಣತಾನ್ ಹನ್ಯಾಮಿಚ್ಛನ್ ಹರಿಗಣೇಶ್ವರ**" "ಓ ವಾನರ ರಾಜನಾದ ಸುಗ್ರೀವನೇ ಒಂದು ಬೆರಳು ತುದಿಯು ಹೊಡತದಿಂದ ಅವರೆಲ್ಲರನ್ನೂ ಕೊಲ್ಲಲು ಶಕ್ತಿ ಇರುವದು" ಎಂದು ಹೇಳಿಕೊಂಡವನಿಗೆ ಪಲಾಯನವು ಹೇಗೆ ಅಯಥಾರ್ಥವಾದುದೋ, ಹಾಗೆಯೇ ಇಲ್ಲಿಯೂ ದೀನರಾದವರನ್ನು ಕಂಡುದರಿಂದ ವ್ಯಸನವೆಂದು ಹೇಳಿಕೊಂಡಿರುವದೂ ಕೇವಲ ನಟನೆಯೇ ಎಂದು ಭಾವಿಸತಕ್ಕದ್ದು.

ಈ ಮೇಲಿನ ಹೇಳಿಕೆಗಳಿಗೆ ಋಷಿವಾಕ್ಯಗಳನ್ನು ಉದಾಹರಿಸುತ್ತಾರೆ — **ಕಾಲಸ್ಯ ಹಿ ಚ** - ಕಾಲಕ್ಕೂ, **ಮೃತ್ಯೋಶ್ಚ** - ಯಮನಿಗೂ. **ಜಙ್ಗಮಸ್ಥಾವರಸ್ಯಚ** - ಚಲಿಸುವ ಚಲಿಸದೇ ಇರುವ ಚರಾಚರಭೂತಗಳಿಗೂ ಎಲ್ಲಕ್ಕೂ **ಭಗವಾನ್ ಏಕಃ** - ಷಾಡ್ಗುಣ್ಯಪರಿಪೂರ್ಣನಾದ ಈಶ್ವರನೊಬ್ಬನೇ, **ಈಶತೇ** - ನಿಯಮಿಸುವನಾಗಿದ್ದಾನೆ; **ತೇ** - ನಿನಗೆ, **ಏತತ್ ಸತ್ಯಂ** ಈ ಸತ್ಯವಾದ ಮಾತನ್ನು, **ಬ್ರವೀಮಿ** ಹೇಳುವೆನು, **ಈಶನ್ನಪಿ** - ಹೀಗೆ ಸರ್ವಕ್ಕೂ ಸ್ವತಂತ್ರನಾದ ಸ್ವಾಮಿಯಾಗಿದ್ದರೂ, **ಸರ್ವಸ್ಯ ಜಗತಃಪ್ರಭುಃ** - ಸಮಸ್ತ ಜಗತ್ತಿಗೂ ಸ್ವಾಮಿಯಾಗಿ, **ಮಹಾಯೋಗೀ** - ಮಹಾ ಯೋಗವನ್ನು ಹೊಂದಿದ ಶ್ರೀ ಕೃಷ್ಣನು, ಜ್ಞಾನಾದಿ ಮಹಾಕಲ್ಯಾಣಗುಣಗಳು ಅಘಟಿತ ಘಟನಾಶಕ್ತಿ ಮೊದಲಾದವುಗಳ ಪರಿಪೂರ್ಣತೆ ಹೊಂದಿದ್ದರೂ ಕೂಡ, ಎಂಬ ಭಾವವು ಶ್ರೀ ಕೃಷ್ಣನು **ದುರ್ಬಲಃ**-ಶಕ್ತಿ ಇಲ್ಲದೆ, **ಕೀನಾಶ ಇವ**-ಕೃಷಿ ಮಾಡುವ ರೈತನ ಹಾಗೆ, **ಕರ್ಮಾಣ್ಯಾರಭತೇ** - ಪಲಾಯನಾದಿ ಕರ್ಮಗಳನ್ನು ಮಾಡಲುಪಕ್ರಮಿಸುವನು. "**ವರ್ತ ಏವಚ ಕರ್ಮಣಿ**" (ಗೀ. ೩. ೨೨.) ಎಂದು ಹೇಳಿರುವ ಹಾಗೆ ಏನನ್ನೂ ಮಾಡಬೇಕಾದವಶ್ಯಕತೆ ಇಲ್ಲದಿದ್ದರೂ ಸದಾ ಲೋಕಶಿಕ್ಷಣಾರ್ಥವಾಗಿಯೂ, ಲೋಕ

(೧) ಭಾರತ. ಉದ್ಯೋಗ ೬೭-೧೩, ೧೪.

**ರಭತೇ ಕರ್ತ್ತುಂ ಕೀನಾಶ ಇವ ದುರ್ಬಲಃ । ತೇನ ವಂಚಯತೇ ಲೋಕಾನ್ಮಾಯಯಾ ಯೋಗೇನ ಕೇಶವಃ । ಯೇ ತಮೇವ ಪ್ರಪದ್ಯಂತೇ ನತೇ ಮುಹ್ಯನ್ತಿ ಮಾನವಾಃ ” (೧) “ಕೃತ್ವಾ ಭಾರಾವತರಣಂ ಪೃಥಿವ್ಯಾಃ ಪೃಥುಲೋಚನಃ । ಮೋಹಯಿತ್ವಾ ಜಗತ್ಸರ್ವಂ ಗತಸ್ಸಂಸ್ಥಾನಮುತ್ತಮಂ । ” (೨) “ಮನುಷ್ಯದೇಹಿನಾಂ ಚೇಷ್ಟಾ ಮಿತ್ಯೇವ ಮನುವರ್ತತೇ ।**

---

ಸಂಗ್ರಹಾರ್ಥವಾಗಿಯೂ ದುಷ್ಟನಿಗ್ರಹ ಶಿಷ್ಟ ಪರಿಪಾಲನೆಗಾಗಿಯೂ ಯಾವಾಗಲೂ ಕರ್ಮವನ್ನೆಸಗುತ್ತಲೇ ಇರುವನೆಂಬ ಭಾವವು ಹೀಗೆ ದುರ್ಬಲನಾಗಿ ತೋರಿಸಿಕೊಂಡಿದ್ದ ಶ್ರೀ ಕೃಷ್ಣಾವತಾರ ಮಾತ್ರದಲ್ಲೇ ಅಲ್ಲದೆ, ಶ್ರೀ ರಾಮಾವತಾರದಲ್ಲೂ **ಲೋಕ ನಾಥಃ ಪುರಾ ಭೂತ್ವಾ ಸುಗ್ರೀವಂ ನಾಥಮಿಚ್ಛತಿ,** ತಾನು ಲೋಕಕ್ಕೆಲ್ಲಾ ನಿಯಾಮಕನಾದ ಸ್ವಾಮಿಯಾದರೂ ಸುಗ್ರೀವನನ್ನು ತನಗೆ ಸ್ವಾಮಿಯನ್ನಾಗಿ ಅಪೇಕ್ಷಿಸಿದನು, ಎಂದೂ **“ಯಸ್ಯ ಪ್ರಸಾದೇ ಸತತಂ ಪ್ರಸೀದೇಯು ರಿಮಾಃಪ್ರಜಾಃ । ಸರಾಮೋ ವಾನರೇಂದ್ರಸ್ಯ ಪ್ರಸಾದಮಭಿಕಾಂಕ್ಷತಿ”** ಯಾವ ಶ್ರೀರಾಮನು ಪ್ರಸನ್ನನಾಗಲು, ಈ ಪ್ರಜೆಗಳೆಲ್ಲಾ ಸರ್ವಶ್ರೇಯಸ್ಸನ್ನೂ ಹೊಂದುವರಾಗುವರೋ, ಅಂತಹ ಶ್ರೀರಾಮನು ಈಗ ಕಪಿರಾಜನ ಪ್ರಸನ್ನತೆಯನ್ನು ಪ್ರಾರ್ಥಿಸುವನಾಗಿದ್ದಾನೆ” ಎಂದೂ ಹೇಳಿರುವಲ್ಲಿಯೂ ತೋರಿಸಿರುತ್ತದೆ. **ಕೇಶವಃ**-ಬ್ರಹ್ಮರುದ್ರಾದಿಗಳಿಗೂ ನಿಯಾಮಕನಾದ ಶ್ರೀ ಕೃಷ್ಣನು, **ತೇನಮಾಯಯಾ ಯೋಗೇನ**-ಅಂತಹ ವಿವಿಧ ವಿಚಿತ್ರ ಚೇಷ್ಟೆಗಳನ್ನು ಮಾಡುವ ಸಙ್ಕಲ್ಪ ಮಾಹಾತ್ಮ್ಯೆಯಿಂದ, **ಲೋಕಾನ್ ವಂಚಯತೇ**-ಅಸುರಸ್ವಭಾವವುಳ್ಳ ಜನರನ್ನು ವಂಚಿಸುವನು ; **ಯೇ** - ಯಾವ ದೈವ ಸ್ವಭಾವಯುಕ್ತರು, **ತಮೇವ** - ಹೀಗೆ ಅಸುರ ಸ್ವಭಾವದವರಿಗೆ ಸಾಧಾರಣ ಮನುಷ್ಯನೆಂದು ತೋರುವ ಆ ಶ್ರೀ ಕೃಷ್ಣನನ್ನೇ, **ಪ್ರಪದ್ಯನ್ತೇ**- ಶರಣಾಗತರಾಗಿ ಆಶ್ರಯಿಸುತ್ತಾರೋ, **ತೇ ಮಾನವಾಃ** – ಆ ಮನುಷ್ಯರು, **ನಮುಹ್ಯನ್ತಿ** - ಮೋಸ ಹೋಗುವದಿಲ್ಲವು, ಭ್ರಮೆಯನ್ನು ಹೊಂದುವದಿಲ್ಲವು. ಇದು ಮಹಾ ಭಾಗವತನಾದ ಸಂಜಯನು ಧೃತರಾಷ್ಟ್ರನಿಗೆ ಶ್ರೀ ಕೃಷ್ಣನ ಪರತ್ವವನ್ನು ಉಪದೇಶಿಸುವ ಪ್ರಕರಣವು. “**ಪೃಥುಲೋಚನಃ** - ಕೃಪಾಸೂಚಕ ವಿಶಾಲ ನೇತ್ರಗಳುಳ್ಳ ಶ್ರೀ ಕೃಷ್ಣನು, **ಪೃಥಿವ್ಯಾಃ**-ಭೂಮಿಯ, **ಭಾರಾವತರಣಂ ಕೃತ್ವಾ** - ಭಾರವನ್ನಿಳುಹಿದವನಾಗಿ, **ಜಗತ್ಸರ್ವಂ** ಸಮಸ್ತ ಜಗತ್ತನ್ನೂ, **ಮೋಹಯಿತ್ವಾ**-

---

(೧) ಭಾರತ. ಮೌಸ ೯. ೩೪. (೨) ವಿ ಪು ೫ ೩೨. ೧೪.

---

**ಲೀಲಾ ಜಗತ್ಪತೇಃ ಸ್ತಸ್ಯಛಂದತಃ ಸಂಪ್ರವರ್ತತೇ” ಇತ್ಯಾದಿಗಳಿಲೇ ಮಹ ರ್ಷಿಗಳ್ ಅರುದಿ ಇಟ್ಟಾರ್‌ಗಳ್. ಆಗೈಯಾಲ್ ಅವತಾರ ವೃತ್ತಾಂತಙ್ಗ ಳಿಲುಮ್ ದುಃಖಾಭಿನಯಮಾತ್ರಮೇಯುಳ್ಳದು ಅದು ತಾನುಮ್ ಕೃಪಾ**

---

**ಮೋಹಗೊಳಿಸಿದವನಾಗಿ, ಉತ್ತಮಂ** ಸರ್ವೋತ್ತಮವಾದ, **ಸ್ವಂಸ್ಥಾನಂ** - ತನ್ನ ಸ್ವಕೀಯಸ್ಥಾನವಾದ ನಿತ್ಯ ವಿಭೂತಿಯನ್ನು ಕುರಿತು, **ಗತಃ** - ತೆರಳಿದನು ಈ ಶ್ಲೋಕದಲ್ಲೂ ಎಲ್ಲರನ್ನೂ ಮೋಹಗೊಳಿಸಿದನೆಂದು ತೋರಿಬರುತ್ತದೆ (೨) **“ಮನುಷ್ಯದೇಹಿನಾಂ** ಮನುಷ್ಯ ದೇಹವನ್ನು ಹೊಂದಿರುವವರ, **ಚೇಷ್ಟಾಂ** - ವ್ಯಾಪಾರವನ್ನು, **ಇತ್ಯೇವಂ** - ಮೇಲೆ ಹೇಳಿದ ರೀತಿಯಲ್ಲಿ ಎಂದರೆ ಹಿಂದೆ ಸಾಮದಾನ ಭೇದ ದಂಡರೂಪದಲ್ಲಾಗಲಿ, ಅಥವಾ ಪಲಾಯನವನ್ನು ಮಾಡಿ ಯಾಗಲಿ, **ಅನುವರ್ತತೇ** - ಅನುಸರಿಸುತ್ತಾನೆ **ತಸ್ಯ** - ಆ, **ಜಗತ್ಪತೇಃ** - ಜಗತ್ತಿಗೆಲ್ಲಾ ಸ್ವಾಮಿಯಾದ ಶ್ರೀ ಕೃಷ್ಣನ, ಲೀಲೆಯು, **ಛಂದತಃ** - ಆತನ ಸಂಕಲ್ಪದಿಂದ, **ಸಂಪ್ರವರ್ತತೇ** ಚನ್ನಾಗಿ ಪ್ರವರ್ತಿಸಲ್ಪಡುತ್ತದೆ (ಪರಿವರ್ತತೇ) ಎಂದು ಪಾಠಾಂತರ ಉಂಟು) **ಇತ್ಯಾದಿಗಳಿಲೇ** - ಇವೇ ಮೊದಲಾದವುಗಳಲ್ಲಿ **ಮಹರ್ಷಿಗಳ್**-ವಾಲ್ಮೀಕಿ, ವ್ಯಾಸ, ಪರಾಶರಾದಿಗಳು. **ಅರುದಿ ಇಟ್ಟಾರ್‌ಗಳ್**- ನಿರೂಪಿಸಿರುತ್ತಾರೆ **ಆಗೈಯಾಲ್**- ದೈವ ಪ್ರಕೃತಿಗಳನ್ನು ಆಕರ್ಷಣ ಮಾಡುವದ ಕ್ಕೂ, ಅಸುರ ಪ್ರಕೃತಿಗಳನ್ನು ವಂಚಿಸುವದಕ್ಕೂ, ಹೀಗೆ ಲೋಕವಿಡಂಬನವಾದು ದರಿಂದ, ಅವತಾರವೃತ್ತಾಂತಗಳಲ್ಲಿ, **ದುಃಖಾಭಿನಯಮಾತ್ರಮೇ ಯುಳ್ಳದು**- ಯಥಾರ್ಥವಾಗಿಯೂ ದುಃಖಪಟ್ಟರೆಂದು ಭಾವಿಸತಕ್ಕದ್ದಲ್ಲವು, ದುಃಖವಾದ ಹಾಗೆ ನಟನೆ ಮಾತ್ರವನ್ನೇ ಪ್ರದರ್ಶಿಸುವಂಥಾವುಗಳು ಇದಕ್ಕೆ ನಿದರ್ಶನವಾಗಿ ಸೀತಾವಾಕ್ಯವನ್ನು ಉದಾಹರಿಸಬಹುದು. **“ವಿಧಿರ್ನೂನಮಸಂಹಾರ್ಯಃ ಪ್ರಾಣಿ ನಾಂ ಪ್ಲವಗೋತ್ತಮ । ಸೌಮಿತ್ರಿಂ ಮಾಂಚ ರಾಮಂಚ ವ್ಯಸನೈಃ ಪಶ್ಯ ಮೋಹಿತಾನ್”** ಜ್ಯೇಷ್ಠ ಭ್ರಾತಾವನ್ನು ಪಿತಾ ಅಥವಾ ಗುರು ಎಂದು ಭಾವಿಸಿ ಸದಾ ಆತನ ಶುಶ್ರೂಷೆಯಲ್ಲಿ ನಿರತನಾದ ಲಕ್ಷ್ಮಣನೂ, ಪತಿಯೇ ಪರದೈವ ವೆಂದು ಭಾವಿಸಿದ ತನಗೂ, ಧರ್ಮದೇವತೆಯೇ ತಾನು ಎಂದು ವರ್ತಿಸುವ ಶ್ರೀರಾಮನಿಗೂ ದುಃಖವು ತಪ್ಪಿದ್ದಲ್ಲವೆಂದರೆ, ಪ್ರಾಣಿಗಳಿಗೆ ವಿಧಿಯನ್ನು ಮೀರಲು ಸಾಧ್ಯವಲ್ಲವೆಂದು ತಿಳಿಯುತ್ತೇನೆಂದು ಸೀತೆಯು ಆಂಜನೇಯನನ್ನು ಕುರಿತು ಹೇಳುತ್ತಾಳೆ. ಇಲ್ಲಿ ಪ್ರಾಣಿಗಳಿಗೆ ಅವರುಗಳ ದುಷ್ಕೃತಾನುಗುಣವಾಗಿ ವ್ಯಸನ ಪ್ರಾಪ್ತಿಯು ಎಂಬ ಲೋಕಶಿಕ್ಷಣಾರ್ಥವಾಗಿ ವ್ಯಸನದ ಅಭಿನಯವೆಂದು ತಿಳಿಯ

**ಮೂಲಮ್. ಇದು ಸ್ವತಂತ್ರನಾನ ತನಕ್ಕು ಲೀಲೈಯುಮಾಯಿರು ಕ್ಕುಮ್. ಕೂನರ್ ಕುರಳರ್ೈಕೊಂಡಾಡಿ ರಕ್ಷಿಕ್ಕೈ ನಿರಪೇಕ್ಷರಾನ ರಾಜಾಕ್ಕಳುಕ್ಕು ಲೀಲೆಯುಮಾಯ್ ಕೃಪಾಕಾರ್ಯಮುಮಾಯ್ ಕ್ಕಾಣಾ**

---

ತಕ್ಕದ್ದು. **ಅದು ತಾನುಮ್** – ಅದೂ ಕೂಡ, **ಕೃಪಾಮೂಲಂ** - ಭಗವತ್ಕೃಪೆಯೇ ಮೂಲವಾಗಿರುವುದು, ಅಂತಹ ಅಭಿನಯವೂ ಕೂಡ ಭಗವತ್ಕೃಪಾಮೂಲವಾದುದೆಂದೇ ಭಾವಿಸತಕ್ಕದ್ದೆಂಬ ಭಾವವು ಆಸುರ ಸ್ವಭಾವವುಳ್ಳವರನ್ನು ನಿರಾಕರಿಸಿ ದೈವ ಸ್ವಭಾವವುಳ್ಳವರು ತನ್ನನ್ನು ಆಶ್ರಯಿಸುವ ಹಾಗೆಮಾಡುವುದೂ ಕೂಡ ಕೃಪಾಪ್ರಭಾವವೇ ಎಂದು ಹೇಳುತ್ತಾರೆ. ಹೀಗೆ ಆಸುರ ಪ್ರಕೃತಿಗಳನ್ನು ನಿರಾಕರಿಸಿ, ದೈವೀ ಪ್ರಕೃತಿಗಳಿಗೆ ಚಿತ್ತರಂಜನೆಯನ್ನುಂಟುಮಾಡುವದರಿಂದ ತನಗೆ ಆಗತಕ್ಕದ್ದೇನೆಂದರೆ. “**ಲೋಕವತ್ತು ಲೀಲಾ ಕೈವಲ್ಯಂ**” ಎಂಬ ಸೂತ್ರದಲ್ಲಿ ಹೇಳಿರುವ ಹಾಗೆ “**ಸವ್ರ್ಯಾದಿವಾತ್ಸ ಸಮಯಾ ಸಹಮೋದಸೇತ್ವಂ**” ಪೂರ್ಣಕಾಮನಾದ ರಾಜಾಧಿರಾಜನು ತನ್ನ ಪತ್ನಿಯೊಂದಿಗೆ ಹೇಗೆ ಇಂತಹ ದಿವ್ಯ ಚೇಷ್ಟಿತಗಳ ಮೂಲಕ ಲೀಲಾ ವಿಹಾರವನ್ನನುಭವಿಸುವನೋ, ಹಾಗೆಯೇ ಸರ್ವೇಶ್ವರನು ಪರಿಪೂರ್ಣ ಕಾಮನಾದುದರಿಂದ ತನಗೆ ಸಮಳಾದ ಪತ್ನಿಯೊಂದಿಗೆ ಇವೆಲ್ಲಾ ಆತನಿಗೆ ಲೀಲೆ ಎಂದು ತಿಳಿಸುತ್ತಾರೆ. **ಇದು** – ಇಂತಹ ದುಃಖಾಭಿನಯವೇ ಮೊದಲಾದ ವ್ಯಾಪಾರವು, **ಸ್ವತಂತ್ರನಾದ ತನಗೆ** ಎಂದರೆ ಸರ್ವೇಶ್ವರನಿಗೆ, **ಲೀಲೈಯುಮಾ ಯಿರುಕ್ಕುಮ್** - ಲೀಲೆಯಾಗಿರತ್ತದೆ ಇದನ್ನೇ ದೃಷ್ಟಾಂತ ಮೂಲಕ ಸಮರ್ಥನೆ ಮಾಡುತ್ತಾರೆ. ಕೃಪಾಕಾರ್ಯವಾಗಿರುವದು ಲೀಲೆಯಾಗಿ ಪರಿಣಮಿಸುವುದುಂಟೋ ಎಂದರೆ ದೃಷ್ಟಾಂತಮೂಲಕ ಉಂಟೆಂದು ಸಮರ್ಥನೆ ಮಾಡುತ್ತಾರೆ **ಕೂನರ್** - ಗೂನರನ್ನೂ, **ಕುರಳರ್ೈ** - ಕುಳ್ಳರನ್ನೂ, **ಕೊಂಡಾಡಿ ರಕ್ಷಿಕ್ಕೈ** - ಉದ್ದೇಶಿಸಿ ವಿನೋದಮಾಡಿ ರಕ್ಷಿಸುವುದು, **ನಿರಪೇಕ್ಷರಾನ ರಾಜಾಕ್ಕಳುಕ್ಕು** - ಪೂರ್ಣಕಾಮರಾದ ರಾಜರುಗಳಿಗೆ, ಲೀಲೆಯೂ ಕೃಪಾಕಾರ್ಯವೂ ಆಗಿರುವುದನ್ನು, **ಕಾಣಾನಿನ್ರೋಮಿರೆ** - ಕಂಡಿರುವೆವಷ್ಟೇ. ಹಾಗೆಯೇ ಶ್ರೀ ಕೃಷ್ಣನೂ ಕೂಡ ತ್ರಿವಕ್ರಳಾದ ಕುಬ್ಜೆಯ ಕಾಲನ್ನು ಕಾಲಿಂದ ಮೆಟ್ಟಿಕೊಂಡು ಕೈಹಿಡಿದು ಎತ್ತಿದುದರಿಂದ ಋಜುವಾದವಳಾಗಿ “**ಮುಕುಂದಸ್ಪರ್ಶನಾತ್ಸದ್ಯೋ ಬಭೂವ ಪ್ರಮದೋತ್ತಮಾ**” ಎಂದು ಹೇಳಿರುವ ಹಾಗೆ ಸರ್ವಲಾವಣ್ಯಯುಕ್ತಳಾದ ಸ್ತ್ರೀರತ್ನವಾದಳೆಂಬ ವೃತ್ತಾಂತ

**ನಿನ್ನೋಮಿರಿ. ಇಪ್ಪಡಿಯೊಗ್ಯೆಯಾಲೇ (೧) "ಉಪಾದತ್ತೇ ಸತ್ತಾಸ್ಥಿತಿ ನಿಯಮನಾದ್ಯೈಶ್ಚಿದ ಚಿದೌ ಸ್ವಮುದ್ದಿಶ್ಯ ಶ್ರೀಮಾನ್" ಎನ್ರದು.**

ವುಂಟು. ಹಾಗೆಯೇ ರಾಮಾವತಾರದಲ್ಲೂ ವನವನ್ನು ಕುರಿತು ತೆರಳುವ ದುಃಖ ಕಾಲದಲ್ಲಿ ಮುಂಚೆ, ಉಂಛವೃತ್ತಿಯಿಂದ ಜೀವಿಸುತ್ತಾ, "ಶಾಟೀಮಾಚ್ಛಾದ್ಯ ದುಶ್ಛದಾಂ" ಹೊದೆಯುವುದಕ್ಕೆ ಆಗದ ಹಾಗೆ ಹರಕಾಗಿರುವ ಬಟ್ಟೆಯನ್ನು ಹೊದ್ದುಕೊಂಡು ಬಂದ ತ್ರಿಜಟನೆಂಬ ಬ್ರಾಹ್ಮಣನಿಗೆ, ಪರಿಹಾಸ ಸಮನ್ವಿತನಾಗ ದಂಡವನ್ನು ಎಲ್ಲಿಯವರಿಗೆ ಎಸೆಯುತ್ತೀಯೋ ಅಲ್ಲಿಯವರೆಗೆ ಆಕಳುಗಳು ನಿನ್ನವು ಎಂದು ಹೇಳಿ ಆ ಬಡ ಬ್ರಾಹ್ಮಣನು ತನ್ನ ಬಲವನ್ನೆಲ್ಲಾ ಬಿಟ್ಟು ಕೋಲನ್ನು ಎಸೆಯುವ ಹಾಗೆ ಮಾಡಿ ಆಕಳನ್ನು ಕೊಟ್ಟನೆಂಬುದು ಮಹರ್ಷಿಗಳಿಂದ ವಿದಿತವು. ತುಂಬಾ ಶೋಕ ಸಮಯದಲ್ಲಿ ಇಂತಹ ಪರಿಹಾಸವೃತ್ತಿಯು ಲೋಕವಿಡಂಬನವೆಂಬುದು ಇದರಿಂದ ಸುವ್ಯಕ್ತವು ಆದುದರಿಂದ ಅವತಾರ ಸಮಯಗಳಲ್ಲಿ ಶೋಕಾದಿಗಳಿಲ್ಲವು ಅದೂ ಅಲ್ಲದೆ ಆತನ ದಾರಿದ್ರ್ಯಕ್ಕೆ ಮರುಗಿ ಅನುಗ್ರಹಿಸಿದ್ದು ಕೃಪಾಪ್ರಭಾವವೆಂಬುದೂ ವ್ಯಕ್ತವು ಮತ್ತು ಶೋಕಮಧ್ಯದಲ್ಲಿ ಇಂತಹ ಪರಿಹಾಸಕರ ವ್ಯಾಪಾರದಿಂದ ಎಲ್ಲವೂ ಲೀಲೆ ಎಂಬುದೂ ನಿಸ್ಸಂಶಯವು ಇಲ್ಲಿ ಶ್ರೀ ದೇಶಿಕರವರು ಕೂನರ್ ಕುರುಳೆರ್ ಎಂದು ಪ್ರಯೋಗಿಸಿರುವುದು ಕರ್ಮಪರಿಪಾಕದಿಂದ ದೀನದೆಶೆಯನ್ನು ಹೊಂದಿರುವ ಮಾನುಷರಿಗೂ ಉಪಲಕ್ಷಣವೆಂದು ಭಾವಿಸಬಹುದು.

ಜಗದ್ರಕ್ಷಣಾದಿಗಳೆಲ್ಲಾ ಲೀಲಾರೂಪವಾಗಿ ಕೃಪಾಕಾರ್ಯಗಳೆಂಬುದಕ್ಕೂ, ಸ್ವಾತಂತ್ರ್ಯದಿಂದ ಕೂಡಿದ ಕೃಪೆಯು ರಕ್ಷಣೋಪಯುಕ್ತವಾಗಬೇಕಾದರೆ ವ್ಯಾಜವನ್ನಪೇಕ್ಷಿಸುತ್ತದೆ ಎಂಬುದಕ್ಕೂ ಪೂಜ್ಯರಾದ ಶ್ರೀ ಪರಾಶರಭಟ್ಟರ ಶ್ರೀ ರಂಗರಾಜಸ್ತವದ ಶ್ಲೋಕವನ್ನು ಉದಾಹರಿಸುತ್ತಾರೆ —ಶ್ರೀಮಾನ್-ಶ್ರಿಯಃಪತಿಯು, ಲಕ್ಷ್ಮಿಯಿಂದ ಸೇರಿದವನಾದುದರಿಂದಲೇ ಜಗದ್ವ್ಯಾಪಾರಗಳಲ್ಲಿರುವ ಲೀಲಾರಸವು ಭೋಗ್ಯತಮವೆಂಬ ಭಾವವು, ಚಿದಚಿತೌ - ಸಮಸ್ತ ಚೇತನಾಚೇತನಗಳನ್ನು, ಸ್ವಮುದ್ದಿಶ್ಯ - ತನ್ನನ್ನು ಕುರಿತೇ ಎಂದರೆ ತನ್ನ ಲೀಲಾರೂಪ ಪ್ರಯೋಜನಕ್ಕಾಗಿಯೇ, ಸತ್ತಾ ಸ್ಥಿತಿ ನಿಯಮನ ಮೊದಲಾದವುಗಳಿಂದ, ಉಪಾದತ್ತೇ - ಅಂಗೀಕರಿಸಿರುತ್ತಾನೆಂದು, ಎನ್ರದು - ಎಂದು ಶ್ರೀ ಪರಾಶರ ಭಟ್ಟರು ಹೇಳಿರುವುದು ಹೀಗೆ ಇವೆಲ್ಲವೂ ಶ್ರೀಮನ್ನಾರಾಯಣನಿಗೆ ಲೀಲೆಯು. (ಪ್ರಧಾನ ೨೭೩ನೆಯ

---

(೧) ಶ್ರೀರಂಗರಾಜಸ್ತವ ೨೯.

**ಇಪ್ಪಡಿ ಪರಹಿತ ವ್ಯಾಪಾರಾಶ್ರಯ ಮಾಗೈಯಾಲೇ ಆಶ್ರಿತರ್ಕ್ಕು ರಕ್ಷಕನುಮಾಯ್, ಉಪಾಯಾಂತರ ಸ್ಥಾನ ನಿವೇಶತ್ತಾಲೆ ಉಪಾಯ ಮಾಯಿರುಕ್ಕುಮ್. ರಕ್ಷಣವ್ಯಾಪಾರ ಫಲಾಶ್ರಯಮಾಗೈಯಾಲೇ ಶೇಷಿ**

---

ಪುಟ ನೋಡಿ. ಶ್ರೀಸ್ತುತಿ ೭ನೆಯ ಶ್ಲೋಕವನ್ನು ನೋಡಿ) ಮುಂದೆ "**ಇತಿವದತಿ ವಾಗೌಪನಿಷದೀ। ಉಪಾಯೋಪೇಯತ್ವೇತದಿಹ ತವತತ್ತ್ವಂ ನತುಗುಣಾ। ವತಸ್ತ್ವಾಂ ಶ್ರೀರಂಗೇಶಯ ಶರಣಮವ್ಯಾಜಮಭಜಂ ॥**" ಎಂದಿರುವುದರಿಂದ ಸ್ವಾತಂತ್ರ್ಯಯುಕ್ತ ಕೃಪೆಯು ಶರಣಾಗತಿರೂಪ ವ್ಯಾಜವನ್ನು ಅಪೇಕ್ಷಿಸುತ್ತದೆಂದು ಹೇಳಲ್ಪಟ್ಟಿರುತ್ತದೆ. ಈ ಶ್ಲೋಕಾರ್ಥಕ್ಕೆ ೨೭೩ನೆಯ ಪುಟವನ್ನು ನೋಡಿ

ಈ ಜಗತ್ತಿನ ಸೃಷ್ಟಿಸ್ಥಿತಿನಿಯಮನಾದಿಗಳಲ್ಲಿ ಶ್ರಿಯಃಪತಿಗೆ ಲೀಲೆಯಲ್ಲದೆ ಬೇರೆ ಪ್ರಯೋಜನವಿಲ್ಲವಾದುದರಿಂದಲೂ, ಇವುಗಳೆಲ್ಲಾ ಪರಹಿತಕ್ಕಾಗಿಯೇ ಆದುದರಿಂದ, ಕೃಪಾಕಾರ್ಯವೆಂಬುದು ಸಿದ್ಧವೆಂದು ಹೇಳಲ್ಪಟ್ಟಿತು **ಚಿದಚಿತಾ ಸ್ವಮುದ್ದಿಶ್ಯ ಉಪಾದತ್ತೇ** ಎಂದು ಸ್ವಾತಂತ್ರ್ಯವೂ ಲೀಲೆಯೂ ಹೇಳಲ್ಪಟ್ಟವು. ಉತ್ತರಾರ್ಧದಲ್ಲಿ ಹೇಳಿರುವ ಅವೋಘಾಭಿಪ್ರಾಯಗಳನ್ನು ಮುಂದಿನ ಎರಡು ವಾಕ್ಯಗಳಿಂದ ತಿಳಿಸುತ್ತಾರೆ. ಪರಹಿತವೇ ಆತನಿಗೆ ಮುಖ್ಯೋದ್ದೇಶವಾದುದರಿಂದ, ಉಪಾಯಭೂತನೂ ಅವನೇ, ಉಪೇಯನೂ (ಪ್ರಾಪ್ಯನು) ಅವನೇ ಎಂದು ತಿಳಿಸುತ್ತಾರೆ **ಇಪ್ಪಡಿ** - ಈ ಮೇಲಿನ ಶ್ಲೋಕದಲ್ಲಿ ಉಪಪಾದಿಸಿರುವ ಹಾಗೆ, **ಪರಹಿತ ವ್ಯಾಪಾರಾಶ್ರಯಮಾಗೈಯಾಲೇ** - ಈ ಸತ್ತಾ ಸ್ಥಿತಿ ನಿಯಮನಾದಿಗಳೆಲ್ಲಾ ಇತರರ ಹಿತರೂಪವಾದ ವ್ಯಾಪಾರಗಳನ್ನೇ ಆಶ್ರಯವಾಗವುಳ್ಳದ್ದರಿಂದ, **ಆಶ್ರಿತರ್ಕ್ಕು** - ಭರನ್ಯಾಸ ಮೂಲಕ ಆಶ್ರಯಿಸಿದವರಿಗೆ, **ರಕ್ಷಕನುಮಾಯ್** - ರಕ್ಷಿಸುವವನಾಗಿ, **ಉಪಾಯಾಂತರ ಸ್ಥಾನನಿವೇಶತ್ತಾಲೆ** - ಬೇರೆ ಉಪಾಯವಾದ ಭಕ್ತಿಮಾರ್ಗದ ಸ್ಥಾನದಲ್ಲಿ ತಾನೇ ನಿಲ್ಲುವುದರಿಂದ, **ಉಪಾಯಮಾಯಿರುಕ್ಕುಮ್** - ಆ ಶ್ರಿಯಃಪತಿಯೇ ಸಿದ್ಧೋಪಾಯನಾಗಿರುವನು. **ರಕ್ಷಣ ವ್ಯಾಪಾರ ಫಲಾಶ್ರಯಮಾಗೈಯಾಲೇ** - ಸರ್ವೇಶ್ವರನೇ ಈ ಚೇತನನ ರಕ್ಷಣ ವ್ಯಾಪಾರರೂಪ ಫಲಕ್ಕೆ ಆಶ್ರಯನಾದುದರಿಂದ, ಶೇಷಿಯೂ ಆಗಿರುವುದರಿಂದ, **ಅದಡಿಯಾಗ** - ಅದರ ಮೂಲಕವಾಗಿ, ಪ್ರಾಪ್ಯನೂ ಸಹ ಆಗಿರುವನು **ಸತ್ತಾ ಸ್ಥಿತಿ** ನಿಯಮನಾದಿಗಳು ಲೀಲಾರೂಪವಾಗಿ ಸ್ವಪ್ರಯೋಜನವುಳ್ಳವುಗಳು ಆದರೂ ಚೇತನನಿಗೂ ಪ್ರಯೋಜನವುಳ್ಳವುಗಳಾದುದರಿಂದ ಪರಹಿತ ವ್ಯಾಪಾರಾಶ್ರಯಗಳು. **ಸ್ವಮುದ್ದಿಶ್ಯ** ಎಂಬುದರಿಂದ ಸ್ವತಂತ್ರದಿಂದ ಕೂಡಿದ ಲೀಲಾ

**ಯುವಮಾಯ್, ಅದಡಿಯಾಗ ಪ್ರಾಪ್ಯನುವಮಾಯಿರುಕ್ಕುವನ್. ಇಪ್ಪಡಿ ಇರುಕ್ಕೈ, ಇವನುಕ್ಕು ಸ್ವರೂಪಪ್ರಯುಕ್ತ ಮೆನ್ರು ಧರ್ಮಿಗ್ರಾಹಿಕ ಪ್ರಮಾಣ ಸಿದ್ಧಮ್.**

---

ಪ್ರಯೋಜನವೂ, ಸತ್ತಾ ಸ್ಥಿತಿ ನಿಯಮನಾದ್ಯೈಃ ಚಿದಚಿತಾಂ ಎಂದು ಹೇಳಿರುವುದರಿಂದ ಕೃಪಾಕಾರ್ಯವಾದ ಪರಹಿತ ವ್ಯಾಪಾರವೆಂದೂ ಹೇಳಿದಂತಾಯಿತ. ಯಾವಾಗ ಪರಹಿತ ವ್ಯಾಪಾರಕ್ಕೆ ಆಶ್ರಯನೆಂದು ಹೇಳಲ್ಪಟ್ಟಿತೋ ಆಗ ಆಶ್ರಿತರಿಗೆ ರಕ್ಷಕನೆಂದೂ ಹೇಳಿದಂತಾಗಿ ಸಿದ್ಧೋಪಾಯನೆಂದು ಹೇಳಲ್ಪಟ್ಟಿತು. ಇದು ಶ್ಲೋಕದಲ್ಲಿ ತದಿಹ ಎಂಬ ಪದಗಳಿಂದ ವಿವರಿಸಲ್ಪಟ್ಟಿತು. ರಕ್ಷಣ ವ್ಯಾಪಾರ ಫಲಾಶ್ರಯನೂ ಆದುದರಿಂದ ಆತನಿಗೆ ಉಪೇಯತ್ವವೂ ಕೂಡುತ್ತದೆಂದು ಹೇಳಲ್ಪಟ್ಟಿತು. ಹೀಗೆ ಉಪಾಯಭಾವ ಉಪೇಯಭಾವವೆರಡೂ ಇವನಿಗೆ ಸ್ವರೂಪವೆಂದು ಶ್ಲೋಕದಲ್ಲಿ ಉಪಾಯೋಪೇಯತ್ವೇ ತವ ತತ್ತ್ವಂ ಎಂಬುವರಿಂದ ವಿವರಿಸಲ್ಪಟ್ಟಿತು. "ಶರಣಮವ್ಯಾಜಮಭಜಂ" ಎಂದು ಹೇಳಿರುವುದರಿಂದ, ವ್ಯಾಜಾಂತರ, ಉಪಾಯಾಂತರ ಬೇಕಿಲ್ಲವೆಂದೂ, ಅದರ ಸ್ಥಾನದಲ್ಲಿ ತಾನೇ ನಿಲ್ಲುವುದರಿಂದ ಸಿದ್ಧೋಪಾಯನೆಂಬಭಿಪ್ರಾಯವೆಂದೂ, ತೋರಿಬರುತ್ತದೆ ಹೀಗೆ ಸಿದ್ಧೋಪಾಯನಾಗಲು ಶರಣಮಭಜಂ ಎಂದಿರುವುದರಿಂದ ಶರಣಾಗತಿರೂಪ ವ್ಯಾಜಸಾಪೇಕ್ಷೆಯುಂಟೆಂಬುದು ಸಿದ್ಧವು. ಮುಂದೆ ಅದೇ ಶ್ಲೋಕದಲ್ಲಿರುವ "ತವ ತತ್ತ್ವಮ್ ನತು ಗುಣಾ" ಎಂಬುದರರ್ಥವನ್ನುಪದೇಶಿಸುತ್ತಾರೆ. ಹಿಂದೆ ಆಶ್ರಿತರಿಗೆ ರಕ್ಷಕನಾಗಿ ಉಪಾಯಭೂತನು, ಮತ್ತು ಆ ರಕ್ಷಣೆಗೆ ಆಶ್ರಯನಾಗಿ ಉಪೇಯಭೂತನು ಎಂದರೆ ಪ್ರಾಪ್ಯನು ಎಂದು ಹೇಳಲ್ಪಟ್ಟಿತು ಈತನು ಸ್ವರೂಪತಃ ಉಪಾಯೋಪೇಯನೇ, ಇಲ್ಲವೇ ಗುಣಾತಃ, ಎಂಬ ವಿಷಯದಲ್ಲಿ, ಸ್ವರೂಪಪ್ರಯುಕ್ತವಾಗಿಯೇ ಎಂದು ಹೇಳುತ್ತಾರೆ. ಈ ಉಪಾಯೋಪೇಯತ್ವಗಳು ಔಪಾಧಿಕವಾಗಿ ಆಗಂತುಕವಾಗಿ ಬಂದವುಗಳಲ್ಲವು ಎಂದು ತಿಳಿಸುತ್ತಾರೆ —

**ಇಪ್ಪಡಿ ಇರುಕ್ಕೈ** - ಹೀಗೆ ಆಶ್ರಿತರಕ್ಷಕನಾಗಿರುವುದರಿಂದ ಉಪಾಯವಾಗಿಯೂ, ಆ ರಕ್ಷಣ ಫಲಕ್ಕೆ ಆಶ್ರಯನಾಗಿರುವುದರಿಂದ ಉಪೇಯನಾಗಿಯೂ, ಇರೋಣವು, **ಇವನುಕ್ಕು** - ಈ ಲಕ್ಷ್ಮೀಯುಕ್ತನಾದ ನಾರಾಯಣನಿಗೆ, **ಸ್ವರೂಪಪ್ರಯುಕ್ತಮೆನ್ರು**-ಸ್ವರೂಪತಃ ಉಂಟಾದುದೆಂಬು, **ಧರ್ಮಿಗ್ರಾಹಕ ಪ್ರಮಾಣ ಸಿದ್ಧಮ್** - ಧರ್ಮಿಯು ಪರಮಾತ್ಮನು, ಆತನನ್ನು ಬೋಧಿಸುವ ಪ್ರಮಾಣವು ಯಾವುದೆಂದರೆ ಶ್ರುತಿಯಲ್ಲಿ ಸ್ವರೂಪಶೋಧಕ ವಾಕ್ಯವು, ಅದರಿಂದ ಸಿದ್ಧವು.

## ಭಗವತಃ ಕಾರುಣ್ಯಸ್ಯ ಮಾಹಾತ್ಮ್ಯಮ್

**ಇಪ್ಪಡಿ ರಕ್ಷಕನಾನ ಈಶ್ವರನುಕ್ಕು ಪ್ರಧಾನಮಾನ ಜ್ಞಾನಶಕ್ತಿ ಕರುಣೈಗಳಿಲ್, ಜ್ಞಾನ ಶಕ್ತಿಗಳ್ ನಿಗ್ರಹಾನುಗ್ರಹ ಸಾಧಾರಣಙ್ಗಳ್ ; ಕಾರು**

---

ಆ ವಾಕ್ಯವು ಯಾವುದೆಂದರೆ "ಸರ್ವಸ್ಯ ಶರಣಂ ಸುಹೃತ್" ಎಂಬ ಶ್ವೇತಾಶ್ವತರೋಪನಿಷದ್ವಾಕ್ಯವು. ಈ ಸ್ವರೂಪಶೋಧಕ ವಾಕ್ಯದಲ್ಲಿ ಶರಣಂ ಎಂಬುದರಿಂದ ಉಪಾಯವೂ, ಸುಹೃತ್ ಎಂಬುದರಿಂದ ಉಪೇಯವೂ ಹೇಳಲ್ಪಟ್ಟವು. ಹಾಗೆಯೇ (೧) "ಕೋಹ್ಯೇವಾನ್ಯಾತ್ಕಃ ಪ್ರಾಣ್ಯಾತ್, ಯದೇಷ ಆಕಾಶ ಆನಂದೋ ನಸ್ಯಾತ್, ಏಷಹ್ಯೇವಾನನ್ದಯಾತಿ" ಈ ಆಕಾಶ ಶಬ್ದವಾಚ್ಯನಾದ ಪರಮಾತ್ಮನು, ಆನಂದಮಯನಾಗದಿದ್ದರೆ, ಯಾರು ತಾನೇ ಇಹದಲ್ಲಿ ಸುಖವಾಗಿ ಜೀವಿಸಲಾದೀತು? ಯಾರು ತಾನೇ ಆಮುಷ್ಮಿಕ ಸುಖವನ್ನು ಹೊಂದಲಾದೀತು? ಆತನು ತಾನೇ ಸರ್ವವಿಧ ಸುಖವನ್ನುಂಟುಮಾಡುವನು ಉಪಾಯೋಪೇಯನು ಸರ್ವೇಶ್ವರನೇ ಎಂದು ಈ ಪ್ರಮಾಣವೂ ಹೇಳುತ್ತದೆ. ಮತ್ತು (೨) **ಅಮೃತಸ್ಯೈಷ ಸೇತುಃ** - ಈ ಸಂಸಾರ ಸಮುದ್ರದ ಆಚೆ ದಡದಲ್ಲಿರುವ ನಿತ್ಯವಿಭೂತಿಯನ್ನು ಸೇರಲು ಈತನೇ ಸೇತುವೆಯು ಎಂದು ಹೇಳಿರುವುದು ಆತನೇ ಉಪಾಯವೆಂದು ಹೇಳಲ್ಪಟ್ಟಿತು. (೩) "**ಪರಾತ್ಪರಂ ಪುರುಷಮುಪೈತಿ ದಿವ್ಯಮ್**" ಪರನೆಂದರೆ, ಅಕ್ಷರವೆಂದು ಹೇಳಿಸಿಕೊಳ್ಳುವ ಅವ್ಯಾಕೃತ ಪ್ರಕೃತಿಗಿಂತಲೂ ಶ್ರೇಷ್ಠನಾದ ಜೀವಾತ್ಮನು, ಆದುದರಿಂದ, **ಪರಾತ್ಪರಂ** - ಜೀವನಿಗಿಂತ ಶ್ರೇಷ್ಠನಾದ, ಹಾಗೆ, **ದಿವ್ಯಂ** - ಸರ್ವೋತ್ಕೃಷ್ಟನಾದ, **ಪುರುಷಂ** - ಪರಮಪುರುಷನನ್ನು, **ಉಪೈತಿ** - ಹೊಂದುವನು, ಎಂಬದರಿಂದ ಉಪೇಯತ್ವವು ಹೇಳಲ್ಪಟ್ಟಿತು. (೪) "**ನಾರಾಯಣ ಸಾಯುಜ್ಯಮವಾಪ್ನೋತಿ**" - ನಾರಾಯಣ ಸಾಯುಜ್ಯವನ್ನು ಹೊಂದುವನು. ಇದರಿಂದಲೂ ಪ್ರಾಪ್ಯತ್ವವು ಹೇಳಲ್ಪಟ್ಟಿತು. ಇಂತಹ ಧರ್ಮಿಗ್ರಾಹಕ ಪ್ರಮಾಣಗಳಿಂದ ಸಿದ್ಧವೆಂಬ ತಾತ್ಪರ್ಯವು.

**ಇಪ್ಪಡಿ** - ಮೇಲೆ ಉಪಪಾದಿಸಿದ ರೀತಿಯಲ್ಲಿ, ರಕ್ಷಕನಾನ, **ಈಶ್ವರನುಕ್ಕು** - ಸರ್ವೇಶ್ವರನಿಗೆ, **ಪ್ರಧಾನಮಾನ** - ಮುಖ್ಯ ಗುಣಗಳಾದ, **ಜ್ಞಾನಶಕ್ತಿ ಕರುಣೈಗಳಿಲ್** - ಸರ್ವಜ್ಞತ್ವ, ಸರ್ವಶಕ್ತಿತ್ವ ಕಾರುಣ್ಯಗಳಲ್ಲಿ, ಜ್ಞಾನಶಕ್ತಿಗಳ

---

(೧) ತೈ ಆನಂದ. (೨) ಮುಂ ೨ ೨ ೫ (೩) ಮುಂ. ೩ ೨. ೮. (೪) ನಾರಾಯಣಾನುವಾಕವು.

---

ಣ್ಯಮ್ ಅನುಗ್ರಹತ್ತುಕ್ಕು ಅಸಾಧಾರಣಮ್. ಇಙ್ಗು ಕಾರುಣ್ಯ ಮಾವ
ತು ? ಪರಹಿತ ಪ್ರವಣತ್ವೈ.

---

ರಡೂ ಚೇತನನ ನಿಗ್ರಹಕ್ಕೂ ಅನುಗ್ರಹಕ್ಕೂ, ಸಾಧಾರಣಙ್ಗಳ್ - ಉಪಯುಕ್ತವಾದ ಸಾಧಾರಣ ಗುಣಗಳು, ಕಾರುಣ್ಯವು, ಅನುಗ್ರಹತ್ತುಕ್ಕು ಅಸಾಧಾರಣಮ್ - ಅನುಗ್ರಹಕ್ಕೆ ಮಾತ್ರವೇ ಅಸಾಧಾರಣವು. ಇಂತಹ ಮಾಹಾತ್ಮ್ಯವು ಕಾರುಣ್ಯಕ್ಕಿರುವುದರಿಂದಲೇ ಸರ್ವೇಶ್ವರನ ಇತರ ಗುಣಗಳೂ ಕೂಡ ಕಲ್ಯಾಣಗುಣಗಳೆಂದು ಹೇಳಿಸಿಕೊಂಡಿವೆ ಎಂದು ದಯಾಶತಕದಲ್ಲಿ ಕೊಂಡಾಡಿರುತ್ತಾರೆ — "ವೃಷಗಿರಿ ಗೃಹಮೇಧಿಗುಣಾ ಬೋಧಬಲೈಶ್ವರ್ಯ ವೀರ್ಯಶಕ್ತಿಮುಖಾಃ । ದೋಷಾಭವೇಯುರೇತೇ ಯದಿನಾಮ ದಯೇ ತ್ವಯಾವಿನಾಭೂತಾಃ ॥" ಶ್ರೀನಿವಾಸನ ಜ್ಞಾನ ಬಲೈಶ್ವರ್ಯ ವೀರ್ಯ ಶಕ್ತಿ ತೇಜಸ್ಸುಗಳೆಂಬ ಷಡ್ಗುಣಗಳೂ ದಯೆಯೊಂದಿಗೆ ಸೇರದೇ ಇದ್ದ ಪಕ್ಷದಲ್ಲಿ ದೋಷಯುಕ್ತವಾದವುಗಳಾಗುತ್ತಿದ್ದವು ಈಗ ದಯೆಯೊಂದಿಗೆ ಸೇರಿರುವುದರಿಂದ ಕಲ್ಯಾಣಗುಣಗಳೆನ್ನಿಸಿಕೊಂಡಿವೆ ಎಂಬ ಭಾವವು ಮುಂದೆ ಕಾರುಣ್ಯವೆಂದರೇನು ಎಂಬುದನ್ನು ತಿಳಿಸುತ್ತಾರೆ. ಇಙ್ಗು - ಇಲ್ಲಿ, ಎಂದರೆ ಅನುಗ್ರಹ ಉಂಟಾಗುವ ಸಂದರ್ಭದಲ್ಲಿ, ಅಥವಾ ಅನುಗ್ರಹಕ್ಕೆ ಬೇಕಾದ ಮೂರು ಗುಣಗಳಲ್ಲಿ, ಕಾರುಣ್ಯಮಾವದು - ಕಾರುಣ್ಯವೆಂದರೇನು ? ಪರಹಿತ ಪ್ರವಣತ್ವೈ - ಇತರರಿಗೆ ಎಂದರೆ ಈ ಸಂದರ್ಭದಲ್ಲಿ ಚೇತನರಿಗೆ ಪ್ರತ್ಯುಪಕಾರಾಪೇಕ್ಷೆಯಿಲ್ಲದೆ, ಹಿತವನ್ನು ಮಾಡಬೇಕೆಂಬುದನ್ನೇ ಸ್ವಭಾವವಾಗಿರುವುದು "ವ್ಯಸನೇಷು ಮನುಷ್ಯಾಣಾಂ ಭೃಶಂ ಭವತಿ ದುಃಖಿತಃ" ಎಂಬ ಶ್ಲೋಕದಲ್ಲಿ ತೋರುವ, ಪರದುಃಖ ದುಃಖಿತ್ವಂ - ಇತರರು ದುಃಖಪಟ್ಟರೆ ತಾನೂ ದುಃಖಪಡುವ ಸ್ವಭಾವಮಾತ್ರವೇ ಅಲ್ಲವು ಪರದುಃಖದಿಂದ ದುಃಖವುಂಟಾಗವುದರಿಂದ, ಆ ದುಃಖವನ್ನು ಹೋಗಲಾಡಿಸಿ ಹಿತವನ್ನು ಮಾಡಬೇಕೆಂಬಭಿಲಾಷೆಯುಂಟಾಗಿ ಹಿತವನ್ನು ಮಾಡುತ್ತಾನೆಂಬ ಭಾವವು ಇದೀಗ ಕಾರುಣ್ಯದ ಪ್ರಭಾವವು ಇದಕ್ಕೆ ವ್ಯಾಜಸಾಪೇಕ್ಷೆಯನ್ನು ಎದುರುನೋಡುವನು. ವ್ಯಾಜಸಾಪೇಕ್ಷೆಯಿಲ್ಲದೆಯೂ ಎಲ್ಲಾ ಚೇತನರಿಗೂ ಹಿತವನ್ನು ಮಾಡಬೇಕೆಂಬಭಿಲಾಷೆಯುಂಟಾಗಿ ಅದನ್ನು ಮಾಡಿರುವುದೂ ಉಂಟು. ಇವುಗಳನ್ನೆಲ್ಲಾ ಶ್ರೀ ದೇಶಿಕರವರು ದಯಾಶತಕದಲ್ಲಿ ಉಪಪಾದಿಸಿರುತ್ತಾರೆ - "ಅಚಿದವಿಶಿಷ್ಟಾನ್ಪ್ರಳಯೇ ಜಂತೂನವಲೋಕ್ಯ ಜಾತನಿರ್ವೇದಾ । ಕರಣ ಕಳೇಬರ ಯೋಗಂ ವಿತರಸಿ ವೃಷಶೈಲನಾಥ ಕರುಣೇತ್ವಂ ॥" ಹೀಗೆ ಚೇತನರ ಅಚಿತ್ಸಂಸರ್ಗದಿಂದ ಪ್ರಾಪ್ತ

## ಕಾರುಣ್ಯಸ್ಯ ಕಾರ್ಯವಿಶೇಷ ಪರಂಪರಾಃ

### ಇಹ ತ್ರಿವಿಧ ಚೇತನರ್‌ಗಳುಡೈಯ ಸತ್ತಾಸ್ಥಿತಿಗಳುಕ್ಕುವರ್, ಅನು

ವಾದ ದುಃಸ್ಥಿತಿಯಿಂದ ಖೇದಗೊಂಡವನಾಗಿ, ಕರಣಕಳೇಬರ ಯೋಗವನ್ನುಂಟು ಮಾಡಿದನೆಂದು ಹೇಳಲ್ಪಟ್ಟಿರುವನು. ಹಾಗೆಯೇ ಶಾಸ್ತ್ರಪ್ರದೀಪವನ್ನು ದಯಪಾಲಿಸಿ, ಶಾಸ್ತ್ರಾರ್ಥವನ್ನು ಬೋಧಿಸುವವರನ್ನೂ ಕಲ್ಪಿಸಿಕೊಟ್ಟು, ಉಪಾಯಾನುಷ್ಠಾನಗಳಿಗೆ ಸೌಕರ್ಯವನ್ನುಂಟುಮಾಡಿತನ್ನನ್ನು ಭಜಿಸಲಿ ಎಂದು ಅವತಾರಗಳನ್ನೆತ್ತಿ, ಅವತಾರ ಕಾಲಗಳಲ್ಲಿದ್ದವರಿಗೆ ಮಾತ್ರವೇ ಅಲ್ಲದೆ ಸದಾ ಎಲ್ಲರಿಗೂ ಅನುಕೂಲವಾಗಲೆಂದು ಅರ್ಚಾವತಾರಿಯಾಗಿ ಅಲ್ಲಲ್ಲೇ ಬಿಜಮಾಡಿ, ಭಕ್ತಿಯಿಂದ ಉಪಾಸಿಸಲಿ ಎಂದು ಈ ಚೇತನನ ದೇಹದಲ್ಲೇ ಹಾರ್ದಾವತಾರಿಯಾಗಿದ್ದುಕೊಂಡು ಹೀಗೆ ನಾನಾವಿಧ ಪರಹಿತ ಪ್ರವಣತೆಯಲ್ಲಿ ಸ್ಥಿರಸಂಕಲ್ಪನಾಗಿರುತ್ತಾನೆ. ಮುಂದೆ ಈ ಕಾರುಣ್ಯದ ಮಹಿಮೆಯಿಂದ ಚೇತನರಿಗುಂಟಾಗುವ ಸರ್ವವಿಧ ಪ್ರಯೋಜನಗಳನ್ನೂ ತಿಳಿಸುತ್ತಾರೆ ಕಾರುಣ್ಯವು ನಿರುಪಾಧಿಕನಾಗಿ ಪರಹಿತೇಚ್ಛೆಯು ಸರ್ವೇಶ್ವರನು ಹೀಗೆ ಕರುಣೆಯನ್ನು ತೋರಿಸುವದರಿಂದ, ಚೇತನನಿಂದ ಯಾವ ಪ್ರತ್ಯುಪಕಾರವನ್ನೂ ಅಪೇಕ್ಷಿಸದೇನೆ ಹಿತವನ್ನುಂಟುಮಾಡುವನು. ಹೀಗೆ ಹಿತವನ್ನು ಮಾಡುವುದರಲ್ಲಿ ಸಾರ್ವತ್ರಿಕವಾಗಿ ಎಲ್ಲರನ್ನೂ ಉದ್ದೇಶಿಸಿ ಮಾಡುವುದರಲ್ಲಿ ಯಾವ ವ್ಯಾಜಸಾಪೇಕ್ಷೆಯೂ ಇಲ್ಲದೆ ಮಾಡುವನು ಆದರೆ ಒಬ್ಬ ಚೇತನನಿಗೆ ಮಾತ್ರವೇ ಹಿತವನ್ನು ಮಾಡುವ ಸಂದರ್ಭದಲ್ಲಿ ವ್ಯಾಜಸಾಪೇಕ್ಷೆಯುಂಟು. ಲೋಕದಲ್ಲೂ ಕೂಡ ಹೀಗೆಯೇ ಕಂಡಿರುವೆವು. ರಾಜನು ಕೂಡ ತನ್ನ ನಿರುಪಾಧಿಕ ಕೃಪೆಯಿಂದ ಪ್ರಜೆಗಳೆಲ್ಲರಿಗೂ ಅನುಕೂಲವಾಗಲೆಂದು ಆವಶ್ಯಕವಿರುವ ಸ್ಥಳಗಳಲ್ಲಿ ಪಾಠಶಾಲೆಗಳನ್ನೂ, ಆಸ್ಪತ್ರೆಗಳನ್ನೂ, ರಸ್ತೆ ಸೇತುವೆಗಳನ್ನೂ, ಕೆರೆ ಕಟ್ಟೆಗಳು ಮುಂತಾದುವುಗಳನ್ನೂ ಏರ್ಪಡಿಸುವನು ಆ ಪ್ರಜೆಗಳಲ್ಲೊಬ್ಬನಿಗೆ ಏನಾದರೂ ಹಿತವನ್ನು ಪ್ರತ್ಯೇಕವಾಗಿ ಮಾಡಬೇಕಾದರೆ, ಆತನ ವಿದ್ಯಾ, ಇತರ ಕುಶಲತೆಗಳಿಗನುಸಾರವಾಗಿ ಸನ್ಮಾನಿಸುವನು. ಸರ್ವೇಶ್ವರನೂ ಕೂಡ ಹಾಗೆಯೇ ಎಂಬಭಿಪ್ರಾಯವು ಮಹರ್ಷಿಯು ಕೂಡ ಮೊದಲು ಒಂದು ವಿಧವಾದ ಕೃಪೆಯ ಮೂಲಕ ಮಾಡುವ ರಕ್ಷಣೆಯು ಸಾರ್ವತ್ರಿಕವಾದುದರಿಂದ "ರಕ್ಷಿತಾ ಜೀವಲೋಕಸ್ಯ ಎಂದು ಶ್ರೀರಾಮನನ್ನು ಕೊಂಡಾಡಿ, ಉಪಾಯಾನುಷ್ಠಾನವನ್ನು ಮಾಡಿ ಸ್ವಜನನಾದ ಪ್ರಪನ್ನನಿಗೆ ಎರಡನೆಯ ವಿಧವಾದ ಕೃಪೆಯ ಮೂಲಕ ಮಾಡುವ

**ಕೂಲ ಪ್ರವೃತ್ತಿಗಳುಕ್ಕುಮ್, ನಿತ್ಯರುಡೈಯ ನಿತ್ಯಾನುಭವತ್ತುಕ್ಕುಮ್ ಮುಕ್ತರುಡೈಯ ಅನಾವೃತ್ತಿತ್ವಕ್ಕುಮ್, ಲೀಲಾವಿಭೂತಿಯಿಲ್ ಸಾಮಾನ್ಯ ಸೃಷ್ಟ್ಯಾದಿಗಳುಕ್ಕುಮ್, ಸ್ವಾವತಾರ ರೂಪೈಯಾನ ಶುದ್ಧಸೃಷ್ಟಿಕ್ಕುಮ್, ಶಾಸ್ತ್ರಪ್ರವರ್ತನತ್ತುಕ್ಕುಮ್, ಅದಡಿಯಾಗ ತತ್ವಹಿತ**

---

ಸಂರಕ್ಷಣೆಯು ವ್ಯಾಜರೂಪವಾದುದಾಗಿ ಸ್ವಜನಸ್ಯ ಚ ರಕ್ಷಿತಾ ಎಂದು ಕೊಂಡಾಡಿರುತ್ತಾರೆ

### ಕಾರುಣ್ಯದಿಂದುಂಟಾಗುವ ಪ್ರಯೋಜನ ಪರಂಪರೆಗಳು

ಇದು - ಈ ಕಾರುಣ್ಯವು ಇದಕ್ಕೆ ಕ್ರಿಯಾಪದವು ತುಂಬಾ ದೂರದಲ್ಲಿ "ಸಾಮಾನ್ಯ ನಿದಾನಮಾಯಿರುಕ್ಕುಮ್" ಎಂದಿರುತ್ತದೆ. (೧) ತ್ರಿವಿಧ ಚೇತನರುಗಳುಡೈಯ ಸತ್ತಾಸ್ಥಿತಿಗಳುಕ್ಕುಮ್ - ನಿತ್ಯಮುಕ್ತ ಬದ್ಧರಾದ ಮೂರು ವಿಧವಾದ ಚೇತನರ ಸ್ವರೂಪ ಲಾಭ ಸ್ಥಿತಿಗಳಿಗೂ ಅನುಕೂಲಪ್ರವೃತ್ತಿಗಳುಕ್ಕುಮ್ - ಶಾಸ್ತ್ರವಿಧಿಗಳಿಗೆ ವಿರೋಧವಲ್ಲದೇ ಇರುವ ವ್ಯಾಪಾರಗಳಿಗೂ (೨) ನಿತ್ಯರುಡೈಯ ನಿತ್ಯಾನುಭವತ್ತುಕ್ಕುಮ್ - ನಿತ್ಯಸೂರಿಗಳು ಸದಾ ಪಶ್ಯಂತಿ ಸೂರಯಃ" ಎಂದು ಹೇಳಿರುವ ಹಾಗೆ, ಯಾವಾಗಲೂ ಪರಮಾತ್ಮನನ್ನು ಅನುಭವಿಸುವದಕ್ಕೂ (೩) ಮುಕ್ತರುಡೈಯ ಅನಾವೃತ್ತಿಕ್ಕುಮ್ - ಮೋಕ್ಷವಾದ ನಂತರ ಮುಕ್ತರಿಗೆ ಪುನಃ ಲೀಲಾವಿಭೂತಿಯಲ್ಲಿ ಸಂಬಂಧವಿಲ್ಲದ ಹಾಗೆ ಮಾಡೋಣವೂ, (೪) ಲೀಲಾವಿಭೂತಿಯಿಲ್ ಸಾಮಾನ್ಯ ಸೃಷ್ಟ್ಯಾದಿಗಳುಕ್ಕುಮ್ ಲೀಲಾವಿಭೂತಿಯಲ್ಲಿ ಪ್ರಕೃತಿಯ ವಿಕೃತಿ ರೂಪವಾದ ಸಮಷ್ಟಿ ಸೃಷ್ಟಿಗಳಿಗೂ, ಇಲ್ಲಿ ಆದಿ ಪದದಿಂದ ತ್ರಿವೃತ್ಕರಣಸ್ಥಿತಿಲಯಾದಿಗಳು ಹೇಳಲ್ಪಟ್ಟವು; ವಿಶೇಷ ಸೃಷ್ಟಿಯಾದ ವ್ಯಷ್ಟಿಸೃಷ್ಟ್ಯಾದಿಗಳು ಏತಕ್ಕೆ ಹೇಳಲ್ಪಡಲಿಲ್ಲವೆಂದರೆ ಅವುಗಳನ್ನು ಸರ್ವೇಶ್ವರನ ಸಂಕಲ್ಪಾನುಸಾರವಾಗಿ ನಡೆಸಲು ಚತುರ್ಮುಖಾದಿಗಳು ನಿಯಮಿಸಲ್ಪಟ್ಟಿರುವದರಿಂದ ಅದು ಇಲ್ಲಿ ಹೇಳಲ್ಪಡಲಿಲ್ಲವು. ಚತುರ್ಮುಖನ ಮೂಲಕವಾಗುವ ಸೃಷ್ಟಿಯು ಸಾಮಾನ್ಯವಾದುದಲ್ಲವು, ಅದು ಚೇತನರ ಕರ್ಮವನ್ನನುಸರಿಸಿ ಮಾಡುವ ಸೃಷ್ಟಿಯಾದುದರಿಂದ ವೈಷಮ್ಯ ಸೃಷ್ಟಿಯು, ದೇವತಿರ್ಯಙ್ಮನುಷ್ಯ ಸ್ಥಾವರಾದಿ ರೂಪವಾದುದು. (೫) ಸ್ವಾವತಾರರೂಪೈಯಾನ ಶುದ್ಧಸೃಷ್ಟಿಕ್ಕುಮ್ - ತನ್ನ ಅವತಾರ ರೂಪವಾದ ದಿವ್ಯಮಂಗಳ ವಿಗ್ರಹವನ್ನು ಹೊಂದುವುದಕ್ಕೂ, (೬) ಶಾಸ್ತ್ರಪ್ರವರ್ತನತ್ತುಕ್ಕುಮ್ - ಶಾಸ್ತ್ರ

ವಿಷಯಮಾನ ಜ್ಞಾನತ್ತೈ ಪಿರಪ್ಪಿಕ್ಕೈಕ್ಕುಮ್, ಮೋಕ್ಷಶ್ರದ್ಧೈಯೈಯುಂ ಡಾಕ್ಕೈಕ್ಕುಮ್, ಇದು ಕೊಡುಕ್ಕೈಕ್ಕು ವ್ಯಾಜಮಾನ ಸುಕೃತ ವಿಶೇಷ ತ್ತುಕ್ಕುಮ್, ಅಧಿಕಾರಾನುರೂಪಙ್ಗಳಾನ ನಿಗ್ರಹ ಶಮನೋಪಾಯಙ್ಗಳೈ ಕ್ಕೊಡುಕ್ಕೈಕ್ಕುಮ್, ಇವತ್ತಿಲ್ ಕರಣ ಪ್ರೇರಣ ದಶೈಯಿಲ್ ಸಹಕಾರಿ ಯಾಯ್ ನಿರ್ಕ್ಕೈಕ್ಕುಮ್, ಉಪಾಸಕನಕ್ಕು ಅನ್ತರಾಯಮ್ ವನ್ದಾಲ್ ಪ್ರತಿಸಮಾಧಾನಮ್ ಪಣ್ಣುವಿಕ್ಕೈಕ್ಕುಮ್, ಅಕಿಂಚನರುಕ್ಕು ಉಪಾ

---

ಗಳು ತಮ್ಮತಮ್ಮ ಶಿಷ್ಯರುಗಳು ಪರಂಪರಾಕ್ರಮದಿಂದ ಉಚ್ಚಾರಣಾನೂಚ್ಚಾರಣ ರೂಪವಲ್ಲಿ ಈಗಿನ ಗುರುಗಳವರೆಗೂ ಬರುವಹಾಗೆ ಮಾಡೋಣವೂ, (೭) **ಅದದಿ ಯಾಗ ತತ್ವಹಿತ ವಿಷಯಮಾನ ಜ್ಞಾನತ್ತೈ ಪಿರಪ್ಪಿಕ್ಕೈಕ್ಕುಮ್** – ಆ ಶಾಸ್ತ್ರಪ್ರವರ್ತನ ಮೂಲಕವಾಗಿ, ತತ್ವವು ಶ್ರೀಮನ್ನಾರಾಯಣನೇ ಎಂಬ, ಹಿತವು ಭಕ್ತಿಪ್ರಪತ್ತಿರೂಪ ಉಪಾಯಾನುಷ್ಠಾನವೆಂಬ, ಜ್ಞಾನ ಉಂಟುಮಾಡ ವುದಕ್ಕೂ, ಪುರುಷಾರ್ಥವು ಇಲ್ಲಿ ಏಕೆ ಹೇಳಲ್ಪಡಲಿಲ್ಲವೆಂದರೆ, ಯಾವಾಗ ಉಪಾಯಾನು ಷ್ಠಾನವಾಯಿತೋ ಆಗ ಪುರುಷಾರ್ಥವು ಸ್ವತಸ್ಸಿದ್ಧವೆಂಬ ಭಾವದಿಂದರಿಯ ತಕ್ಕದ್ದು, (೮) **ಮೋಕ್ಷಶ್ರದ್ಧೈಯೈ ಯುಂಡಾಕ್ಕೈಕ್ಕುಮ್**-ಸುಕೃತವನಾ ಚರಿಸಿದ ಚೇತನನಿಗೆ ಮೋಕ್ಷದಲ್ಲಿ ಅಭಿರುಚಿಯುಂಟಾಗುವ ಹಾಗೆ ಮಾಡುವು ದಕ್ಕೂ, (೯) **ಇದು ಕೊಡುಕ್ಕೈಕ್ಕು** – ಈ ಮೋಕ್ಷವನ್ನು ಕೊಡುವುದಕ್ಕೂ, **ವ್ಯಾಜಮಾನ** – ನೆಪರೂಪದಲ್ಲಿ ಸಹಕಾರಿ ಕಾರಣವಾದ, **ಸುಕೃತ ವಿಶೇಷತ್ತು ಕ್ಕುಮ್** - ಸುಕೃತವಿಶೇಷವನ್ನು ಂಟುಮಾಡುವುದಕ್ಕೂ (೧೦) **ಅಧಿಕಾರಾನುರೂ ಪಙ್ಗಳಾನ** – ಆಯಾ ಅಧಿಕಾರಿಗಳಿಗೆ, **ಅನುರೂಪಙ್ಗಳಾನ** – ಯೋಗ್ಯಗಳಾದ, **ನಿಗ್ರಹ ಶಮನೋಪಾಯಙ್ಗಳೈ ಕ್ಕೊಡುಕ್ಕೈಕ್ಕುಮ್** - ಭಗವನ್ನಿಗ್ರಹ ಸಂಕಲ್ಪವನ್ನು ಶಮನಮಾಡುವ ಉಪಾಯಗಳಾದ ಗುರು ಲಘು ಲಘುತರ ಲಘು ತಮರೂಪ ಭಕ್ತಿ ಸ್ವತಂತ್ರಪ್ರಪತ್ತಿ ಉಕ್ತಿನಿಷ್ಠೆ ಆಚಾರ್ಯನಿಷ್ಠೆಗಳನ್ನು ಕೊಡುವು ದಕ್ಕೂ, (೧೧) **ಇವತ್ತಿನ್** – ಈ ಮೇಲೆ ಹೇಳಿದ ಉಪಾಯಗಳಲ್ಲಿ, **ಕರಣ ಪ್ರೇರಣ ದಶಾಯಾಂ** – ಮನಸ್ಸನ್ನು ಪ್ರೇರಿಸುವ ಅವಸ್ಥೆಯಲ್ಲಿ, **ಸಹಕಾರಿ ಯಾಗಿ ನಿರ್ಕ್ಕೈಕ್ಕುಮ್**-ಸಹಕಾರಿಯಾಗಿರುವುದಕ್ಕೂ, (೧೨) **ಉಪಾಸಕನಕ್ಕು ಅನ್ತರಾಯಮ್ ವನ್ದಾಲ್** - ಉಪಾಸನವು ಅಸಕೃದಾವರ್ತಿಯುಳ್ಳದ್ದಾಗಿ ದೇಹಾವಸಾನದವರೆಗೂ ಮಾಡತಕ್ಕದ್ದಾದುದರಿಂದ ಮಧ್ಯದಲ್ಲೇನಾದರೂ ವಿಘ್ನವು ಒದಗಿದರೆ, **ಪ್ರತಿಸಮಾಧಾನಮ್ ಪಣ್ಣುವಿಕ್ಕೈಕ್ಕುಮ್**-ಆ ವಿಘ್ನವು ಶಮನ

**ಯಾಂತರ ಸ್ಥಾನತ್ತಿಲೆ ನಿನ್ರು ನಿರಪಾಯಮಾಗ ರಕ್ಷಿಕ್ಕೈಕ್ಕುಮ್, ಇವ್ಯಾಜಙ್ಗಳೈಕ್ಕೊಂಡು ಪ್ರಸನ್ನನಾಯ್ ಅನಾದಿಕಾಲಮ್ ಪಣ್ಣಿನ ಅನಂತ ಮಹಾಪರಾಧಙ್ಗಳೈ ಅನಾದರಿತ್ತು ಅನಂತ ಸುಖತ್ತಿಲೇ ವಿಶ್ರಮಿಕ್ಕುಮ್ಪಡಿ ಸಂಸಾರ ನಿವರ್ತ್ತಕ ನಾಕ್ಕೈಕ್ಕುಮ್, ಆರ್ತ್ತಪ್ರಪನ್ನರ್ಕ್ಕು ಅಪ್ಪೋದೇ ಮೋಕ್ಷಮ್ ಕೊಡುಕ್ಕೈಕ್ಕುಮ್, ಇಜ್ಙ್ಗಿರುನ್ದನಾಳ್ ನಿರಪರಾಧನಾ ಯಿರುಕ್ಕ**

---

ವಾಗುವ ಹಾಗೆ ಮಾಡಿ, ಉಪಾಸನವು ಪುನಃ ಪ್ರಾರಂಭಿಸಲ್ಪಟ್ಟು ಪೂರ್ತಿಯಾಗುವ ಹಾಗೆ ಮಾಡಿಸುವುದಕ್ಕೂ, ಇದರಲ್ಲಿ ಉಪಾಸನೋಚ್ಛಿತ್ತಿಗಾಗಿ ಪ್ರಾಯಶ್ಚಿತ್ತವನ್ನನುಷ್ಠಿಸುವ ಹಾಗೆ ಮಾಡುವುದೂ ಕೂಡ ಕಾರುಣ್ಯಕಾರ್ಯವೆಂದು ಭಾವಿಸತಕ್ಕದ್ದು, (೧೩) **ಅಕಿಂಚನರ್ಕ್ಕು** - ಉಪಾಸನೆಗೆ ಯೋಗ್ಯತೆಯಿಲ್ಲದ ಅಸಮರ್ಥರಿಗೆ, **ಉಪಾಯಾಂತರ ಸ್ಥಾನತ್ತಿಲೆ** - ಆ ಉಪಾಯಾಂತರವಾದ ಉಪಾಸನೆಯ ಸ್ಥಾನದಲ್ಲಿ ಎಂದರೆ ಅದಕ್ಕೆ ಬದಲಾಗಿ, **ನಿನ್ರು** - ತಾನೇ ನಿಂತು, **ನಿರಪಾಯಮಾಗ** ಏನೊಂದೂ ಅಪಾಯ ಸಂಭವಿಸದ ಹಾಗೆ, **ರಕ್ಷಿಕ್ಕೈಕ್ಕುಮ್** - ರಕ್ಷಿಸುವುದಕ್ಕೂ, ಎಂದರೆ ಭಕ್ತಿಮಾರ್ಗದಲ್ಲಿ ಪ್ರವರ್ತಿಸಲು ಯೋಗ್ಯತೆಯಿಲ್ಲದೆ ಪ್ರಪತ್ತಿಮಾರ್ಗದಲ್ಲಿ ಪ್ರವರ್ತಿಸಿದವನಿಗೆ ಭಕ್ತಿಸ್ಥಾನದಲ್ಲಿ ತಾನೇ ನಿಂತು ಪ್ರಪತ್ತಿಗೆ ಏನೂ ಅಪಾಯ ಬರದ ಹಾಗೆ ಕಾಪಾಡುವುದಕ್ಕೂ ಎಂಬ ಭಾವವು, (೧೪) **ಇವ್ಯಾಜಙ್ಗಳೈಕ್ಕೊಂಡು**- ಈ ಭಕ್ತ್ಯಾದಿ ಉಪಾಯಾನುಷ್ಠಾನಗಳನ್ನು ಸ್ವೀಕರಿಸಿ **ಪ್ರಸನ್ನನಾಗಿ**, "**ತಸ್ಮಿನ್ ಪ್ರಸನ್ನೇ ಕಿಮಿಹಾಸ್ತ್ಯಲಭ್ಯಮ್**" ಎಂದು ಹೇಳಿರುವ ಹಾಗೆ, ಅನಾದಿಕಾಲವೆಂದಲೂ ಮಾಡಿದ, **ಅನಂತ ಮಹಾಪರಾಧಙ್ಗಳೈ** - ಅಸಂಖ್ಯಾಕಗಳಾಗಿಯೂ ಬಹು ಕ್ರೂರವಾದವುಗಳಾಗಿಯೂ ಇರುವ ಪಾಪಗಳನ್ನೆಲ್ಲಾ, **ಅನಾದರಿತ್ತು** – ತಿರಸ್ಕರಿಸಿ, ಸ್ಮರಿಸದೆ, **ಅನಂತ ಸುಖತ್ತಿಲೆ** - ಸ್ವಾಮಿಯನ್ನು ಭಜಿಸಿ ಕೈಂಕರ್ಯ ಮಾಡುವ ನಿರತಿಶಯ ಸುಖದಲ್ಲಿ, **ವಿಶ್ರಮಿಕ್ಕುಮ್ಪಡಿ** - ವಿಶ್ರಾಂತಿಯನ್ನು ಹೊಂದುವ ಹಾಗೆ, **ಸಂಸಾರ ನಿವರ್ತಕನಾಗೈಕ್ಕುಮ್** - "**ಪರಮಾತ್ಮನಿಯೋ ರಕ್ತಃ ವಿರಕ್ತೋऽಪರಮಾತ್ಮನಿ**" ಎಂದು ಹೇಳಿರುವ ಹಾಗೆ ಐಹಿಕಗಳಾದ ಸಂಸಾರ ವಿಷಯಗಳಲ್ಲಿ ವೈರಾಗ್ಯ ಹುಟ್ಟುವ ಹಾಗೆ ಮಾಡುವುದಕ್ಕೂ, (೧೫) **ಆರ್ತ ಪ್ರಪನ್ನರುಕ್ಕು** – ಈ ಲೋಕದಲ್ಲಿರುವ ಸ್ಥಿತಿಯು ಅಗ್ನಿಯ ಮಧ್ಯದಲ್ಲಿರುವ ಹಾಗೆ ಭಾವಿಸಿ ಒಂದು ಮುಹೂರ್ತವೂ ಇಲ್ಲಿರುವುದು ದುಸ್ಸಹವೆಂದು ಭಾವಿಸಿ ಪ್ರಪದನ ಮಾಡಿದ ಆರ್ತರಿಗೆ, **ಅಪ್ಪೋದೆ** – ಆ ಪ್ರಪತ್ತ್ಯನುಷ್ಠಾನ ಕಾಲದಲ್ಲೇ, **ಮೋಕ್ಷಮ್ ಕೊಡುಕ್ಕೈಕ್ಕುಮ್** - ಮೋಕ್ಷವನ್ನು ಕೊಡುವು

ವೇಣುಮೆನ್ರು ಫಲಮ್ ಕೋಲಮರನ್ದ ದೃಪ್ತ ಪ್ರಪನ್ನನುಕ್ಕು ಪ್ರಾರಬ್ಧ ಕರ್ಮವಶತ್ತಾಲೆ ಪುಗುನ್ದ ಅಪರಾಧತ್ತುಕ್ಕು ಅನುತಾಪತ್ತೈ ವಿಳೈಪ್ಪಿತ್ತು ಅಧಿಕಾರಾನುರೂಪಮಾನ ಪ್ರಾಯಶ್ಚಿತ್ತ ವಿಶೇಷತ್ತಿಲೆ ಮೂಟ್ಟುಗೈಕ್ಕುಮ್, ಅಜ್ಞನ ಮೃದುಪ್ರಕೃತಿಗಳಲ್ಲಾದಾರ್ಕ್ಕು ಯಮವಿಷಯ ಗಮನಮುಮ್ ಕೋಲಿನ ಫಲತ್ತುಕ್ಕು ಪ್ರತಿಬಂಧಕಮುಮ್ ವಾರಾದಪಡಿ ಪಣ್ಣಿ ಉಪಕ್ಲೇಶಙ್ಗಳಾಲೇ ಶಿಕ್ಷಿಕ್ಕೈಕ್ಕುಮ್, ಪ್ರಧಾನಮಾನ ಸಾಮಾನ್ಯ ನಿದಾನಮಾಯಿರುಕ್ಕುಮ್.

---

ದಕ್ಕೂ, (೧೬) ಇಙ್ಗಿರುಂದ ನಾಳ್ - ಪ್ರಪದನಾನುಷ್ಠಾನಾನಂತರ ಇಲ್ಲಿ ಇದ್ದಷ್ಟು ಕಾಲವೂ, ನಿರಪರಾಧನಾಯಿರುಕ್ಕವೇಣುಮ್ - ಪ್ರಾರಬ್ಧ ಕರ್ಮ ಬಲದಿಂದ ಉತ್ತರಾಘಕ್ಕೆ ಕಾರಣವಿದ್ದರೂ ಅಂತಹ ಪಾಪಗಳೊಂದನ್ನೂ ಮಾಡದೇ ಇರಬೇಕೆಂಬ, ಫಲಮ್ ಕೋಲ ಮರನ್ದ - ಫಲವನ್ನು ಪ್ರಾರ್ಥಿಸಲು ಮರೆತ, ದೃಪ್ತ ಪ್ರಪನ್ನನುಕ್ಕು - ದೇಹಾವಸಾನದಲ್ಲಿ ಮೋಕ್ಷವನ್ನಪೇಕ್ಷಿಸಿದ ಪ್ರಪನ್ನನಿಗೆ, ಪ್ರಾರಬ್ಧ ಕರ್ಮವಶತ್ತಾಲೆ ಪುಗುನ್ದ - ಪ್ರಾರಬ್ಧ ಕರ್ಮ ಮೂಲಕ ಪ್ರಾಪ್ತವಾದ, ಅಪರಾಧತ್ತುಕ್ಕು ಅನುತಾಪತ್ತೈ ವಿಳೈಪ್ಪಿತ್ತು - ಅಪರಾಧಕ್ಕೆ ಅನುತಾಪವನ್ನುಂಟುಮಾಡಿಸಿ, ಅಧಿಕಾರಾನುರೂಪಮಾನ - ಆ ಪಾಪಮಾಡಿದ ಅಧಿಕಾರಿಗೆ ಯೋಗ್ಯವಾದ, ಪ್ರಾಯಶ್ಚಿತ್ತತ್ತಿಲೆ ಮೂಟ್ಟುಗೈಕ್ಕುಮ್ - ಪ್ರಾಯಶ್ಚಿತ್ತವನ್ನು ಮಾಡುವ ಹಾಗೆ ಪ್ರೇರಿಸುವುದಕ್ಕೂ, ಪ್ರಾಯಶ್ಚಿತ್ತಗಳು ಎಲ್ಲಾ ವರ್ಣಾಶ್ರಮದವರಿಗೂ ಏಕರೂಪವಾದವುಗಳಲ್ಲವು, ಮತ್ತು ಬೇರೆ ಬೇರೆ ಪಾತಕಗಳಿಗೆ ಬೇರೆ ಬೇರೆ ಪ್ರಾಯಶ್ಚಿತ್ತಗಳು, ಆದುದರಿಂದ ಆಯಾ ಅಧಿಕಾರಿಗಳಿಗೆ ಯೋಗ್ಯಗಳಾದ ಪ್ರಾಯಶ್ಚಿತ್ತಗಳನ್ನನುಷ್ಠಿಸಬೇಕು ; ಆದುದರಿಂದ ಅಧಿಕಾರಾನುರೂಪಮಾನಮೆಂಬ ಪ್ರಯೋಗವು. (೧೭) ಅಜ್ಞನ - ತದಾ, ಆ ಪ್ರಪದನಾನುಷ್ಠಾನ ಕಾಲದಲ್ಲಿ, ಮೃದು ಪ್ರಕೃತಿಗಳಲ್ಲಾದಾರ್ಕ್ಕು - ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳುವಷ್ಟು ಮೃದುಸ್ವಭಾವವಿಲ್ಲದೆ ಬುದ್ಧಿಪೂರ್ವೋತ್ತರಾಘಕ್ಕೆ ಪ್ರಾಯಶ್ಚಿತ್ತ ಮಾಡಿಕೊಳ್ಳದವರಿಗೆ, ಯಮವಿಷಯಗಮನಮುಮ್-ಯಮನ ಪಟ್ಟಣವನ್ನು ಕುರಿತು ಶಿಕ್ಷೆಯನ್ನನುಭವಿಸುವುದಕ್ಕಾಗಿ ಹೋಗೋಣವೇನು, ಕೋಲಿನ ಫಲತ್ತುಕ್ಕು ಪ್ರತಿಬಂಧಕಮುಮ್ - ಪ್ರಾರ್ಥಿಸಿದ ಫಲವಾದ ಮೋಕ್ಷಪ್ರಾಪ್ತಿಗೆ ತಡೆಯೇನು, ಇವುಗಳು, ವಾರಾದಪಡಿ ಪಣ್ಣಿ - ಬಾರದ ಹಾಗೆ ಮಾಡಿ, ಉಪಕ್ಲೇಶಙ್ಗಳಾಲೆ - ಖಂಡಾಭವಂತಿ, ಕಾಣಾಭವಂತಿ, ಅವಿಧೇಯ ಪುತ್ರ

ಭವಂತಿ ಇತ್ಯಾದಿ ಅಲ್ಪವಾದ ಕ್ಲೇಶಗಳನ್ನು ಕೊಟ್ಟು, ಶಿಕ್ಷಿಕ್ಕೈಕ್ಕೈವರ್-ಶಿಕ್ಷಿಸು ವುದಕ್ಕೂ ಸಹ, ಪ್ರಧಾನಸಮಾನ - ಮುಖ್ಯವಾದ, ಸಾಮಾನ್ಯ ನಿದಾನ ಮಾಯಿರುಕ್ಕೈವರ್ - ಸಾಮಾನ್ಯವಾದ ಕಾರಣವಾಗಿರುತ್ತದೆ. ಸರ್ವೇಶ್ವರನ ಕಾರುಣ್ಯವು ಈ ಮೇಲೆ ಉಪಪಾದಿಸಲ್ಪಟ್ಟ ಹದಿನೇಳು ವಿಧವಾದ ಕಾರ್ಯಪರಂ ಪರೆಗಳನ್ನುಂಟುಮಾಡಲು ಪ್ರಧಾನಕಾರಣವಾಗಿಯೂ ಸಾಮಾನ್ಯವಾದ ಕಾರಣ ವಾಗಿಯೂ ಇರುತ್ತದೆ ಆದರೆ ಈ ಹದಿನೇಳರಲ್ಲಿ ಮೊದಲಿನ ಆರುವಿಧ ಕಾರ್ಯ ಗಳಿಗೆ ವ್ಯಾಜಸಾಪೇಕ್ಷೆಯಿಲ್ಲದೆ ಬರೀ ಈಶ್ವರ ಕೃಪಾಪೂರ್ವಕ ಸಂಕಲ್ಪದಿಂದಲೇ ನಡೆಯುವುದರಿಂದ, ಕೃಪೆಯು ಪ್ರಧಾನಸಾಮಾನ್ಯ ಕಾರಣವು, ವಿಶೇಷಕಾರಣವು ಯಾವುದೂ ಇರುವದಿಲ್ಲವು ಮಿಕ್ಕ ಹನ್ನೊಂದು ವಿಧವಾದ ಕಾರ್ಯಗಳಲ್ಲಿ ಚೇತ ನನ ವ್ಯಾಜರೂಪವಾಗಿರುವ ಸಹಕಾರಿರೂಪ ವಿಶೇಷಕಾರಣವೂ ಸಹ ಆವಶ್ಯಕವಾ ದುದರಿಂದ ಕಾರುಣ್ಯವು ಈ ಕಾರ್ಯಗಳಿಗೆ ಪ್ರಧಾನವಾದರೂ ಸಾಮಾನ್ಯ ವಾದ ಕಾರಣವೆಂದು ಹೇಳಲ್ಪಟ್ಟಿತ. ಹೇಗೆಂದರೆ, ಸರ್ವೇಶ್ವರನ ಕಾರುಣ್ಯವು ನೀರಿನ ಹಾಗೆ ನಾನಾ ವಿಧ ಸಸ್ಯರೂಪ ಪೈರಿಗೆ ಕಾರಣವಾಗಿ ಪ್ರಧಾನವಾಗಿಯೂ ಸಮವಾಗಿಯೂ ಇದ್ದರೂ ಆಯಾ ಸಸ್ಯಗಳಿಗೆ ಬೇಕಾದ ಬೀಜಗಳು ಭೂಮಿಯು ಲ್ಲಿರುವದು ಹೇಗೆ ಸಹಕಾರಿರೂಪ ವಿಶೇಷಕಾರಣವಾಗಿ ಆವಶ್ಯಕವೋ, ಹಾಗೆಯೇ ಈ ಮೇಲಿನ ಕಾರ್ಯಗಳಿಗೆ ಸರ್ವೇಶ್ವರನ ಕೃಪೆಯು ಪ್ರಧಾನವಾದ ಸಮಾನವಾದ ಕಾರಣವು, ಚೇತನನ ವಿವಿಧ ಸುಕೃತಗಳು ಸಹಕಾರಿಯಾದ ವಿಶೇಷವಾದ ಕಾರಣ ವೆಂಬ ಭಾವವು

**ಸಿದ್ಧೋಪಾಯನು ಶ್ರಿಯಃಪತಿಯು, ಭಕ್ತಿಪ್ರಪತ್ತಿಗಳು ಸಾಧ್ಯೋಪಾಯಗಳು.**

---

"ಅಧಿಷ್ಠಾನಂ ತಥಾಕರ್ತಾ ಕರಣಂಚ ಪೃಥಗ್ವಿಧಮ್ । ವಿವಿಧಾಶ್ಚ ಪೃಥಕ್ಚೇಷ್ಟಾ ದೈವಂಚೈವಾತ್ರ ಪಂಚಮಂ ॥" ಎಂಬ ಶ್ಲೋಕದಲ್ಲಿ ತೋರಿ ಬರುವಂತೆ ಚೇತನನ ಮೋಕ್ಷಪ್ರಾಪ್ತಿರೂಪಕಾರ್ಯಕ್ಕೆ ಸಾಧನವಾಗಿ ಕರ್ತಾವಾದ ತನ್ನ ಕಾರ್ಯವೂ ದೈವವಾದ ಶ್ರಿಯಃಪತಿಯ ಕಾರ್ಯವೂ, ಎರಡೂ ಆವಶ್ಯಕವು ಇವುಗಳಲ್ಲಿ ಶ್ರಿಯಃಪತಿಯ ಕಾರ್ಯವು ಪ್ರಧಾನವಾದುದಾಗಿ ಕಡೆಯಿಂದ ಕೂಡಿ ದುದಾಗಿ ಸಿದ್ಧೋಪಾಯವೆಂದೆನಿಸುತ್ತದೆ ಅಂತಹ ಕಾರುಣ್ಯೋತ್ತೇಜಕವಾದ ಜೀವಾತ್ಮನ ಕಾರ್ಯಗಳು ಭಕ್ತಿಪ್ರಪತ್ತಿಗಳಾಗಿ ಸಾಧ್ಯೋಪಾಯಗಳೆನಿಸುತ್ತವೆ ಎಂದು ಮುಂದಿನ ವಾಕ್ಯದಿಂದ ಉಪದೇಶಿಸುತ್ತಾರೆ. ಚೇತನನು ಸರ್ವೇಶ್ವರನಿಗೆ ಅಧೀನವಾದುದರಿಂದ, ಚೇತನನ ಕಾರ್ಯವೂ ಸರ್ವೇಶ್ವರನ ಕಾರ್ಯವೂ ಎರಡೂ ಆವ

## ಶ್ರಿಯಃಪತಿ ಸ್ಸಿದ್ಧೋಪಾಯಃ, ಭಕ್ತಿ ಪ್ರಪತ್ತೀ ಸಾಧ್ಯೋಪಾಯೌ.

ಇಪ್ಪಡಿಪ್ಪಟ್ಟ ಕೃಪಾವಿಶಿಷ್ಟನಾನ ಈಶ್ವರನ್ (೧) "ಕೃಷ್ಣಂ ಧರ್ಮಂ ಸನಾತನಂ" ಎನ್ಗಿರಪಡಿಯೇ ಸಿದ್ಧೋಪಾಯಮ್. ಇವನುಕ್ಕು ಪ್ರಸಾದನಙ್ಗಳಾನ ಭಕ್ತಿಪ್ರಪತ್ತಿಗಳ್ ಸಾಧ್ಯೋಪಾಯಙ್ಗಳ್.

---

ಶ್ಯಕವು. ಆದರೆ ಸರ್ವೇಶ್ವರನು ಸ್ವತಂತ್ರಿಸಿ ಮಾಡಿದ ಕಾರ್ಯದಲ್ಲಿ ಚೇತನ ಕಾರ್ಯಸಂಬಂಧವು ಯಾವುದೂ ಇರುವುದಿಲ್ಲವು.

ಇಪ್ಪಡಿ ಪಟ್ಟ - ಹೀಗೆ ಪ್ರಯೋಜನ ಪರಂಪರೆಗಳನ್ನು ನಮಗೆ ಉಂಟು ಮಾಡುವ, ಕೃಪಾವಿಶಿಷ್ಟನಾನ - ಕೃಪೆಯಿಂದ ಕೂಡಿದ, ಈಶ್ವರನ್ - ಸರ್ವೇಶ್ವರನು, "ಕೃಷ್ಣಂ ಧರ್ಮಂ ಸನಾತನಂ" - "ಶ್ರೀಕೃಷ್ಣನು ಅನಾದಿಯಾಗಿರುವ ಧರ್ಮವೆಂದು ಸಿದ್ಧೋಪಾಯನೆಂದು ಹೇಳಲ್ಪಟ್ಟಿರುತ್ತಾನೆ", "ಯೇಚ ವೇದವಿದೋ ವಿಪ್ರಾಃ ಯೇಚಾಧ್ಯಾತ್ಮವಿದೋಜನಾಃ । ತೇವದಂತಿ ಮಹಾತ್ಮಾನಂ ಕೃಷ್ಣಂ ಧರ್ಮಂ ಸನಾತನಂ" ಎಂಬುದು ಪೂರಾ ಶ್ಲೋಕವು ಎನ್ಗಿರಪಡಿಯೇ - ಎಂದು ಹೇಳಿರುವ ಹಾಗೆ, ಸಿದ್ಧೋಪಾಯಮ್ ; ಇವನುಕ್ಕು - ಈ ಸರ್ವೇಶ್ವರನಿಗೆ, ಪ್ರಸಾದನಙ್ಗಳಾನ ಪ್ರಸನ್ನತೆಯನ್ನುಂಟುಮಾಡುವ, ಭಕ್ತಿಪ್ರಪತ್ತಿಗಳು ಸಾಧ್ಯೋಪಾಯಗಳು ಶ್ರಿಯಃಪತಿಯು ಸಿದ್ಧೋಪಾಯನೆಂಬುದಕ್ಕೆ ಅನೇಕ ಶ್ರುತಿ ಪ್ರಮಾಣಗಳುಂಟು ಅವುಗಳಲ್ಲಿ "ನಾಯಮಾತ್ಮಾ ಪ್ರವಚನೇನ ಲಭ್ಯೋ ನಮೇಧಯಾ ನ ಬಹುನಾ ಶ್ರುತೇನ । ಯಮೇವೈಷ ವೃಣುತೇ ತೇನ ಲಭ್ಯಸ್ತಸ್ಯೈಷ ಆತ್ಮಾ ವಿವೃಣುತೇ ತನೂಂಸ್ವಾಂ॥" (ಮುಂ ೩ ೧ ೩) ಎಂಬುದೊಂದಾಗಿರುತ್ತದೆ. ಈ ಪರಮಾತ್ಮನು ಕೇವಲ ಶ್ರವಣ ಮನನ ನಿಧಿಧ್ಯಾಸನಾದಿಗಳಿಂದ ಲಭ್ಯನಲ್ಲವು. ಈ ಪರಮಾತ್ಮನು ಯಾವ ಉಪಾಸಕನನ್ನು ಯೋಗ್ಯನನ್ನಾಗಿ ಭಾವಿಸುವನೋ (ವರಿಸುವನೋ) ಅವನಿಂದ ಹೊಂದಲ್ಪಡುವನು ಅಂತಹ ಉಪಾಸಕನಿಗೆ ಈ ಪರಮಾತ್ಮನು ತನ್ನ ದಿವ್ಯಮಂಗಳ ವಿಗ್ರಹವನ್ನು ಪ್ರಕಾಶಿಸುವ ಹಾಗೆ ಮಾಡುವನು, ಅದೂ ಅಲ್ಲದೆ ಪರಿಪೂರ್ಣನಾದ ತನ್ನ ಅನುಭವವನ್ನೂ ಉಂಟುಮಾಡುವನು" ಇದರಿಂದ ಪರಮಾತ್ಮನು ಯಾವನು ತನಗೆ ಪ್ರಿಯತಮನೆಂದು ಭಾವಿಸುವನೋ ಆತನಿಗೆ ಸಿದ್ಧೋಪಾಯನಾಗಿ ಶರಣಿಸುವನು ; ಹಾಗೆ ಪ್ರಿಯತಮನೆಂದು ಭಾವಿಸಬೇಕಾದರೋ ಪ್ರೀತಿರೂಪಾಪನ್ನ

---

(೧) ಭಾರತ ವನ. ೭೧ ೧೨೩.

## ೨ ಪ್ರಪತ್ತೇರಧಿಕಾರಿ ವಿಶೇಷಣತ್ವ ವಾದ ನಿರಾಸಃ

ಓರಧಿಕಾರಿ ವಿಶೇಷತ್ವಕ್ಕೆ ಕರ್ತವ್ಯವಾಗ "ಮಾಮೇಕಂ ಶರಣಂ

ವಾದ ಏಕಾಂತ ಮನಸ್ಸಿನಿಂದ ಭಗವದುಪಾಸನೆ ಮಾಡಿಯೇ ತೀರಬೇಕು ಅಥವಾ ಶರಣಾಗತಿಯನ್ನು ಮಾಡಬೇಕು. ಆದುದರಿಂದ ಭಗವದುಪಾಸನ ಶರಣಾಗತಿಗಳು ಆವಶ್ಯಕವು. ಇವುಗಳ ಆವಶ್ಯಕತೆಯೇ ಇಲ್ಲದೆ ಪ್ರಿಯತಮನಾಗಿ ಎಂದಿಗೂ ಭಾವಿಸಲಾರನು. ಆದುದರಿಂದ ಸಿದ್ಧೋಪಾಯನಾದ ಸರ್ವೇಶ್ವರನ ಕೃಪೆಯೂ, ಸಾಧ್ಯೋಪಾಯವಾದ ಭಕ್ತಿಯಾಗಲಿ ಅಥವಾ ಪ್ರಪತ್ತಿಯಾಗಲಿ ಎರಡೂ ಮುಕ್ತೈಶ್ವರ್ಯಪ್ರಾಪ್ತಿಗೆ ಆವಶ್ಯಕವೆಂಬ ಭಾವವು.

ಸುಕೃತ ಪರಿಪಾಕ [illegible], ಕರುಣಾಸಾಗರನಾದ ಶ್ರೀಯಃಪತಿಯು ಯಾವಾಗಲೂ ಸಿದ್ಧೋಪಾಯನಾಗಿದ್ದುಕೊಂಡು ಈತನ ಸುಗಲಿಕ ವ್ಯಾಜರೂಪಗಳಾದ ಸಾಧ್ಯೋಪಾಯಗಳಿಲ್ಲದಿದ್ದರೂ ಅವನ್ನು ತಾನೇ ಮಾಡಿ, ಆತನ ಪಾಪಗಳನ್ನೆಲ್ಲಾ ನಿವರ್ತಿಪಡಿಸಿ, ಅವನನ್ನು ಪ್ರಿಯತಮನನ್ನಾಗಿ ಎಣಿಸಿ, ಆತನಿಗೆ ಅಂತಿಮಸ್ಮೃತಿ, ದೇಹಾವಸಾನ ಬ್ರಹ್ಮನಾಡೀ ಪ್ರವೇಶ, ಅರ್ಚಿರಾದಿ ಗಮನ, ದಿವ್ಯ ವೈಕುಂಠಪ್ರಾಪ್ತಿ, ತನ್ನಾಂಗ ಸಾಯುಜ್ಯ, ಪರಿಪೂರ್ಣಾನಂದ ಬ್ರಹ್ಮಾನುಭವ, ಇವೆಲ್ಲವನ್ನೂ ತಾನೇ ಆಗಲು ಸಿದ್ಧೋಪಾಯನಾಗಿ ಮಾಡುವನೆಂಬುದು ಮುಖ್ಯ ತಾತ್ಪರ್ಯವು.

೨ ಎರಡನೆಯ ಪೂರ್ವಪಕ್ಷವು ಚರಮ ಶ್ಲೋಕದಲ್ಲಿ ಸರ್ವೇಶ್ವರನು "ಮಾಮೇಕಂ ಶರಣಂ ವ್ರಜ" ಎಂದು ಹೇಳಲ್ಪಟ್ಟಿರುವುದರಿಂದ, ಸರ್ವೇಶ್ವರನೊಬ್ಬನೇ ಉಪಾಯನೇ ವಿನಾ, ಇನ್ನು ಯಾರಾಗಲಿ, ಯಾವುದಾಗಲಿ ಉಪಾಯವಾಗಲಾರದು. ಈ ಏಕ ಶಬ್ದವು ಸಾರ್ಥಕ್ಯ ಹೊಂದಬೇಕಾದರೆ ಇನ್ನು ಯಾವುದನ್ನೂ ಅಂಗೀಕರಿಸಬಾರದು. ಅಗತ್ಯಾಗಿ ಭರನ್ಯಾಸವನ್ನು ಉಪಾಯವಾಗಿ ವರಿಸುವುದು ನ್ಯಾಯವಲ್ಲವೆಂದು ಪೂರ್ವಪಕ್ಷಿಗಳ ಭಾವವು. ಆದರೆ ಮುಂದೆ ಶರಣಂ ವ್ರಜ ಎಂದು ಶರಣಾಗತಿಯೂ ಉಪಾಯವಾಗಿ ವಿಧೇಯವಾಗಿದೆಯಲ್ಲಾ ಎಂದರೆ, ಅದು ಇಂತಹ ಭಗವತ್ಕೃಪೆಗೆ ಅರ್ಹನಾದ ಅಧಿಕಾರಿಗೆ ವಿಶೇಷಣ ರೂಪವೇ ವಿನಾ ಸಾಕ್ಷಾತ್ ಉಪಾಯವಾಗುವುದಿಲ್ಲವು. ಹೇಗೆಂದರೆ ಸಂಧ್ಯೋಪಾಸನೆ ಮಾಡುವ ಅಧಿಕಾರಿಗೆ ಶುಚಿತ್ವವು ಹೇಗೆ ಅಧಿಕಾರಿ ವಿಶೇಷಣವಾಗಿ ಸ್ವತಃ ಉಪಾಯವಲ್ಲವೋ ಹಾಗೆ ಎಂಬ ಭಾವವು. ಈ ವಾದವನ್ನು ಮುಂದಿನ ವಾಕ್ಯದಿಂದ ಖಂಡಿಸುತ್ತಾರೆ.

ವ್ರಜ" ಎನ್ರು ವಿಧಿಕ್ಕಪ್ಪಡುಗಿರ ಪ್ರಪತ್ತಿಯೈ ಅಧಿಕಾರಿ ವಿಶೇಷಣಮೆನ್ರು ಶಿಲರ್ ಶೊನ್ನವಿಡತ್ತು ಅದಿಕಾರಿ ವಿಶೇಷಣತ್ತುಕ್ಕು ಚ್ಚೊಲ್ಲುಮ್ ಲಕ್ಷಣ ತ್ತೋಡು ಶೇರಾಮೈಯಾಲೇ ಅತಿ ಮಾದಮ್.

## ೨. ಪ್ರಪತ್ತಿಯು ಅಧಿಕಾರಿವಿಶೇಷಣವೆಂಬ ವಾದದ ನಿರಾಸವು.

ಓರಧಿಕಾರ ವಿಶೇಷತ್ತುಕ್ಕು - ಒಬ್ಬ ಮುಖ್ಯನಾದ ಅಧಿಕಾರಿಗೆ, ಇಲ್ಲಿ ಪ್ರಪತ್ತಿಪಷ್ಟನು ಹೇಳಲ್ಪಟ್ಟನು, ಅಂತವನಿಗೆ, ಕರ್ತವ್ಯಮಾಗ - ಆವಶ್ಯಕ ನಾಗಿ ಮಾಡಬೇಕಾದ, ಮಾಮೇಕಂ ಶರಣಂವ್ರಜ - ನನ್ನೊಬ್ಬನನ್ನೇ ಶರಣು ಹೊಂದು, ಎನ್ರು - ಎಂಬದಾಗಿ, ವಿಧಿಕ್ಕಪಡುಗಿರ - ವಿಧಿಸಲ್ಪಡುವ, ಪ್ರಪತ್ತಿ ಯನ್ನು, ಅಧಿಕಾರಿ ವಿಶೇಷಣವೆಂದು, ಶಿಲರ್ ಶೊನ್ನವಿಡತ್ತು - ಕೆಲವರು ಹೇಳಿದ ಸ್ಥಳವಲ್ಲ, ಅಧಿಕಾರಿ ವಿಶೇಷಣತ್ತುಕ್ಕು - ಅಧಿಕಾರಿಯ ವಿಶೇಷಣಕ್ಕೆ, ಶೊಲ್ಲುಮ್ ಲಕ್ಷಣತ್ತೋಡು - ಹೇಳುವ ಲಕ್ಷಣಸ್ವರೂಪದೊಂದಿಗೆ, ಶೇರಾ ಮೈಯಾಲೇ - ಸೇರದೇ ಇರುವುದರಿಂದ, ಅತಿ ಮಾದಮ್ - ಬರೀ ಹೆಚ್ಚಾದ ವಾದವೇ ವಿನಾ ಶಾಸ್ತ್ರಸಮ್ಮತ ವಿಷಯವಲ್ಲವು, ಯಾವುದೆಂದರೆ ಒಬ್ಬ ಅಧಿಕಾರಿಗೆ ಇರಬೇಕಾದ ವಿಶೇಷಣವನ್ನು ಬೋಧಿಸುತ್ತದೆಂಬ ವಾದವು ಮಾಮೇಕಂ ಶರ ಣಂ ವ್ರಜ ಎಂಬ ವಾಕ್ಯದಲ್ಲ, ಮಾಮೇಕಂ ವ್ರಜ ಎಂಬುವರಿಂದ ಭಗವಂತನ ನ್ನು ಪ್ರಧಾನನಾದ ಸಿದ್ಧೋಪಾಯನನಾಗಿ ಹೊಂದು, ಶರಣಂ ವ್ರಜ ಎಂಬುದರಿಂದ ಪ್ರಪತ್ತಿಯನ್ನು ಸಾಧ್ಯೋಪಾಯವಾಗಿ ಹೊಂದು ಎಂಬದಾಗಿ ಆಚಾರ್ಯರವರ ಅಭಿ ಪ್ರಾಯವಾದುದರಿಂದ ಎನ್ರು ವಿಧಿಕ್ಕಪಡುಗಿರ ಪ್ರಪತ್ತಿಯೈ ಎಂದು ಹೇಳಿರು ತ್ತಾರೆ ಇವರಿಂದ ಅಧಿಕಾರಿ ವಿಶೇಷಣವು ವಿಧಿವಾಕ್ಯ ವಿಷಯವಾಗಲಾರದೆಂಬ ಅಭಿಪ್ರಾಯವು. ಅಧಿಕಾರಿಗೆ ವಿಧೇಯವಾಗಿ ಹೇಳುವುದಕ್ಕೆ ಪೂರ್ವಭಾವಿಯಾ ಗಿಯೋ ಅಧಿಕಾರಿ ವಿಶೇಷಣ ಧರ್ಮವು ಅತನಲ್ಲಿ ಇರಬೇಕಾಗುತ್ತದೆ. ಹಾಗಾದರೇನೇ ಅತನು ಅಧಿಕಾರಿಯಾಗುತ್ತಾನೆ. ಕರ್ತವ್ಯವಾಗಿ ಹೇಳುವುದು ಅಧಿಕಾರಿ ಮಾಡ ತಕ್ಕದ್ದು. ಅದು ಹೇಗೆ ಅಧಿಕಾರಿ ವಿಶೇಷಣವಾದೀತೆಂಬ ಭಾವವು ಪ್ರಪತ್ತಿಯು ಏತಕ್ಕೆ ಅಧಿಕಾರಿ ವಿಶೇಷಣವಲ್ಲವೆಂದರೆ ಅಧಿಕಾರಿ ವಿಶೇಷಣ ಲಕ್ಷಣವು ಅದರ ಲ್ಲಿಲ್ಲವು ಅಧಿಕಾರಿ ವಿಶೇಷಣಕ್ಕೆ ಲಕ್ಷಣವು ಯಾವುದು ಎಂಬ ಪ್ರಶ್ನೆಯು ಉಂಟಾಗತಕ್ಕದ್ದು ಯುಕ್ತವು ಇದಕ್ಕೆ ಲಕ್ಷಣವನ್ನು ಶ್ರೀ ಯಾಮುನೇಯರವರು ಅವರು ಅನುಗ್ರಹಿಸಿರುವ ಆಗಮಪ್ರಾಮಾಣ್ಯವೆಂಬ ಗ್ರಂಥದಲ್ಲಿ "ಸಿದ್ಧಮೇವಹಿ

ಸರ್ವತ್ರ ನಿಯೋಜ್ಯಸ್ಯ ವಿಶೇಷಣಮ್" "ನಿಯೋಜ್ಯನು - ಅಧಿಕಾರಿಯು, ಆತನಿಗೆ ವಿಶೇಷಣವಾದುದು ಆತನಿಗೆ ಕರ್ತವ್ಯವಾಗಿ ಯಾವುದು ವಿಧಿಸಲ್ಪಟ್ಟಿರುತ್ತದೋ ಅದಕ್ಕೆ ಮೊದಲೇ ಸಿದ್ಧವಾದುದಾಗಿರತಕ್ಕದ್ದು" ಎಂದು ಮೀಮಾಂಸಕರ ಅಭಿಪ್ರಾಯವನ್ನು ಅನುವೋದಿಸಿ ಹೇಳಿರುತ್ತಾರೆ. ಪ್ರಪತ್ತಿಯು ಮೋಕ್ಷಫಲಕಾಮನೆಯಿಂದಲಾಗಲಿ ಪ್ರಾಯಶ್ಚಿತ್ತರೂಪಫಲದಿಂದಾಗಲಿ ಅಧಿಕಾರಿ ವಿಶೇಷಣವೇ ಎಂದು ಹೇಳಬಹುದಲ್ಲಾ ಎಂದರೆ, ಈ ಫಲಗಳನ್ನು ಅಚೇತನವಾದ ಪ್ರಪತ್ತಿಯು ಸಾಕ್ಷಾತ್ತಾಗಿ ಉಂಟುಮಾಡಲಾರದು. ಭಗವತ್ಕೃಪೆಯಿಂದ ಫಲವೇ ವಿನಾ ಇವುಗಳಿಂದಲ್ಲವು ಆದುದರಿಂದ ಈ ನ್ಯಾಯವಾದ ಕರ್ತವ್ಯವಾದ ಪ್ರಪತ್ತಿಯು ಅಧಿಕಾರಿ ವಿಶೇಷಣವಾಗಲಾರದು. ಪ್ರಪತ್ತಿಯು ಅಧಿಕಾರಿ ವಿಶೇಷಣವಾದ ಪಕ್ಷದಲ್ಲಿ ವಿಧೇಯವಾಗಿ ಕರ್ತವ್ಯವ್ಯಾವುದು ಎಂಬ ಪ್ರಶ್ನವು ನಿರುತ್ತರವಾದುದಾಗುತ್ತದೆ. ಅದೂ ಅಲ್ಲದೆ ಈ ಪ್ರಪತ್ತಿಗೆ ಸರ್ವಾಧಿಕಾರತ್ವವನ್ನು ಸ್ಥಾಪಿಸಿರುವುದರಿಂದಲೂ, ಅರ್ಥಿತ್ವ ಸಾಮರ್ಥ್ಯವೆರಡೂ ಸಾಮಾನ್ಯ ವಿಶೇಷಣಗಳಾಗಿರುವುದರಿಂದಲೂ, ಇನ್ನು ಯಾವ ವಿಶೇಷಣದಪೇಕ್ಷೆಯೂ ಈ ಅಧಿಕಾರಿಗೆ ಇಲ್ಲವು ಎಂದು ಹಿಂದೆಯೇ ಅಧಿಕಾರಿ ವಿಭಾಗಾಧಿಕಾರದಲ್ಲಿ ತಿಳಿಸಿರುತ್ತಾರೆ ಅದೂ ಅಲ್ಲದೆ ಈ ಪ್ರಪತ್ತಿಯು ಒಂದು ಕ್ಷಣಕಾಲವರ್ತಿಯಾಗಿ, ಫಲವನ್ನು ತಾನೇ ಹೇಗೆ ಸ್ವತಂತ್ರಿಸಿ ಸಾಧಿಸಿ ಕೊಡುವುದಾಗಿ ಅಧಿಕಾರಿ ವಿಶೇಷಣವಾದೀತು? ಈ ಪ್ರಪತ್ತಿಯು ಅಧಿಕಾರಿ ವಿಶೇಷಣವಾದರೆ ಅದೇಕಾರಣದಿಂದಲೇ ವಿಧೇಯವಾದುದಾಗಿ ಕರ್ತವ್ಯವಾಗಿ ಸಾಧ್ಯೋಪಾಯವಾಗಿ ಹೇಳಿರುವ ಭಕ್ತಿಮಾರ್ಗವೂ ಕೂಡ ಅಧಿಕಾರಿ ವಿಶೇಷಣದಲ್ಲೇ ಸೇರಬೇಕಾಗಿ ಬಂದೀತು. ಆದರೆ ಮುಮುಕ್ಷುರ್ಬ್ರಹ್ಮೋಪಾಸೀತ ಎಂಬ ವಿಧಿವಾಕ್ಯವು ಸಾಕ್ಷಾತ್ತಾಗಿರುವುದರಿಂದ ಭಕ್ತಿಯು ಸಾಧ್ಯೋಪಾಯವೆಂದರೆ ಅದೇ ಕಾರಣದಿಂದಲೇ ಪ್ರಪತ್ತಿಯೂ ಸಾಧ್ಯೋಪಾಯವೇ "ಮುಮುಕ್ಷುರ್ವೈ ಶರಣಮಹಂ ಪ್ರಪದ್ಯೇ" "ಯದ್ಯೇನ ಕಾಮಕಾಮೇನ ನ ಸಾಧ್ಯಂ ಸಾಧನಾನ್ತರೈಃ । ತೇನ ತೇನಾಪ್ಯತೇ ತತ್ತನ್ನ್ಯಾಸೇನೈವ ಮಹಾಮುನೇ ॥" "ಓಮಿತ್ಯಾತ್ಮಾನಂ ಯುಂಜೀತ" ಇತ್ಯಾದಿ ಪ್ರಮಾಣಗಳು ಸಾಧ್ಯೋಪಾಯವೇ ಪ್ರಪತ್ತಿ ಎಂದು ಪ್ರಕಟಿಸುತ್ತವೆ

ಇದೂ ಅಲ್ಲದೆ, ಮಾಮೇಕಂ ಶರಣಂ ವ್ರಜ ಎಂಬ ವಾಕ್ಯಮಾತ್ರವಲ್ಲದೆ, ಇನ್ನೂ ಇತರ ಪ್ರಪತ್ತಿಯನ್ನು ವಿಧಿಸುವ ವಾಕ್ಯಗಳನ್ನು ಪರಿಶೀಲಿಸಿದರೂ ಪ್ರಪತ್ತಿಯು ಸಾಧ್ಯೋಪಾಯವೆಂದೇ, ಭಗವಂತನನ್ನು ಪ್ರಧಾನನಾದ ಸಿದ್ಧೋಪಾಯನೆಂದೇ, ವಿಧಿಸಿರುತ್ತದೆಯೇ ವಿನಾ, ಅಧಿಕಾರಿ ವಿಶೇಷಣವೆಂದು ಎಲ್ಲಿಯೂ ತೋರಬರುವುದಿಲ್ಲವು. "ತಂಗಚ್ಛ ಶರಣಂ ಹರಿಮ್" ಎಂಬಲ್ಲಿ ಸಿದ್ಧೋಪಾಯನು

## ಪ್ರಪತ್ತೇಃ ಅಧಿಕಾರಿ ವಿಶೇಷಣತ್ವೇ ಬಾಧಕಮಾಹ

**ಇಜ್ಞನಲ್ಲಾದಪೋದು ಈಶ್ವರನುಪಾಯಮಾಯ್ ನಿರ್ಕ್ಕ, ಉಪಾಸನಾದಿ ಶಾಸ್ತ್ರಜ್ಞಳುಮ್ ಅಧಿಕಾರಿ ವಿಶೇಷಣಜ್ಞಳಾಮ್. ಆಗೈಯಾಲ್**

---

ಹರಿ ಎಂದೂ ಪ್ರಪತ್ತಿ ಸಾಧ್ಯೋಪಾಯವೆಂದೂ ವಿಧಿಸಿರುತ್ತದೆ "ಓಮಿತ್ಯಾತ್ಮಾನಂ ಯುಂಜೀತ" "ಆತ್ಮಾನಂ ಮಯಿನಿಕ್ಷಿಪೇತ್" ಇತ್ಯಾದಿ ಪ್ರಮಾಣಗಳಲ್ಲಿ ಪ್ರಪತ್ತಿಯು ಸಾಧ್ಯೋಪಾಯವೆಂದೇ ವಿಧಿಸಿರುತ್ತದೆ ಅಧಿಕಾರಿ ವಿಶೇಷಣಕ್ಕೆ ಹೀಗೆ ವಿಧೇಯತ್ವವಿಲ್ಲದಿರುವುದರಿಂದ ಪ್ರಪತ್ತಿಯು ಅಧಿಕಾರಿ ವಿಶೇಷಣವೆಂದಿಗೂ ಅಲ್ಲವು. ಇಂತಹ ಮೇಲಿನಭಿಪ್ರಾಯಗಳನ್ನೆಲ್ಲಾ ಸಂಗ್ರಹವಾಗಿ ತಿಳಿಸುವುಕ್ಕಾಗಿ ಒಂದು ಕಾರಿಕೆಯನ್ನು ಅನುಗ್ರಹಿಸಿರುತ್ತಾರೆ ಅದು ಯಾವುದೆಂದರೆ :— "ಫಲಾದಿಭ್ಯೋ ವಿಭಿನ್ನತ್ವಾತ್ಪ್ರಪತ್ತಿರ್ವಿಧ್ಯನನ್ವಯಾತ್ । ವಿಧೇಯಾಂತರಹಾನೇಶ್ಚನಾಧಿಕಾರಿ ವಿಶೇಷಣಮ್" ಪ್ರಪತ್ತಿಯು ಮೂರು ಕಾರಣಗಳಿಂದ ಅಧಿಕಾರಿವಿಶೇಷಣವಲ್ಲವು.—(೧) ಫಲ, ಆದಿಶಬ್ದದಿಂದ ನಿಮಿತ್ತವು ಹೇಳಲ್ಪಟ್ಟಿತು, ಇವುಗಳಿಗಿಂತಲೂ ಪ್ರಪತ್ತಿಯು ಬೇರೆಯಾದುದರಿಂದಲೂ, (೨) ಪ್ರಪತ್ತಿಯು ವಿಧಿಗೆ ಅನನ್ವಯ ಸಂಭವಿಸುವದರಿಂದಲೂ (೩) ಪ್ರಪತ್ತಿಯಲ್ಲದೆ ಬೇರೆಯಾವುದನ್ನೂ ಕರ್ತವ್ಯವೆಂಬದಾಗಿ ಹೇಳದೆ ಇರುವದರಿಂದಲೂ, ಅದು ಅಧಿಕಾರಿ ವಿಶೇಷಣವಲ್ಲವು ಎಂದು ಹೇಳಿರುತ್ತಾರೆ ಹೀಗೆ ಅಭಿಪ್ರಾಯವಾದರೆ ಚರಮಶ್ಲೋಕದಲ್ಲಿ **ಮಾಮೇಕಂ ಶರಣಂವ್ರಜ** ಎಂಬ ವಾಕ್ಯದಲ್ಲಿ **ಮಾಮೇಕಂ** ಎಂದು ತಾನೊಬ್ಬನೇ ಉಪಾಯವೆಂದು ಹೇಳಿರುವದರಭಿಪ್ರಾಯವೇನೆಂದು ಪ್ರಶ್ನಿಸಿದರೆ ಅದಕ್ಕೆ ಆಚಾರ್ಯರವರು "**ಪ್ರಪತ್ತೇರ್ವ್ಯಾಜಮಾತ್ರತ್ವ ಮೇಕ ಶಬ್ದೇನ ಬೋಧ್ಯತೇ**" ಎಂಬುದದರಿಂದ ಭಗವಂತನೇ ಸಾಕ್ಷಾದುಪಾಯಭೂತನಾಗಿ ಪ್ರಧಾನೋಪಾಯವೇ ವಿನಾ ಸಾಧ್ಯೋಪಾಯವಾದ ಪ್ರಪತ್ತಿಯು ವ್ಯಾಜಮಾತ್ರವೇ ಎಂದುಪದೇಶಿಸಿರುತ್ತಾರೆ

ಹೀಗೆ ವಿಧಿವಾಕ್ಯವಾಗಿ ಕರ್ತವ್ಯವಾಗಿರುವ ಪ್ರಪತ್ತಿಯನ್ನು ಅಧಿಕಾರಿ ವಿಶೇಷಣವೆಂದು ಹೇಳಿದರೆ ಉಂಟಾಗುವ ಬಾಧಕವನ್ನು "ಇಜ್ಞನಲ್ಲಾದಪೋದು" ಎಂದಾರಂಭಿಸಿ, ತಿಳಿಸುತ್ತಾರೆ.

**ಇಜ್ಞನಲ್ಲಾದ ಪೋದು** - ಹೀಗೆ ಪ್ರಪತ್ತಿಯು ಸಾಧ್ಯೋಪಾಯವಾಗದೇ ಅಧಿಕಾರಿ ವಿಶೇಷಣವೇ ಆದರೆ, **ಈಶ್ವರನೇ ಉಪಾಯಮಾಯ್ ನಿರ್ಕ್ಕ** -

**ಪ್ರಪತ್ತಿಯುಮ್ ಕೂಡ ಉಪಾಯಮನ್ರೆನ್ರು ಶಿಲರ್ ಅತಿವಾದಮ್ ಪಣ್ಣಾಗಿರುದುವುಮ್ ಸಿದ್ಧೋಪಾಯತ್ತಿನುಡೈಯ ಪ್ರಾಧಾನ್ಯಮಡಿಯಾಗ ವಿತ್ತನ್ರೈ. ಅದು ಪ್ರಧಾನಮಾನಪಡಿ:—ಪ್ರಸಾದನಙ್ಗಳಾಲೇ ಪ್ರತಿಬಂಧಕಮಾನ ನಿಗ್ರಹಮ್ ಶಮಿತ್ತಾಲ್ ಸ್ವಾಭಾವಿಕಾನುಭವತ್ತುಕ್ಕು ಪ್ರಯೋ**

ಸರ್ವೇಶ್ವರನೇ ಪ್ರಧಾನೋಪಾಯನಾಗಿ ನಿಂತಿರುವಾಗ, ಉಪಾಸನವೇ ಮೊದಲಾದ ಶಾಸ್ತ್ರಗಳೂ ಸಹ, ಅಧಿಕಾರಿ ವಿಶೇಷಣವಾಗಬೇಕಾಗುತ್ತದೆ. ಇಲ್ಲಿ ಆದಿ ಶಬ್ದದಿಂದ ಕರ್ಮಜ್ಞಾನನಿಷ್ಠೆಗಳು ಹೇಳಲ್ಪಟ್ಟವು

ಹೀಗೆ ಬಾಧಕವು ಪ್ರಾಪ್ತವಾದರೆ, ಪ್ರಪತ್ತಿಯನ್ನು ಅಧಿಕಾರಿ ವಿಶೇಷಣವೆಂದು ಕೆಲವು ಮಹನೀಯರುಗಳೇ ಅಭಿಪ್ರಾಯಪಡುತ್ತಾರಲ್ಲಾ ಅದಕ್ಕೆ ಕಾರಣವೇನೆಂದರೆ ತಿಳಿಸುತ್ತಾರೆ. ಸರ್ವೇಶ್ವರನು ಸಿದ್ಧೋಪಾಯನಾಗಿ ಪ್ರಧಾನೋಪಾಯವು ಸಾಧ್ಯೋಪಾಯವೂ ಸಹ ಒಂದುಂಟು ಎಂದು ಒಪ್ಪಿಕೊಂಡರೆ ಸಿದ್ಧೋಪಾಯಪ್ರಾಧಾನ್ಯಕ್ಕೆ ಎಲ್ಲಿ ನ್ಯೂನತೆ ಬರುತ್ತದೋ ಎಂದು ಪ್ರಪತ್ತಿಯು ಉಪಾಯವಲ್ಲ, ಅಧಿಕಾರಿವಿಶೇಷಣವೆಂದು ಹೇಳಿದರೆಂದು ತಿಳಿಸುತ್ತಾರೆ —**ಇಗ್ಗೈಯಾಲ್** - ಇಂತಹ ಬಾಧಕಗಳು ಉಂಟಾಗುವದರ ವೆಶೆಯಿಂದ, **ಪ್ರಪತ್ತಿಯುಮ್ ಕೂಡ** - ಭರನ್ಯಾಸವೂ ಕೂಡ, **ಉಪಾಯಮನ್ರೆನ್ರು** - ಉಪಾಯವಲ್ಲವೆಂಬದಾಗಿ, **ಶಿಲರ್** - ಕೆಲವರು, **ಅತಿವಾದಮ್ ಪಣ್ಣಾಗಿರದುವ** - ಅತಿವಾದವನ್ನು ಮಾಡುವದೂ, **ಸಿದ್ಧೋಪಾಯತ್ತಿನುಡೈಯ** - ಸಿದ್ಧೋಪಾಯದ, **ಪ್ರಾಧಾನ್ಯಮಡಿಯಾಗ ವಿತ್ತನ್ರೈ** - ಪ್ರಾಧಾನ್ಯದ ಮೂಲಕವಾಗಿ ಮಾತ್ರವೇ, ಹಾಗೆ ಹೇಳುತ್ತಾರೆಂಬ ಭಾವವು. ಆಗಲಿ, ಸರ್ವೇಶ್ವರನೇ ತಾನೇ ಪ್ರಧಾನ ಸಿದ್ಧೋಪಾಯನು ಹೇಗೆ? ಎಂದರೆ ಅನೇಕ ಜನ್ಮಗಳನ್ನೆತ್ತಿದ ರೂ ಮೋಕ್ಷಪ್ರಾಪ್ತಿಗೆ ಪುಣ್ಯಪಾಪರೂಪಾನೇಕ ಪಾಪರಾಶಿಗಳ ಮೂಲಕ ಪ್ರತಿಬಂಧಕವಿದ್ದಿತು, ಇದು ಭಗವನ್ನಿಗ್ರಹ ಮೂಲಕ ಪ್ರತಿಬಂಧಕವಾಗಿತ್ತು. ಅದು ಶಮಿಸಿ ಹೋದರೆ, ಮೋಕ್ಷಪ್ರಾಪ್ತಿಯು ಸ್ವಾಭಾವಿಕವಾಗಿಯೇ ಉಂಟಾಗುತ್ತದೆಂಬ ಭಾವವು. **ಅದು ಪ್ರಧಾನಮಾನಪಡಿ** - ಆ ಸಿದ್ಧೋಪಾಯವು ಮುಖ್ಯವಾದುದು ಏತರಿಂದೆಂದರೆ :—**ಪ್ರತಿಬಂಧಕಮಾನ ನಿಗ್ರಹಂ** - ಭಗವನ್ನಿಗ್ರಹವು ಭಗವದನುಗ್ರಹಕ್ಕೆ ಅಡ್ಡಿಯಾಗಿತ್ತು, ಅದನ್ನು ಈಗ **ಪ್ರಸಾದನಙ್ಗಳಾಲೆ ಶಮಿತ್ತಾಲ್** - ಆತನನ್ನು ಪ್ರಸನ್ನನಾಗಿ ಮಾಡಿಕೊಳ್ಳುವದರಿಂದ ಶಮನ ಹೊಂದುವ ಹಾಗೆ ಮಾಡಿದರೆ, **ಸ್ವಾಭಾವಿಕಾನುಭವತ್ತುಕ್ಕು** - ತನಗೆ ಸಹಜವಾದ ಆಕಾರ

ಪ್ರಾಪ್ತಿಗೆ, **ಪ್ರಯೋಜನವಾಗ್ಯೈಯೂಲೀ**-ಪ್ರಯೋಜನವಾಗುವದರ ಮೂಲಕ ಪ್ರಾಧಾನ್ಯವೆಂಬ ಭಾವವು ಈ ಮೇಲಿನ ವಾಕ್ಯಗಳಿಂದ ಮುಖ್ಯವಾಗಿ ನಮಗೆ ತೋರಿಬರುವದೇನೆಂದರೆ—ಪ್ರತಿಬಂಧಕನಿವೃತ್ತಿಯು ಸಾಧ್ಯೋಪಾಯಗಳಾದ ಭಕ್ತಿಪ್ರಪತ್ತಿಗಳ ಅನುಷ್ಠಾನದ ಮೂಲಕ ಉಂಟಾಗುತ್ತವೆ. ಹಾಗೆ ನಿವೃತ್ತಿಸಲು ಪ್ರಧಾನ ಕಾರಣವು ಶ್ರಿಯಃಪತಿಯ ಕೃಪೆಯು, ಪ್ರಸನ್ನನಾದ ಸರ್ವೇಶ್ವರನು ಸುಪ್ರೀತನಾಗಿ ಪ್ರತಿಬಂಧಕನಿವೃತ್ತಿಯನ್ನುಂಟುಮಾಡುವನು ಆದರಿಂದ ಈ ಅನುಗ್ರಹ ಪೊಂದಿದ ಚೇತನನ ಸ್ವಸ್ವರೂಪಾವಿರ್ಭಾವವು ಉಂಟಾಗಿ ಅನಂತರ ಸರ್ವ ಶ್ರೇಯಸ್ಸೂ ಉಂಟಾಗುತ್ತದೆ. ಆದರೆ ಭಕ್ತಿ ಪ್ರಪತ್ತಿಗಳಿಂದ ಪ್ರತಿಬಂಧಕವು ತೊಲಗಿದರೆ, ಸ್ವಾಭಾವಿಕವಾದ ಆಕಾರದ ಆವಿರ್ಭಾವ ಉಂಟಾದರೆ, ಈಶ್ವರನಿಂದ ಆಗ ಆಗತಕ್ಕದ್ದೇನಿರುತ್ತದೆ? ಆಗ ಆತನು ಸಿದ್ಧೋಪಾಯನಾಗಿ ಪ್ರಧಾನ ಕಾರಣವೆಂಬುದು ದೂರೀಕೃತವಾಗಲಿಲ್ಲವೇ? ಎಂದರೆ ಹಾಗಲ್ಲವು. ಪ್ರತಿಬಂಧಕ ನಿವೃತ್ತಿಗಾಗಿ, ಸಾಧ್ಯೋಪಾಯಗಳಾದ ಭಕ್ತಿಪ್ರಪತ್ತಿಗಳಾದರೋ! ಅಪ್ರಧಾನ ಗಳಾದರೂ ಆವಶ್ಯಕವು. ಆದರೆ ಇವುಗಳೇ ಸಾಕ್ಷಾತ್ತಾಗಿ ಪ್ರತಿಬಂಧಕ ನಿವೃತ್ತಿಯನ್ನುಂಟುಮಾಡಲಾರವು ಅಚಿತ್ತಾದ ಇವುಗಳಿಗೆ ಆ ಶಕ್ತಿಯಿಲ್ಲವು. ಆದರೆ ಇವುಗಳಿಂದ ಸುಪ್ರೀತನಾದ ಶ್ರಿಯಃಪತಿಯು ಈತನ ಪ್ರತಿಬಂಧಕ ಗಳನ್ನು ಹೋಗಲಾಡಿಸಿ, ಅರ್ಚಿರಾದಿ ದ್ವಾರಾ ಸ್ವಸ್ವರೂಪಾವಿರ್ಭಾವ ಮೂಲಕ ತನ್ನನ್ನು ಹೊಂದುವ ಹಾಗೆ ಮಾಡುವನು ಆದುದರಿಂದ ಸರ್ವೇಶ್ವರನು ಪ್ರಧಾನೋಪಾಯವು. ನೀರಿಗೆ ಒಂದು ಅಣೆಯನ್ನು ಕಟ್ಟಿದರೆ, ನೀರು ಪ್ರವಹಿಸಲು ಪ್ರತಿಬಂಧಕವಿರುತ್ತದೆ. ಪ್ರತಿಬಂಧಕವಾದ ಅಣೆಯು ಕಿತ್ತುಹೋದರೆ ನೀರು ಹೇಗೆ ಸ್ವಾಭಾವಿಕವಾಗಿಯೇ ಪ್ರವಹಿಸುತ್ತದೆಯೋ ಹಾಗೆ ಎಂಬ ಭಾವವು. ಈ ದೃಷ್ಟಾಂತದಲ್ಲೂ ಈಶ್ವರನ ಸಿದ್ಧೋಪಾಯತ್ವದ ಹಾಗೆ ಬೇರೆಯೊಂದು ಪ್ರಧಾನೋಪಾಯವು ತೋರಿಬರುವದಿಲ್ಲವಲ್ಲಾ ಎಂದರೆ; ನೀರು ಪ್ರವಹಿಸುವುದಕ್ಕೆ ಬೇಕಾದ ಅನುಕೂಲಗಳಾದ ತಗ್ಗಾದ ಭೂಮಿಯನ್ನುಂಟುಮಾಡುವುದೇ ಮೊದಲಾದವು ಭಗವತ್ಸಂಕಲ್ಪಕ್ಕೆ ಹೇಗೆ ಅಧೀನವೋ, ಹಾಗೆಯೇ ಪರಮಪದ ಗಮನಕ್ಕೂ ಈಶ್ವರನೇ ಪ್ರಧಾನೋಪಾಯವು ಎಂಬ ಭಾವವು ಶ್ರುತಿಗಳೂ ಈ ಅಭಿಪ್ರಾಯವನ್ನೇ ಉಪದೇಶಿಸುತ್ತವೆ —"ಅಮೃತಸ್ಯೈಷಸೇತುಃ" ಸರ್ವೇಶ್ವರನೇ ಮೋಕ್ಷಪ್ರಾಪಕನು, ಅಥವಾ ಸಂಸಾರಾರ್ಣವವನ್ನು ದಾಟಿಸುವವನು, "ಏಷಹ್ಯೇವಾನಂದಯಾತಿ" ಆತನೇ ಆನಂದವನ್ನುಂಟುಮಾಡುವವನು, "ಏಷ ಏವ ಸಾಧು ಕರ್ಮಕಾರಯತಿ" ಈತನೇ ಜೀವಾತ್ಮನಿಂದ ಸಾಧುವಾದ ಕರ್ಮವನ್ನು ಮಾಡಿಸುವನು, "ಯಮೇಭ್ಯೋ ಲೋಕೇಭ್ಯ ಉನ್ನಿನೀಷತಿ" ಯಂ - ಯಾವ ಈ

**ಜಕವಮಾಗೈಯಾಲೇ. ಅದೆಙ್ಙನೇ ಯೆನ್ನಿಲ್— ರತ್ನತ್ತುಕ್ಕು ಅಳಕ್ಕತ್ತಾಲ್ ವರುಮ್ ಸ್ವಾಭಾವಿಕಮಾನ ಪ್ರಭಾವಿಕಾಸಮುಮ್ ಅದುಕ್ಕು ಅನುರೂಪಮಾನ ಭಗವತ್ಸಙ್ಕಲ್ಪ ಮಾತ್ರತ್ತಾಲೇ ಯಾನಾರ್ಪ್ಪೋಲೆ, ಮುಕ್ತನುಕ್ಕುಮ್ ವರುಮ್ ಜ್ಞಾನವಿಕಾಸಾದಿಗಳುಮ್ ಅದುಕ್ಕನುರೂಪಮಾಯ್‌ಕ್ಕೊಂಡು ವ್ಯವಸ್ಥಿತಮಾನ ಭಗವತ್ಸಙ್ಕಲ್ಪ ಮಡಿಯಾಗವಾಯಿ**

---

ಭಕ್ತನನ್ನು **ಏಭ್ಯಲೋಕೇಭ್ಯಃ** - ಅಸ್ಥಿರಗಳಾದ ಈ ಕರ್ಮ ಲೋಕಗಳಿಂದ, **ಉನ್ನಿನೀಷತಿ** - ಕೈ ಹಿಡಿದು ಮೇಲಕ್ಕೆ ಎತ್ತುವನೋ" ಈ ಅಭಿಪ್ರಾಯವನ್ನೇ ಸಮರ್ಥನೆ ಮಾಡಲು ರತ್ನ ದೃಷ್ಟಾಂತವನ್ನು ತಂದಿರುತ್ತಾರೆ, ಹೇಗೆಂದರೆ :— **ರತ್ನತ್ತುಕ್ಕು ಅಳಕ್ಕತ್ತಾಲ್** - ಭೂಮಿಯಲ್ಲಿ ಸಿಕ್ಕಿರುವ ರತ್ನಕ್ಕೆ ಅದರ ಮೇಲಿರುವ ಕೊಳೆಯನ್ನು ತೆಗೆದುಹಾಕಿದರೆ, **ವರುಮ್** - ಉಂಟಾಗುವ, **ಸ್ವಾಭಾವಿಕ**ವಾದ, ಅದರ, **ಪ್ರಭಾ ವಿಕಾಸಮುಮ್** - ಕಾಂತಿಯ ಪ್ರಕಾಶವು, **ಅದುಕ್ಕು** - ಆ ಪ್ರಕಾಶಕ್ಕೆ, **ಅನುರೂಪಮಾನ** - ಯೋಗ್ಯವಾದ, **ಭಗವತ್ಸಙ್ಕಲ್ಪ ಮಾತ್ರತ್ತಾಲೇ ಯಾನಾರ್ಪ್ಪೋಲೆ** - ಭಗವತ್ಸಂಕಲ್ಪಮಾತ್ರದಿಂದಲಾದುದು ಹೇಗೋ, ಹಾಗೆಯೇ ಮುಕ್ತನಿಗೂ ಕೂಡ, **ವರುಮ್** – ಉಂಟಾಗುವ, **ಜ್ಞಾನವಿಕಾಸಾದಿಗಳುಮ್** - ಸ್ವಸ್ವರೂಪಾವಿರ್ಭಾವ ಮೂಲಕ ಪ್ರಾಪ್ತವಾಗುವ ಜ್ಞಾನವಿಕಾಸವೇ ಮೊದಲಾದವುಗಳೂ, ಇಲ್ಲಿ ಆದಿಪದದಿಂದ ಪರಿಪೂರ್ಣಬ್ರಹ್ಮಾನುಭವವೂ ಕೈಂಕರ್ಯ ಪ್ರಾಪ್ತಿಯೂ ಹೇಳಲ್ಪಟ್ಟವು. **ಅದುಕ್ಕನುರೂಪಮಾಯ್‌ಕ್ಕೊಂಡು** - ಆ ಜ್ಞಾನವಿಕಾಸಕ್ಕೆ ಅನುರೂಪವಾಗಿ, ವ್ಯವಸ್ಥಿತವಾದ ಭಗವತ್ಸಂಕಲ್ಪದ. **ಅಡಿಯಾಗವಾಯಿರುಕ್ಕುಮ್** - ಮೂಲಕವಾಗಿರುತ್ತದೆ ರತ್ನದ ಮೇಲಿನ ಕೊಳೆ ಹೋದರೆ ಎಂದರೆ ಸಾಣೆ ಹಿಡಿಯುವುದರ ಮೂಲಕ ಮೇಲಿನ ಮಾಲಿನ್ಯವು ಹೋದರೆ, ಹೇಗೆ ರತ್ನದಲ್ಲೇ ಇದ್ದ ಪ್ರಭೆಯು ಸ್ವಯಂಪ್ರಕಾಶವಾಗಿ ಉಂಟಾದರೂ, ಆ ರತ್ನಕ್ಕೆ ಆ ಪ್ರಭೆಯಿರಲೆಂಬ ಸರ್ವೇಶ್ವರ ಸಂಕಲ್ಪವು ಹೇಗೆ ಪ್ರಧಾನ ಕಾರಣವೋ, ಹಾಗೆಯೇ ಇಲ್ಲೂ ಕೂಡ, ಈ ಜೀವಾತ್ಮನಿಗೆ ಕರ್ಮ ಮೂಲಕ ಈತನ ಜ್ಞಾನವಿಕಾಸವು ತಿರೋಧಾನವನ್ನು ಹೊಂದಿದ್ದುದು ಈಗ ಕರ್ಮವೆಲ್ಲಾ ತೊಲಗಿದುದರಿಂದ ಸ್ವಸ್ವರೂಪಾವಿರ್ಭಾವವು ಉಂಟಾದರೂ, ಅದು ಸರ್ವೇಶ್ವರ ಸಂಕಲ್ಪ ಮೂಲಕ ಉಂಟಾದುದರಿಂದ ಸರ್ವೇಶ್ವರನೇ ಪ್ರಧಾನೋಪಾಯವೆಂಬ ಭಾವವು. ಮುಕ್ತರ ವಿಷಯದಲ್ಲೇನೋ ಪರಮಾತ್ಮ ಸಂಕಲ್ಪ ಮೂಲಕ ಜ್ಞಾನ ತಿರೋಧಾನವು ತಪ್ಪಿ ಜ್ಞಾನವಿಕಾಸ ಉಂಟಾಗುತ್ತದೆ. ನಿತ್ಯರಿಗಾದರೋ ಜ್ಞಾನ

ರುಕ್ಕುಮ್. ಇಪ್ಪಡಿ ನಿತ್ಯರ್ಕ್ಕುಮ್. ಇವ್ವರ್ಥತ್ತೈ (೧) "ಇಚ್ಛಾತ ಏವ ತವ ವಿಶ್ವ ಪದಾರ್ಥಸತ್ತಾ" ಎನ್ರು ಅಭಿಯುಕ್ತರ್ ಸಙ್ಗ್ರಹಿತ್ತಾರ್ಗಳ್. ಆಗೈಯಾಲ್ ಸಿದ್ಧೋಪಾಯಮ್ ಪ್ರಧಾನಮೋಯಾಗಿಲುಮ್, ತದ್ವಶೀ

---

ವಿಕಾಸಾದಿಗಳು ಅನಾದಿಯಾಗಿ ಉಂಟಲ್ಲಾ ಅದು ಈಶ್ವರ ಸಂಕಲ್ಪಕ್ಕೆ ಅಧೀನ ಹೇಗೆ ? ಎಂಬಾಕ್ಷೇಪವು ಉಂಟಾದೀತೆಂದು ಭಾವಿಸಿ ಹೇಳುತ್ತಾರೆ. "ಇಪ್ಪಡಿ ನಿತ್ಯರ್ಕ್ಕುಮ್" ಎಂಬ ವಾಕ್ಯದ ಮೂಲಕ ನಿತ್ಯರಿಗೂ ಜ್ಞಾನವಿಕಾಸಾದಿಗಳು ಅನಾದಿಯಾಗಿ ಉಂಟಾಗಿರುವುದೂ ಕೂಡ ಆತನ ನಿತ್ಯವಾಗಿರಬೇಕೆಂಬ ಸಂಕಲ್ಪದ ಮೂಲಕವೇ ಎಂದು ಹೇಳುತ್ತಾರೆ. ಈ ಅಭಿಪ್ರಾಯವು ಹಿಂದೆ ಪ್ರಧಾನಪ್ರತಿತಂತ್ರಾಧಿಕಾರದಲ್ಲೇ "ನಿತ್ಯಙ್ಗಳ್ ನಿತ್ಯೇಚ್ಛಾಸಿದ್ಧಙ್ಗಳ್" ಎಂದು ಹೇಳಲ್ಪಟ್ಟಿರುತ್ತದೆ. (...ನೆಯ ಪುಟ ನೋಡಿ) ಇವ್ವರ್ಥತ್ತೈ - ಈ ಅಭಿಪ್ರಾಯವನ್ನು "ಇಚ್ಛಾತ ಏವ" ಎನ್ರು - ಎಂಬದಾಗಿ, ಅಭಿಯುಕ್ತರ್ - ಪೂಜಾರ್ಹರಾದ ಕೂರತ್ತಾಳ್ವಾರ್ರವರು ಸಂಗ್ರಹಿಸಿದರು ಈ "ಇಚ್ಛಾತ ಏವ" ಎಂಬ ಪೂರಾ ಶ್ಲೋಕಕ್ಕೂ ಅದರ ತಾತ್ಪರ್ಯಕ್ಕೂ ಹಿಂದೆ ೨೬೬ನೆಯ ಪುಟವನ್ನು ಪರಾಂಬರಿಸಿ

ಇಷ್ಟುದೂರ ಉಪಪಾದನೆಯನ್ನು ಮಾಡಿ, ತಾವು ತುಂಬಾ ವಿಶದವಾಗಿ ಉಪದೇಶಿಸಿದ ಸಾಧ್ಯೋಪಾಯವು ಅಪ್ರಧಾನವಾಗಿ ವ್ಯಾಜರೂಪವಾದರೂ ಅವಶ್ಯಕವಾಗಿ ಕರ್ತವ್ಯವು ಎಂಬ ಸಿದ್ಧಾಂತವನ್ನು ಸ್ಥಾಪಿಸಿ ನಿಗಮನ ಮಾಡಿ "ಆಗೈಯಾಲ್" ಎಂಬ ವಾಕ್ಯಮೂಲಕ ಹೇಳುತ್ತಾರೆ. ಹಿಂದೆ ನಮ್ಮಾಳ್ವಾರ್ ಪಾಶುರವಾದ "ಇನ್ರ್ನ್ನೈ" ಎಂಬುವಕ್ಕೆ ವಿರುದ್ಧಾರ್ಥವನ್ನು ಕಲ್ಪಿಸಿ ಹೇಳಿದುದು ಸರಿಯಲ್ಲವೆಂದೂ, ಶ್ರೀ ನಮ್ಮಾಳ್ವಾರ್ರವರ ಅಭಿಪ್ರಾಯವು ಹಾಗಲ್ಲವೆಂದೂ, ಪೂರ್ವಾಚಾರ್ಯರುಗಳ ವಾಕ್ಯಕ್ಕೆ ಅದು ವಿರುದ್ಧವಲ್ಲವೆಂದೂ ಹೇಳಿ, ಈ ವಿಷಯವನ್ನು ಮುಗಿಸುತ್ತಾರೆ —ಆಗೈಯಾಲ್ - ಈಗ ತಾವು ಉಪದೇಶಿಸಿರುವುದು ಅಭಿಯುಕ್ತರ ಅಭಿಪ್ರಾಯಕ್ಕೆ ಅನುಗುಣವಾದುದರಿಂದ, ಸಿದ್ಧೋಪಾಯಮ್ ಪ್ರಧಾನಮೋಯಾಗಿಲುಮ್ - ಸಿದ್ಧೋಪಾಯನಾದ ಭಗವಂತನು ಮುಖ್ಯನಾದುದಾದರೂ, ತದ್ವಶೀಕರಣಾರ್ಥಮಾನ - ಆತನನ್ನು ನಮ್ಮ ವಶಮಾಡಿಕೊಳ್ಳಲು ಉಪಯುಕ್ತವಾದ, ಸಾಧ್ಯೋಪಾಯಾನುಷ್ಠಾನತ್ತುಕ್ಕು - ಭಗವದನುಗ್ರಹವನ್ನು ಸಾಧಿಸಿಕೊಡುವ ಉಪಾಯುಗಳಾದ ಭಕ್ತಿಪ್ರಪತ್ತಿಗಳ ಅನುಷ್ಠಾನಕ್ಕೆ, ಇನ್ರ್ನ್ನೈ

---

(೧) ಶ್ರೀ ವೈಕುಂಠಸ್ತವ ೩೭.

ಕರಣಾರ್ಥವಾನ ಸಾಧ್ಯೋಪಾಯಾನುಷ್ಠಾನತ್ತುಕ್ಕು "ಇನ್ರೈನ್ನೈ" ಇತ್ಯಾದಿ ಪೂರ್ವಾಚಾರ್ಯವಾಕ್ಯವಿರೋಧಮಿಲ್ಲೈ.

ಜೀವಪಾರತಂತ್ರ್ಯೇ ಪ್ರಮಾಣಾನಿ, ಸಾಧ್ಯೋಪಾಯಂ ನನಿರಾಕುರ್ವಂತಿ.

(೧) "ಯೋಮೇ ಗರ್ಭಗತಸ್ಯಾಪಿ ವೃತ್ತಿಂ ಕಲ್ಪಿತವಾನ್ ಪ್ರಭುಃ ।

---

ಇತ್ಯಾದಿ ಪೂರ್ವಾಚಾರ್ಯರುಗಳ ವಾಕ್ಯಗಳ ವಿರೋಧವು ಇಲ್ಲವು ಯದ್ಯಪಿ ಸ್ವಾಮಿ ಸಂಕಲ್ಪವಿಲ್ಲದೆ "ತೇನ ವಿನಾತೃಣಮಪಿ ನ ಚಲತಿ" ಎಂದು ಹೇಳಿರುವಹಾಗೆ ಈ ಪೃಥ್ವಿಯಲ್ಲಿಯಾಗಲಿ ನಿತ್ಯವಿಭೂತಿಯಲ್ಲಿಯಾಗಲಿ ಎಲ್ಲಿಯೂ ಏನೊಂದೂ ನಡೆಯುವದಿಲ್ಲವು. ಆದರೆ ಈ ಚೇತನನಿಗೆ ಸ್ವಾಮಿ ಸಂಕಲ್ಪವು ಫಲಿಸಬೇಕಾದರೆ ಈತನ ಲಘು ವ್ಯಾಪಾರವು ಅಲ್ಪವಾದರೂ, ಅದರಿಂದ ಸಂಪ್ರೀತನಾಗಿ ಮಾಡುವನೇ ವಿನಾ ಅದಿಲ್ಲದೆ ಮಾಡುವದಿಲ್ಲವು. ಈ ಅಲ್ಪವ್ಯಾಪಾರವು ಆತನ ವಶೀಕರಣಾರ್ಥವಾದುದು ಇಲ್ಲಿ ತದ್ವಶೀಕರಣಾರ್ಥವೆಂದು ಪ್ರಯೋಗಿಸಿರುವದು ಶ್ರೀ ಭಾಷ್ಯಕಾರರ ವಾಕ್ಯವಾದ "ತಸ್ಯ ಚ ವಶೀಕರಣಂ ತಚ್ಛರಣಾಗತಿರೇವ" ಎಂದು ವಶೀಕರಣ ಪರಂಪರೆಯಂ ಕುರಿತ ಶ್ರುತ್ಯರ್ಥವನ್ನುಪಪಾದಿಸುವ ವಾಕ್ಯಸ್ಮರಣರೂಪವಾದುದೆಂದು ಭಾವಿಸತಕ್ಕದ್ದು ಆದುದರಿಂದ ಶಾಸ್ತ್ರವಿಧ್ಯುಕ್ತಗಳಿಗನುಸಾರವಾಗಿ ಸರ್ವೇಶ್ವರನು ತಾನು ಪ್ರಧಾನೋಪಾಯನಾದರೂ ಈ ಶರಣಾಗತಿರೂಪ ಭರನ್ಯಾಸಾನುಷ್ಠಾನವನ್ನು ಎದುರು ನೋಡುವನು ಇದಿಲ್ಲದೆ ಆತನು ರಕ್ಷಿಸನು. ಏತಕ್ಕೆಂದರೆ ಈತನಿಗೆ "ಕರ್ತಾ ಶಾಸ್ತ್ರಾರ್ಥವತ್ವಾತ್" ಎಂಬ ಸೂತ್ರದಲ್ಲಿ ಹೇಳಿರುವ ಹಾಗೆ ಕರ್ತೃತ್ವವನ್ನು ಕೊಟ್ಟಿರುವನು. ಈ "ಕಥಂಚಿದುಪಕಾರ" ದಿಂದ ಕೃತೇನೈಕೇನ ತುಷ್ಯತಿ ಎಂದು ಹೇಳಿರುವ ಹಾಗೆ ಪ್ರೀತಿಯನ್ನು ಹೊಂದಿ ಅನುಗ್ರಹ ಮಾಡುವನು. ಗೀತೆಯೂ ಕೂಡ ಪ್ರತಿಯೊಂದು ಪ್ರಯೋಜನಕ್ಕೂ ಕರ್ತಾವಿನ ಚೇಷ್ಟೆಯೂ, ದೈವಸಙ್ಕಲ್ಪವೂ ಎರಡೂ ಆವಶ್ಯಕವೆಂದು "ಅಧಿಷ್ಠಾನಂ ತಥಾಕರ್ತಾ" ಎಂದು ಆರಂಭಿಸಿ ಹೇಳಿರುತ್ತದೆ. ನಮ್ಮ ಕರ್ತವ್ಯವೇನೂ ಇಲ್ಲದೆ ಸರ್ವೇಶ್ವರನೇ ನಡೆಸುತ್ತಾನೆ ಎಂದರೆ ಕರಣಕಳೇಬರಯೋಗವು ಕರ್ಮಾನುಭವಕ್ಕೆ ಮಾತ್ರವೇ ವಿನಾ ಸುಸಾಧನೆಯ ವಿಷಯದಲ್ಲಿ ನಿಷ್ಪ್ರಯೋಜನವಾದುದೆಂದು ಏರ್ಪಡುತ್ತದೆ ಆಗ ಶಾಸ್ತ್ರವೈಯರ್ಥ್ಯವೂ, ಆಚಾರ್ಯ ನಿರಪೇಕ್ಷೆಯೂ ಉಂಟಾಗುತ್ತದೆ ಚರಮಶ್ಲೋಕದಲ್ಲಿ ಶರಣಾಗತಿ ಮಾಡಿದರೇನೇ ಪಾಪಗಳಿಂದ ಬಿಡುಗಡೆಯೆಂದು ಕಂಠೋಕ್ತವಾಗಿ ಶ್ರೀ ಕೃಷ್ಣ

ಶೇಷವೃತ್ತಿ ವಿಧಾನೇಽಪಿ ಕಿಂ ಸುಪ್ತಸ್ಸ್ವೋಥವಾಗತಃ ||" ಇತ್ಯಾದಿಗಳುಮ್ ರಕ್ಷಕಾಂತರಂ ತೇಡಾವ್ಮೈಕ್ಕುಚ್ಚೊನ್ನವೈ ಯತ್ತನ್ನೈ. ಅಲ್ಲಾದಪ್ಪೋದು

---

ಭಗವಾರ್ರವರು ಉಪದೇಶಿಸುತ್ತಾರೆ ಆದುದರಿಂದ ಈ ಸಾಧ್ಯೋಪಾಯವು ವ್ಯಾಜರೂಪವಾದರೂ ಆವಶ್ಯಕವಾಗಿ ಅನುಷ್ಠಿಸತಕ್ಕದ್ದೆಂದು ಸ್ಥಾಪಿಸಿರುತ್ತಾರೆ.

**ಜೀವಪಾರತಂತ್ರ್ಯವನ್ನು ಹೇಳುವ ಪ್ರಮಾಣಗಳೇನೂ ಸಾಧ್ಯೋಪಾಯವನ್ನು ನಿರಾಕರಿಸುವದಿಲ್ಲವು.**

---

(೧) **ಯಃ** – ಯಾವ ಪ್ರಸಿದ್ಧನಾದ, **ಪ್ರಭುಃ** – ಸರ್ವ ಶಕ್ತನಾದ ಸರ್ವೇಶ್ವರನು, **ಮೇ** – ಪರತಂತ್ರನಾದ ನನಗೆ, **ಗರ್ಭಗತಸ್ಯಾಪಿ** – ತಾಯಿಯ ಉದರದಲ್ಲಿರುವಾಗಲೇ, **ವೃತ್ತಿಂ** – ಜೀವನೋಪಾಯವನ್ನು, **ಕಲ್ಪಿತವಾನ್** – ನನ್ನ ಕರ್ಮಾನುಗುಣವಾಗಿ ತನ್ನ ಸಂಕಲ್ಪ ಮೂಲಕವಾಗಿಯೇ ಉಂಟುಮಾಡಿದನೋ, **ಸಃ** (ಎಂದು ಇಟ್ಟುಕೊಳ್ಳತಕ್ಕದ್ದು) – ಅಂತಹ ಸ್ವಾಮಿಯು, **ಶೇಷವೃತ್ತಿ ವಿಧಾನೇಽಪಿ** – ಇಂತಹ ಪರತಂತ್ರರೂಪವಾದ ಬಾಲ್ಯಾದಿ ಜೀವಮಾನ ದೆಶೆಯ ವ್ಯಾಪಾರಗಳನ್ನು ಮಾಡಿಸುವುದರಲ್ಲೂ ಕೂಡ, **ಕಿಂ ಸುಪ್ತಃ** – ಏನಾದರೂ ಮಲಗಿಬಿಟ್ಟನೇನು ? **ಅಥವಾ ಗತಃ** – ಅಥವಾ ಎಲ್ಲಿಯಾದರೂ ದೇಶಾಂತರಕ್ಕೆ ಹೋದನೇನು ? ಎಂದರೆ ಅವನೇನೂ ಮಲಗಲೂ ಇಲ್ಲವು, ಎಲ್ಲಿಯೂ ಓಡಿಹೋಗಲೂ ಇಲ್ಲವು, ಅವನೇ ಜಾಗರೂಕನಾಗಿ ನಿಂತು ಎಲ್ಲವನ್ನೂ ಈ ಜೀವಮಾನ ಕಾಲದಲ್ಲೂ ನಡಿಸಿಕೊಡುತ್ತಾನೆಂಬ ಭಾವವು.'' **ಇತ್ಯಾದಿಗಳುಮ್** – ಇವೇ ಮೊದಲಾದ ಪ್ರಮಾಣಗಳು, **ರಕ್ಷಕಾಂತರಂ ತೇಡಾವ್ಮೈಕ್ಕು** – ಬೇರೇ ರಕ್ಷಕನನ್ನು ಹುಡುಕಿಕೊಂಡು ಹೋಗದೇ ಇರುವುದಕ್ಕಾಗಿ, **ಚೊನ್ನವೈ ಯತ್ತನ್ನೈ** – ಹೇಳಲ್ಪಟ್ಟವೇ ವಿನಾ ಬೇರೆಯಲ್ಲವು. ಯಾವಾಗ ತಾಯಿಯ ಗರ್ಭದಲ್ಲಿರುವಾಗಲೇ ಈತನ ಕರ್ಮಾನುಗುಣ ಈತನ ವೃತ್ತಿಯನ್ನು ಕಲ್ಪಿಸಿದನೋ ಅವನೇ ಜೀವಮಾನ ಕಾಲದಲ್ಲೂ ನಿಂತು ನಡೆಸಿಕೊಡುವನು ಹೀಗಿರುವಲ್ಲಿ ಅನ್ಯದೇವತೆಗಳನ್ನು ಕುರಿತು ಹುಡುಕಿಕೊಂಡು ಹೋಗುವುದೇತಕ್ಕೆ ಎಂಬ ಭಾವವು. ಇದರಿಂದ ಸ್ವಾಮಿ ಸಂಕಲ್ಪರೀತ್ಯಾ ನಡೆಯುವುದರಿಂದ ನಾವು ಮಾಡತಕ್ಕದ್ದೇನಿದೆ ? ಶಿಶುವಾಗಿ ಜ್ಞಾನವಿಲ್ಲದಿರುವ ಕಾಲದಲ್ಲಿ ಹೇಗೆ ರಕ್ಷಿಸಿದನೋ ಹಾಗೆಯೇ ಈಗಲೂ ರಕ್ಷಿಸುವನೆಂದು ತಟಸ್ಥನಾಗಿರದೆ, ಸರ್ವೇಶ್ವರನಲ್ಲೇ ಸರ್ವ ಭರವನ್ನೂ ಇಟ್ಟು ಇಹ

---

(೧) ವಿಷ್ಣುಧರ್ಮಮ್.

ಭೋಜನಾದಿ ವ್ಯಾಪಾರಙ್ಗಳುಮ್ ತವಿರವೇಣುಮ್. (೨) "ಸ್ವಯಂ ಮೃತ್ಪಿಂಡ ಭೂತಸ್ಯ ಪರತಂತ್ರಸ್ಯ ದೇಹಿನಃ," (೩) "ಲಜ್ಞೋಜಂತು

---

ಲೋಕ ಪಾರಲೌಕಿಕ ಸುಖಗಳಿಗಾಗಿ ಸರ್ವ ಪ್ರಯತ್ನವನ್ನೂ ಮಾಡತಕ್ಕದ್ದೆಂಬ ಭಾವವು. ಅಲ್ಲಾದಪ್ಪೋದು - ಹೀಗಲ್ಲದಿದ್ದರೆ, ಎಂದರೆ "ದೈವಮೇವ ಪರಂ ಮನ್ಯೇ ಪೌರುಷಂತು ನಿರರ್ಥಕಮ್" ದೈವಸಂಕಲ್ಪವೇ ಪ್ರಧಾನವು, ನಮ್ಮ ಪೌರುಷವೂ, ಸಾಹಸವೂ ನಿರರ್ಥಕವಾದುದು ಎಂದು ಹೇಳಿರುವ ಹಾಗೆ, ಸರ್ವೇಶ್ವರನೇ ಎಲ್ಲವನ್ನೂ ನಡೆಸಿಕೊಡುವನು, ನಮ್ಮ ಪ್ರಯತ್ನವು ವ್ಯರ್ಥವು, ಎಂದು ಅಭಿಪ್ರಾಯಪಟ್ಟರೆ, ಭೋಜನ ಮೊದಲಾದ ವ್ಯಾಪಾರಗಳೂ, ತವಿರವೇಣುಮ್- ಬಿಡತಕ್ಕವುಗಳಾಗುವುವು ಆದುದರಿಂದ ಇವನಿಗೆ ಕರಣಕಳೇಬರ ಯೋಗವನ್ನುಂಟುಮಾಡಿರುವುದರಿಂದ, ಇವನು ಸರ್ವ ಪ್ರಯತ್ನವನ್ನೂ ಮಾಡಿಯೇ ತೀರಬೇಕು ಅದು ಫಲಕಾರಿಯಾಗಬೇಕಾದರೆ ದೈವಾನುಗ್ರಹವಿರಬೇಕು ದೈವಮೇವ ಪರಂಮನ್ಯೇ ಎಂಬದಾಗಿ ಮೇಲೆ ಉದಾಹರಿಸಿರುವ ವಾಕ್ಯಾಭಿಪ್ರಾಯವೂ ಕೂಡ ಬರೀ ಮನುಷ್ಯ ಪ್ರಯತ್ನವು ದೈವಾನುಕೂಲವಿಲ್ಲದೆ ನಿರರ್ಥಕವೆಂಬ ಭಾವವು ಇದರಿಂದ ಮನುಷ್ಯ ಪ್ರಯತ್ನವು ಬೇಡವೆಂಬಭಿಪ್ರಾಯವಲ್ಲವು. ಇನ್ನೂ ಇಂತಹ ಅನೇಕ ಪ್ರಮಾಣಗಳುಂಟು. ಅಲ್ಲೆಲ್ಲಾ ಹೀಗೆಯೇ ಅಭಿಪ್ರಾಯವೇ ವಿನಾ, ಚೇತನನು ಏನನ್ನೂ ಮಾಡದೆ ಸ್ವತನ್ನ ಪಾರತಂತ್ರ್ಯದಿಂದ ದೀನನಾಗಿ ಅವಸಾದದಿಂದ ತಟಸ್ಥನಾಗಿರತಕ್ಕದ್ದಲ್ಲವೆಂದು ತಿಳಿಸುವುದಕ್ಕಾಗಿ, ಇತಿಹಾಸ ಸಮುಚ್ಚಯದಿಂದಲೂ ಶ್ರೀ ಭಾರತದಿಂದಲೂ ಉದಾಹರಿಸುತ್ತಾರೆ.

(೨) ಇದು ಪೂರ್ವಾರ್ಧವು ಉತ್ತರಾರ್ಧವು —"ಸ್ವರಕ್ಷಣೇಪ್ಯಶಕ್ತಸ್ಯ ಕೋಹೇತುಃ ಪರರಕ್ಷಣೇ" ಎಂದಿರುತ್ತದೆ. ಸ್ವಯಂ - ತಾನೇ, ಮೃತ್ಪಿಂಡ ಭೂತಸ್ಯ - ಮಣ್ಣಿನ ಮುದ್ದೆಯ ಹಾಗಿರುವ ಎಂದರೆ ಸ್ವತಂತ್ರಿಸಿ ಏನನ್ನೂ ಮಾಡಲಶಕ್ತನಾದ, ಪರತಂತ್ರಸ್ಯ - ಹೀಗೆ ಸರ್ವೇಶನಿಗೆ ಅಧೀನನಾದ, ದೇಹಿನಃ - ಚೇತನರೂಪವನ್ನು ಮಾತ್ರ ಹೊಂದಿರುವ, ಸ್ವರಕ್ಷಣೇಪ್ಯಶಕ್ತಸ್ಯ - ತನ್ನನ್ನು ರಕ್ಷಿಸಿಕೊಳ್ಳುವುದಕ್ಕೆ ಶಕ್ತಿಯಿಲ್ಲದವನಿಗೆ, ಪರರಕ್ಷಣೇ - ಇತರರನ್ನು ರಕ್ಷಿಸುವದರಲ್ಲಿ, ಕೋ ಹೇತುಃ – ಹೇಗೆ ಶಕ್ತನಾದಾನು ? ಎಂದಿಗೂ ಆಗಲಾರನೆಂಬ ಭಾವವು ಇದರಿಂದಲೂ ಈತನ ಪ್ರಯತ್ನ ಮಾತ್ರವೇ ನಿರರ್ಥಕವು, ಸ್ವಾಮಿಯ ಸಹಾಯವಿಲ್ಲದೆ ಈತನು ಏನನ್ನೂ ಮಾಡಲು ಸಾಮರ್ಥ್ಯವಿಲ್ಲವೆಂಬ ಭಾವವು.

---

(೨) ಇತಿಹಾಸ ಸಮುಚ್ಚಯಂ ೧೯. ೯೭. (೩) ಭಾರತ ಶಾಂತಿ. ೧೨. ೩೬.

ರನೀಶೋಽಯ ಮಾತ್ಮನಸ್ಸುಖದುಃಖಯೋಃ । ಈಶ್ವರಪ್ರೇರಿತೋಗಚ್ಛೇತ್ಸ್ವರ್ಗಂ ವಾ ಶ್ವಭ್ರಮೇವ ವಾ" (೪) "ಅಪ್ರಮೇಯೋಽನಿಯೋಜ್ಯಶ್ಚ ಯತ್ರಕಾಮಗಮೋವಶೀ । ಮೋದತೇ ಭಗವಾನ್ ಭೂತೈರ್ಬಾಲಃ ಕ್ರೀಡನಕೈರಿವ" ಇತ್ಯಾದಿಗಳಿಲ್ ಜೀವನುಡೈಯ ಪಾರತಂತ್ರ್ಯಮುಮ್,

(೩) ಇದು ನಕುಲನು ಯುಧಿಷ್ಠಿರನನ್ನು ಕುರಿತು ಹೇಳುವ ವಾಕ್ಯವು. ಜಂತುಃ - ಈ ಜನ್ಮವೆತ್ತಿದ ಪ್ರಾಣಿಯು, ಅಜ್ಞಃ - ತನ್ನ ಹಿತಾಹಿತಗಳನ್ನು ತಿಳಿಯದವನು ಅಥವಾ ತನ್ನ ಸ್ವರೂಪ ಪರಸ್ವರೂಪಾದಿಗಳನ್ನು ತಿಳಿಯದವನು, ಆತ್ಮನಃ - ತನ್ನ, ಸುಖದುಃಖಯೋಃ – ಸುಖದುಃಖಗಳ ವಿಷಯದಲ್ಲಿ, ಅಯಂ - ಈತನು, ಅನೀಶಃ–ಅಸ್ವತಂತ್ರನು, ಈಶ್ವರ ಪ್ರೇರಿತಃ–ಈಶ್ವರನಿಂದ ಪ್ರೇರಿತನಾಗಿ, ಸ್ವರ್ಗಂವಾ - ಸ್ವರ್ಗವನ್ನಾಗಲಿ ಕುರಿತು, ಗಚ್ಛೇತ್ – ಹೋಗುವನು, ಅಥವಾ ಶ್ವಭ್ರಮೇವವಾ-ನರಕ ಗುಂಡಿಯನ್ನಾಗಲಿ ಕುರಿತು, ಗಚ್ಛೇತ್-ಹೋಗುವನು. ಇಲ್ಲಿಯೂ ಈಶ್ವರ ಸಂಕಲ್ಪಾಧೀನವಾಗಿಯೇ ಸುಖದುಃಖಗಳ ಪ್ರಾಪ್ತಿಯೂ, ಸ್ವರ್ಗವನ್ನಾಗಲಿ ನರಕವನ್ನಾಗಲಿ ಕುರಿತು ಪ್ರಯಾಣಮಾಡುವನು ಎಂಬದಾಗಿ ಹೇಳಲ್ಪಟ್ಟಿರುತ್ತದೆ. "ಅನೀಶೋಽಯಮಾತ್ಮನಃ" ಎಂಬುದಕ್ಕೆ "ಅನೀಶಶ್ಚ ಭಾಜನಂ" ಎಂಬುದು ಪಾಠಾಂತರವು

(೪) "ಅಪ್ರಮೇಯಃ–ಪರಿಪೂರ್ಣನಾದವನು, ಅನಿಯೋಜ್ಯಃ ತಾನು ಸಮಸ್ತವನ್ನೂ ನಿಯಮಿಸುವನಾಗಿ, ತಾನು ಮಾತ್ರ ಯಾರಿಂದಲೂ ನಿಯಮಿಸಲ್ಪಡದವನು, ಯತ್ರಕಾಮಗಮಃ - ಎಲ್ಲಿ ಇಷ್ಟ ಉಂಟೋ ಅಲ್ಲಿಗೆ ಹೋಗುವ ಶಕ್ತಿಯುಳ್ಳವನು, ವಶೀ - ಸರ್ವವನ್ನೂ ತನ್ನ ವಶದಲ್ಲಿಟ್ಟುಕೊಳ್ಳುವವನು, ತನ್ನ ಸ್ವಾಧೀನದಲ್ಲಿಟ್ಟುಕೊಳ್ಳುವವನು, ಹೀಗೆ ಸರ್ವೇಶ್ವರನಾಗಿ ಲೋಕನಾಯಕನಾಗಿದ್ದರೂ, ಭಗವಾನ್ - ಷಾಡ್ಗುಣ್ಯಪರಿಪೂರ್ಣನಾದ ಭಗವಂತನು, ಭೂತೈಃ - ಸಮಸ್ತ ಚಿದಚಿದ್ವರ್ಗದಿಂದಲೂ, ಹೇಗೆ, ಬಾಲಃ - ಚಿಕ್ಕ ಬಾಲಕನು, ಕ್ರೀಡನಕೈಃ - ಆಟದ ಸಾಮಾನುಗಳಿಂದ, ಮೋದತೇ - ಸಂತೋಷಪಡುತ್ತಾನೋ, ಹಾಗೆಯೇ, ಮೋದತೇ – ಲೀಲಾಸಕ್ತನಾಗಿ ಸಂತೋಷಪಡುತ್ತಾನೆ ಇಲ್ಲಿ ಎಲ್ಲಾ ಚಿದಚಿತ್ತುಗಳೂ ಸರ್ವೇಶ್ವರನಿಗೆ ನಿಯಾಮ್ಯ ವರ್ಗಕ್ಕೆ ಸೇರಿದುದಾಗಿ ಆತನಿಗೆ ಅಧೀನವಾದವುಗಳೆಂದು ಹೇಳಿರುವುದರಿಂದ ಪಾರತಂತ್ರ್ಯವು ಬೋಧಿಸಲ್ಪಟ್ಟಿತು." ಇತ್ಯಾದಿಗಳಿಲ್ - ಇವೇ ಮೊದಲಾದ ಪ್ರಮಾಣಗಳಲ್ಲಿ ಜೀವನ

(೪) ಭಾರತ ಸಭಾ. ೪೦. ೭೮.

**ಈಶ್ವರನ್ ಇವನುಡೈಯ ಕರ್ಮಾನುಗುಣಮಾಗ ನಡತ್ತುಮ್ ಪಡಿಯೈಯುಮ್ ಶೊನ್ನವಿತ್ತನೈ. ಇಪ್ಪಾಟ್ಟುಕ್ಕುಮ್ ಇವ್ವಚನಙ್ಗಳುಕ್ಕುಮ್ ಇಪ್ಪಡಿ ತಾತ್ಪರ್ಯಮಿಲ್ಲಾದ ಪೋದು ಸರ್ವ ಶಾಸ್ತ್ರ ವಿರೋಧಮುಮ್**

---

ಪಾರತಂತ್ರ್ಯವೂ ಮತ್ತು, **ಈಶ್ವರನ್** – ಸರ್ವೇಶ್ವರನು, **ಇವನುಡೈಯ** - ಈ ಚೇತನನ, **ಕರ್ಮಾನುಗುಣಮಾಗ** – ಕರ್ಮಾನುಸಾರವಾಗಿ, **ನಡತ್ತುಮ್ ಪಡಿಯೈಯುಮ್** – ನಡೆಸುವ ಪ್ರಕಾರವನ್ನೂ, **ಶೊನ್ನವಿತ್ತನೈ**-ಹೇಳಿದವು ಅಷ್ಟು ಮಾತ್ರವೇ ವಿನಾ ಅನ್ಯಥಾ ಅಲ್ಲವೆಂಬ ಭಾವವು, ಎಂದರೆ ಜೀವಾತ್ಮನ ಕರ್ತೃತ್ವಾಂಶವೇ ಬೇಕಾಗಿಲ್ಲವೆಂದೇನೂ ಬೋಧಿಸಲಿಲ್ಲವೆಂಬ ಭಾವವು **ಇಪ್ಪಾಟ್ಟುಕ್ಕು** - ಈ ಇನ್ರುನ್ನೈ ಎಂದು ಮೇಲೆ ಉದಾಹರಿಸಿರುವ ನಮ್ಮಾಳ್ವಾರ್ರವರ ಪಾಶುರಕ್ಕೂ, **ಇವ್ವಚನಙ್ಗಳುಕ್ಕುಮ್**|- ಈ ಮೇಲೆ ಉದಾಹರಿಸಿರುವ ಮಹರ್ಷಿಗಳ ವಚನಗಳಿಗೂ, **ಇಪ್ಪಡಿ ತಾತ್ಪರ್ಯಮಲ್ಲಾದಪೋದು**- ಈಗ ತಾವು ಉಪದೇಶಿಸಿದ ಅಭಿಪ್ರಾಯವು ಅಲ್ಲವೆಂದರೆ, ಸರ್ವಶಾಸ್ತ್ರಗಳ ವಿರೋಧವೂ, **ಪೂರ್ವಾಪರ ವಿರೋಧಮುಮ್** - ಒಂದು ಶಾಸ್ತ್ರದಲ್ಲೇ ಮೊದಲು ಹೇಳಿದುದಕ್ಕೆ ಆಮೇಲೆ ಹೇಳಿದುದರ ವಿರೋಧವೂ, **ವರುಮ್** - ಪ್ರಾಪ್ತವಾಗುವುದು ಶಾಸ್ತ್ರವಿರೋಧ ಹೇಗೆಂದರೆ, "**ಆತ್ಮಾನಂ ಮಯಿ ನಿಕ್ಷಿಪೇತ್**", "**ಓಮಿತ್ಯಾತ್ಮಾನಂ ಮಯಿ ನಿಕ್ಷಿಪೇತ್**" ಇತ್ಯಾದಿ ಶ್ರುತಿವಿರೋಧವೂ, (೧) "**ಕರ್ತಾ ಶಾಸ್ತ್ರಾರ್ಥವತ್ವಾತ್,**" (೨) "**ಕೃತಪ್ರಯತ್ನಾಪೇಕ್ಷಸ್ತು ವಿಹಿತ ಪ್ರತಿಷಿದ್ಧ ವೈಯರ್ಥ್ಯಾದಿಭ್ಯಃ,**" (೩) "**ವೈಷಮ್ಯ ನೈರ್ಘೃಣ್ಯೇನ ಸಾಪೇಕ್ಷತ್ವಾತ್, ತಥಾಹಿ ದರ್ಶಯತಿ**" ಇತ್ಯಾದಿ ಸೂತ್ರಗಳ ವಿರೋಧವೂ "**ಮಾಮೇಕಂ ಶರಣಂ ವ್ರಜ**" ಇತ್ಯಾದಿ ಸ್ಮೃತಿ ವಿರೋಧವೂ, "**ಲಕ್ಷ್ಮೀಶಂ ಮಾಂ ಸುರೇಶೇಶಂ ದ್ವಯೇನ ಶರಣಂ ಗತಃ । ಮಲ್ಲೋಕ ಮಚಿರಾಲ್ಲಬ್ಧ್ವಾ ಮತ್ಸಾಯುಜ್ಯಂ ಸ ಗಚ್ಛತಿ ॥**" "**ಸಕೃದೇವ ಪ್ರಪನ್ನಾಯ ತವಾಸ್ಮೀತಿ ಚ ಯಾಚತೇ । ಅಭಯಂ ಸರ್ವಭೂತೇಭ್ಯೋ ದದಾಮ್ಯೇ ತದ್ವ್ರತಂ ಮಮ ॥**" ಇತ್ಯಾದಿ ಪುರಾಣವಾಕ್ಯ ವಿರೋಧವೂ, ಉಂಟಾಗುತ್ತದೆಂಬ ಭಾವವು ಪೂರ್ವಾಪರ ವಿರೋಧ ಹೇಗೆಂದರೆ :—ಶ್ರೀ ನಮ್ಮಾಳ್ವಾರ್ರವರ ಇನ್ರುನ್ನೈ ಎಂಬ (ತಿರು. ೧೦ ೮ ೯) ಪಾಶುರಕ್ಕೆ ಅರ್ಥವನ್ನು ತಾವು ಹೇಳಿದ ಹಾಗೆ ತಾತ್ಪರ್ಯವನ್ನು ಹೇಳಿದರೆ ಪೂರ್ವದಲ್ಲಿ "**ಅಗಲಗಿಲ್ಲೇನ್**" ಎಂಬ (೬. ೧೦. ೧೦) ಪಾಶುರದಲ್ಲಿ "**ಉನ್ನಡಿ**

---

(೧) ಬ್ರ. ಸೂ. ೨ ೩ ೩೩ (೨) ಬ್ರ. ಸೂ. ೨ ೩.೪೧ (೩) ಬ್ರ. ಸೂ. ೨.೧ ೩೪

ವರುಮ್. ಇಪ್ಪಡಿ ಈಶ್ವರ ಸ್ವಾತಂತ್ರ್ಯ ಸಹಜ ಕಾರುಣ್ಯಙ್ಗಳಡಿಯಾಗ ವರುಮ್ ಕಲಕ್ಕಙ್ಗಳುಕ್ಕು ಪರಿಹಾರಮ್ ಶೊನ್ನೋಮ್

೨. ಅಥ ಸಂಬಂಧಮೂಲಕ ಶಙ್ಕಾಃ ಪರಿಹ್ರಿಯಂತೇ.

ಸಂಬಂಧ ವಿಶೇಷಮಡಿಯಾಗ ವರುಮ್ ಕಲಕ್ಕತ್ತುಕ್ಕು ಪರಿಹಾ

ಕೀಳ್ ಮುರ್‌ನ್ನು ಪುಗನ್ನೋನೇ" ಪೂರ್ಣ ಶರಣಾಗತಿಯನ್ನನುಷ್ಠಿಸಿದುದಕ್ಕೆ ವಿರೋಧವಾಗುತ್ತದೆ ಎಂಬ ಭಾವವು

ಹೀಗೆ ಪ್ರಥಮ ಪೂರ್ವಪಕ್ಷದ ಖಂಡನವನ್ನು ನಿಗಮನ ಮಾಡಿ ಹೇಳುತ್ತಾರೆ.—**ಇಪ್ಪಡಿ**- ಈ ಮೇಲೆ ಉಪಪಾದಿಸಿದ ರೀತಿಯಲ್ಲಿ, **ಈಶ್ವರ ಸ್ವಾತಂತ್ರ್ಯ ಸಹಜ ಕಾರುಣ್ಯಙ್ಗಳಡಿಯಾಗ** - ಸರ್ವೇಶ್ವರನ ಸ್ವಾತಂತ್ರ್ಯದ ಮತ್ತು ಆತನ ಸ್ವಾಭಾವಿಕವಾದ ಕಾರುಣ್ಯದ ಮೂಲಕವಾಗಿ, **ವರುಮ್ ಕಲಕ್ಕಙ್ಗಳುಕ್ಕು** - ಉಂಟಾಗುವ ಸಂಶಯಗಳಿಗೆ, **ಪರಿಹಾರಮ್ ಶೊನ್ನೋಮ್** - ಪರಿಹಾರವನ್ನು ಹೇಳಿ ಈಗ ಮುಗಿಸಿದ್ದಾಯಿತು ಆತನಿಗೆ ಸರ್ವ ಸ್ವಾತಂತ್ರ್ಯವೂ ಉಂಟು, ಇದೂ ಅಲ್ಲದೆ ಮಹಾ ಕರುಣಾಸಾಗರನು, ಹೀಗಿರುವಾಗ ನಾವು ಮಾಡುವ ಪ್ರಪದನವು ಅಜಾಗಳ ಸ್ತನಪ್ರಾಯವೇ ಎಂಬ ಪೂರ್ವಪಕ್ಷಕ್ಕೆ ಸಮಾಧಾನವನ್ನು ಹೇಳಿದ್ದಾಯಿತೆಂಬ ಭಾವವು ; ಮತ್ತು ಆತನು ಸ್ವತಂತ್ರನು, ಪ್ರಪದನ ಮಾಡಿದರೂ ರಕ್ಷಿಸದೇ ಇದ್ದರೂ ಇರಬಹುದು ಎಂಬ ಪೂರ್ವಪಕ್ಷವೂ ಕೂಡ ಖಂಡಿಸಲ್ಪಟ್ಟಿತೆಂಬ ತಾತ್ಪರ್ಯವು

೨ ಸಂಬಂಧದ ಮೂಲಕವಾದ ಶಙ್ಕಗಳ ಪರಿಹಾರವು

ಮುಂದೆ ಸರ್ವೇಶ್ವರನು ಶೇಷಿಯಾಗಿ, ನಾವುಗಳು ಆತನಿಗೆ ಶೇಷಭೂತರಾಗಿರುವುದರಿಂದ ನಾವುಗಳೆಲ್ಲಾ ಆ ಸರ್ವೇಶ್ವರನ ಪ್ರಯೋಜನಕ್ಕಾಗಿಯೇ ವಿನಾ, ನಮ್ಮ ಪ್ರಯೋಜನಕ್ಕಲ್ಲವು, ಎಂಬ ಈ ಶೇಷಿಶೇಷ ಸಂಬಂಧದ ಮೂಲಕ ಉಂಟಾಗುವ ಶಂಕೆಗಳನ್ನು ಪರಿಹರಿಸುತ್ತೇವೆ ಎಂಬ ಪ್ರತಿಜ್ಞಾವಾಕ್ಯವನ್ನು ಪಠಿಸುತ್ತಾರೆ.- **ಸಂಬಂಧ ವಿಶೇಷಮಡಿಯಾಗ ವರುಮ್**- ಸರ್ವೇಶ್ವರನು ನಮಗೆ ಶೇಷಿಯಾಗಿರುವ ಸಂಬಂಧದ ಮೂಲಕ ಉಂಟಾಗುವ, **ಕಲಕ್ಕತ್ತುಕ್ಕು** - ಶಂಕೆಗಳಿಗೆ, **ಪರಿಹಾರಮ್ ಶೊಲ್ಲುಗಿರೋಮ್** - ನಿವೃತ್ತಿಯನ್ನು ಹೇಳುವೆವು ಸರ್ವೇಶ್ವರನು ಚೇತನರಿಗೆಲ್ಲಾ ಶೇಷಿ ಎಂಬುದರ ಮೂಲಕ ಉಂಟಾಗಬಹುದಾದ ಪೂರ್ವಪಕ್ಷಕ್ಕೆ ಸಮಾಧಾನವನ್ನು

ರನ್ ಶೊಲ್ಲುಗಿರೋಮ್. ಈಶ್ವರರ್ ಶೇಷಿಯಾಯಿರುಕ್ಕ, ನಾಮ್ (೧) "ಗರ್ಭಭೂತಾಸ್ತಪೋಧನಾಃ" ಎನ್ರುಮ್ ಕಣಕ್ಕಿಲೇ ಸ್ತನಂಧಯ ಪ್ರಾಯರಾ ಇರುಕ್ಕ, ತ್ತಾಯ್ಮುಲೈ ಪಾಲಕ್ಕು ಅರ್ತ್ತನಾಯ್ ಉಳುದಲ್ ಶೆಯ್ಯುಮ್ ಅಳವನ್ರಿಕ್ಕೆ, ಕೂಲಿ ಕೊಡುಪ್ಪಾರೈಪ್ಪೋಲೆ, ನಾಮ್ ಆತ್ಮಸಮರ್ಪಣಮ್ ಪಣ್ಣುಗೈಯುಮ್, ರಕ್ಷಿಕ್ಕವೇಣುಮೆನ್ರು ಅಪೇಕ್ಷಿಕ್ಕೈಯುಮ್, ವಿಶ್ವಸಿಕ್ಕೈಯುಮೆನ್ರಾರ್ಪ್ಪೋಲೆ, ಶೊಲ್ಲುಗಿರ ಇವೈಯೆಲ್ಲಾಮ್ ಸ್ವರೂಪತ್ತುಕ್ಕು ಪೊರುನ್ದವೋ ವೆನ್ರು ಶಿಲರ್ ಸಿದ್ಧೋಪಾಯ ಮುಖತ್ತಾಲೆ ಸಾಧ್ಯೋಪಾಯ ಶರೀರತ್ತೈ ಯುಳಿಪ್ಪಾರ್ಗಳ್.

---

ಹೇಳುವೆವು ಎಂಬ ಭಾವವು ಪ್ರಥಮತಃ ಪೂರ್ವಪಕ್ಷವನ್ನು ಪಪಾದಿಸಿ ಅನಂತರ ಅದನ್ನು ನಿರಸನ ಮಾಡುತ್ತಾರೆ ಪೂರ್ವಪಕ್ಷವು ಹೇಗೆಂದರೆ — ಈಶ್ವರರ್ ಶೇಷಿಯಾಯಿರುಕ್ಕ - "ಪತಿಂ ವಿಶ್ವಸ್ಯ" ಎಂದು ಹೇಳಿರುವ ಹಾಗೆ ಸರ್ವೇಶ್ವರನು ಶೇಷಿಯಾಗಿರಲಾಗಿ, ನಾಮ್ - ನಾವು, "ತಪೋಧನಾಃ - ತಪಸ್ಸನ್ನೇ ಧನವಾಗಿ ಉಳ್ಳ ನಾವು, ಗರ್ಭಭೂತಾಃ-ನಿನಗೆ ಮಕ್ಕಳ ರೂಪದಲ್ಲಿರುವವರು" ಎಂದು ಹೇಳಿರುವ, ಕಣಕ್ಕಿಲೇ - ರೀತಿಯಲ್ಲಿ, ನ್ಯಾಯದಲ್ಲಿ, ಸ್ತನಂಧಯಪ್ರಾಯರಾಯಿರುಕ್ಕ-ಸ್ತನ್ಯವನ್ನು ಕುಡಿಯುವ ಎಳೇ ಮಕ್ಕಳ ರೂಪದಲ್ಲಿರಲಾಗಿ, ತಾಯ್ ಮುಲೈ ಪಾಲಕ್ಕು - ತಾಯಿಯ ಸ್ತನ್ಯಕ್ಕೆ, ಅರ್ತ್ತನಾಯ್ ಉಳುದಲ್ ಶೆಯ್ಯುಮ್ ಅಳವನ್ರಿಕ್ಕೆ - ದೀನನಾಗಿ ರೋದನ ಮಾಡುವವರ ಮಾತ್ರವಲ್ಲದೆ, ಕೂಲಿ ಕೊಡುಪ್ಪಾರ್ ಪೋಲೆ - ಕೂಲಿಯನ್ನು ಕೊಡುವವರ ಹಾಗೆ, ನಾಮ್ - ನಾವು, ಆತ್ಮಸಮರ್ಪಣಂ ಪಣ್ಣುಗೈಯುಮ್ - ಆತ್ಮಸಮರ್ಪಣೆಯನ್ನು ಮಾಡುವದೂ, ರಕ್ಷಿಕ್ಕವೇಣುಮೆನ್ರು ಅಪೇಕ್ಷಿಕ್ಕೈಯುಮ್ – ರಕ್ಷಿಸಬೇಕೆಂದು ಎಂದರೆ ಮೋಕ್ಷಪ್ರಾಪ್ತಿಯನ್ನುಂಟುಮಾಡಬೇಕೆಂದು ಅಪೇಕ್ಷಿಸೋಣವೂ, ವಿಶ್ವಸಿಕ್ಕೈಯುಮ್ - ಸುಪ್ರೀತನಾಗುವ ಹಾಗೆ ಮಾಡೋಣವೂ, ಎನ್ನಾರ್ಪೋಲೆ – ಎಂಬುವ ಈ ಪ್ರಕಾರದಲ್ಲಿ, ಶೊಲ್ಲುಗಿರ - ಹೇಳುವ, ಇವೈ ಯೆಲ್ಲಾಮ್ - ಹೀಗೆ ಹೇಳುವುದೆಲ್ಲವೂ, ಸ್ವರೂಪತ್ತುಕ್ಕು ಪೊರುನ್ದವೋ - ಅತ್ಯಂತ ಪಾರತಂತ್ರ್ಯವಿಶಿಷ್ಟ ಶೇಷಭೂತನಾಗಿರುವ ಈತನ ಸ್ವರೂಪಕ್ಕೆ ಸರಿಯೋ? ಎನ್ರು - ಎಂದು, ಶಿಲರ್ – ಕೆಲವರು, ಸಿದ್ಧೋಪಾಯ ಮುಖತ್ತಾಲೆ – ಸರ್ವೇಶ್ವರನೇ ಮುಖ್ಯಸಿದ್ಧೋಪಾಯನಾಗಿ ನಿಂತಿರುವುದರಿಂದ, ಸಾಧ್ಯೋಪಾಯ ಶರೀರತ್ತೈ –

(೧) ರಾಮಾ. ಅರಣ್ಯ. ೧.೨೧.

ಸಾಧ್ಯೋಪಾಯವಾದ ಪ್ರಪದನವೂ ಒಂದು ಅವಯವವಾಗಿರುವ, ಅಂಶವಾಗಿರುವ ಭಾವವನ್ನು, ಆಳ್ವಾರ್‌ಗಳ್ - ನಾಶಮಾಡುವರು. ಸರ್ವೇಶ್ವರನು ಸರ್ವ ಶೇಷಿಯು, ನಾವುಗಳೆಲ್ಲಾ ಇರುವುದು ಅವನಿಗಾಗಿಯೇ. ನಾವುಗಳಾದರೋ ಅವನಿಗೆ ಸ್ತನಂಧಯಪ್ರಾಯರು ಏನೂ ತಿಳಿಯದ ಶಿಶುಪ್ರಾಯರು. ಅಂತವರುಗಳನ್ನು ತಾಯಿಯು ಹೇಗೆ ಮಗುವು ಅಳಲಿ, ಅಳದೇ ಇರಲಿ, ಕಾಲಕ್ಕೆ ಸರಿಯಾಗಿ ಸ್ತನ್ಯವನ್ನು ಕೊಟ್ಟು ಕಾಪಾಡುವಳೋ, ಹಾಗೆಯೇ ಸರ್ವೇಶ್ವರನೂ ಕೂಡ ತನಗೆ ಸಂಪೂರ್ಣ ಪರತಂತ್ರನಾದ ಈ ಚೇತನನನ್ನು ಸ್ವತಃ ಕಾಪಾಡದೆ, ಇಂತಹ ಪರತಂತ್ರನಾಗಿ ಶೇಷಭೂತನಾದವನು ಪ್ರಪದನವನ್ನು ಮಾಡಿಯೇ ತೀರಬೇಕು, ತನ್ನನ್ನು ರಕ್ಷಿಸಬೇಕೆಂದು ಪ್ರಾರ್ಥಿಸಲೇಬೇಕು, ತನ್ನ ಪ್ರೀತಿಯನ್ನು ಸಂಪಾದಿಸಲೇಬೇಕು, ಇತ್ಯಾದಿ ನಿರ್ಬಂಧಗಳನ್ನು ಎಲ್ಲಿಯಾದರೂ ಎದುರು ನೋಡುವನೋ, ಈ ಚೇತನನ ಪರತಂತ್ರ ಸ್ವರೂಪಕ್ಕೆ ವಿರುದ್ಧವಾದ ನಿರ್ಬಂಧವಲ್ಲವೇ? ಎಂಬ ತಾತ್ಪರ್ಯವು. ಈ ಪೂರ್ವಪಕ್ಷ ಸಮರ್ಥನೆಗಾಗಿ ಪೂರ್ವಪಕ್ಷಿಯು ಶ್ರೀಮದ್ರಾಮಾಯಣದ ಅರಣ್ಯಕಾಂಡದಲ್ಲಿ ದಂಡಕಾರಣ್ಯ ಋಷಿಗಳು ಶ್ರೀರಾಮನನ್ನು ಕುರಿತು ಪ್ರಾರ್ಥಿಸಿದ ವಾಕ್ಯವನ್ನು ಉದಾಹರಿಸಿರುತ್ತಾರೆ. ಆ ಪೂರಾ ಶ್ಲೋಕವು ಯಾವುದೆಂದರೆ —

"ನ್ಯಸ್ತದಂಡಾ ವಯಂ ರಾಜನ್ ಜಿತಕ್ರೋಧಾ ಜಿತೇಂದ್ರಿಯಾಃ ।
ರಕ್ಷಿತವ್ಯಾಸ್ತ್ವಯಾ ಶಶ್ವದ್ಗರ್ಭಭೂತಾಸ್ತಪೋಧನಾಃ ॥"

ಇದರರ್ಥವೇನೆಂದರೆ.—ವಯಂ - ನಾವುಗಳು, ನ್ಯಸ್ತದಂಡಾಃ - ತಾಪಸರಾಗಿ ಮುನಿಗಳೆನಿಸಿಕೊಂಡಿರುವುದರಿಂದ ದಂಡೋಪಾಯವು ನಮಗೆ ಸ್ವರೂಪವಲ್ಲದುದರಿಂದ ಅದನ್ನು ಬಿಟ್ಟವರು. ತಪೋಬಲದಿಂದ ಭಸ್ಮಮಾಡಿಬಿಡಬಾರದೋ ಎಂದರೆ, ಜಿತಕ್ರೋಧಾಃ-ಕ್ರೋಧವೂ ನಮಗೆ ಸ್ವರೂಪವಲ್ಲದುದರಿಂದ ಅದನ್ನು ಜಯಿಸಿರುವ ಶಾಂತಮನಸ್ಕರು. ಕ್ರೋಧವುಂಟಾಗಬೇಕಾದರೆ, "ಕಾಮಾತ್ಕ್ರೋಧೋಽಭಿಜಾಯತೇ" ಎಂಬ ಉಕ್ತ್ಯನುಸಾರವಾಗಿ ಕಾಮಾದಿಗಳಿದ್ದರೆ ಕ್ರೋಧ ಉಂಟಾದೀತು, ನಾವಾದರೋ, ಜಿತೇಂದ್ರಿಯಾಃ - ಇಂದ್ರಿಯಗಳನ್ನೆಲ್ಲಾ ಜಯಿಸಿ ಐಹಿಕದಲ್ಲಿ ವೈರಾಗ್ಯವುಳ್ಳವರು. ಹೀಗೆ ನಾವು ಬ್ರಾಹ್ಮಣವೃತ್ತಿಯುಳ್ಳವರು, ದಂಡವನ್ನು ಪ್ರಯೋಗಿಸುವುದು ಬ್ರಾಹ್ಮಣ ಕರ್ತವ್ಯವಲ್ಲವು. ನೀನಾದರೋ ಅಧರ್ಮಿಗಳನ್ನು ಶಾಸನ ಮಾಡುವುದಕ್ಕಾಗಿ ಕ್ಷತ್ರಿಯಕುಲ, ರಾಜನ್ಯಕುಲದಲ್ಲಿ ಹುಟ್ಟಿದವನು. ಆದುದರಿಂದ ಹೇ ರಾಜನ್ ಎಂಬ ಸಂಬೋಧನೆಯು. ಆದುದರಿಂದ, ತ್ವಯಾ ರಕ್ಷಿತವ್ಯಾಃ ಶಶ್ವತ್ - ಸರ್ವಲೋಕಶರಣ್ಯನಾದ ನಿನ್ನಿಂದ ಯಾವಾಗಲೂ ರಕ್ಷಿಸಲ್ಪಡಲು ಯೋಗ್ಯರು, ಅದೇನು ರಕ್ಷಿಸಬೇಕು ಎಂದರೆ, ಶಶ್ವತ್ ಗರ್ಭ

**ಇವರ್ಗಳೈ ವಿಲಕ್ಕುಮ್ಪಡಿ:— ಪರಮರ್ಷಿಗಳುಮ್ ಶ್ರೀ ಭಾಷ್ಯಕಾರಾದಿಗಳುಮ್, ವಿಶ್ವಾಸಪೂರ್ವಕ ಪ್ರಾರ್ಥನಾತ್ಮನಿಕ್ಷೇಪಾದಿಗಳೈತ್ತಾಙ್ಗ**

---

**ಭೂತಾಃ** - ಯಾವಾಗಲೂ ನಿನಗೆ ಸ್ವಸಂಬಂಧಯುಕ್ತರು, ಅನನ್ಯಾರ್ಹ ಶೇಷರಾಗಿರುವುದರಿಂದಲೂ ಅನನ್ಯಾರ್ಹ ಶರಣರಾದುದರಿಂದಲೂ ರಕ್ಷಣೀಯರು ಎಂಬ ಭಾವವು ಅದು ಮಾತ್ರದಿಂದಲೇ ರಕ್ಷಿಸಬೇಕೇ ಎಂದರೆ, ನಾವುಗಳು, **ತಪೋಧನಾಃ** - ಇಲ್ಲಿ ತಪಶ್ಶಬ್ದವು, ಇವರುಗಳು ಶ್ರೀರಾಮನಲ್ಲಿ ಶರಣಾಗತಿ ಮಾಡಿದುದರಿಂದ, **"ತಸ್ಮಾನ್ನ್ಯಾಸಮೇಷಾಂ ತಪಸಾಮತಿರಿಕ್ತಮಾಹುಃ"** ಪ್ರಪದನವು ಎಲ್ಲಾ ತಪಸ್ಸಿಗಿಂತಲೂ ಮೇಲಾದುದು ಎಂಬ ಶ್ರುತಿವಾಕ್ಯಬಲದಿಂದ, ಪ್ರಪದನವನ್ನು ಬೋಧಿಸುತ್ತದೆ ಇಂತಹ ಪ್ರಪದನವನ್ನೇ ಧನವಾಗಿ ಉಳ್ಳ ಪ್ರಪನ್ನರಾದ ನಿನ್ನ ದಾಸಭೂತರು ಆದುದರಿಂದಲೇ **ರಕ್ಷಿತವ್ಯಾಃ** ರಕ್ಷಿಸಲ್ಪಡಲು ಯೋಗ್ಯರು, ನೀನು ರಕ್ಷಿಸಿಯೇ ತೀರಬೇಕೆಂಬ ಭಾವವು ಹೀಗೆ ಪೂರ್ವಪಕ್ಷಿಯು "ಗರ್ಭಭೂತಾಃ" ಎಂಬ ಪ್ರಯೋಗವು ತನಗೆ ಸಾಧಕವೆಂದು ಹೇಳಿದರೂ, ಆತನಿಗೇನೇ **ಪ್ರತ್ಯುತಬಾಧಕವು**, ಏಕೆಂದರೆ ಮುಂದೆ **ತಪೋಧನಾಃ** ಎಂದಿರುವುದರಿಂದ ಈ ವ್ಯಾಜಮೂಲಕವಾಗಿಯೇ ಆತನು ನಿರ್ವ್ಯಾಜನಾಗಿ ರಕ್ಷಕನಾದನು **ಪೂರ್ವಪಕ್ಷದಭಿಪ್ರಾಯವು** ಇಷ್ಟೇ - —ಚೇತನನು ಶೇಷಭೂತನಾಗಿ ಸಂಪೂರ್ಣ ಪರತಂತ್ರನಾಗಿ ಅಶಕ್ತನು. ಆದುದರಿಂದ ಆತ್ಮಸಮರ್ಪಣೆ ಮಾಡುವದೂ, ರಕ್ಷಿಸಬೇಕೆಂಬ ಪ್ರಾರ್ಥನೆಯೂ, ಅಂತಹ ಮಹೋನ್ನತ ಪದವಿಯಲ್ಲಿರುವವನ ವಿಶ್ವಾಸವನ್ನು ಸಂಪಾದಿಸೋಣವೂ ಇವೆಲ್ಲಾ ಈ ಅಶಕ್ತನಿಗೆ ಸಾಧ್ಯವೇ ? ಎಂದಿಗೂ ಸಾಧ್ಯವಲ್ಲವಾದುದರಿಂದ **ಸರ್ವಶೇಷಿಯು** ಎಂದಿಗೂ ಇವುಗಳನ್ನು ನಿರೀಕ್ಷಿಸನು, ಎಂಬದಾಗಿ **ಪೂರ್ವಪಕ್ಷವು** ಇದನ್ನು **"ಇವರ್ಗಳೈ ವಿಲಕ್ಕುಮ್ಪಡಿ"** ಎಂಬ ವಾಕ್ಯಮೂಲಕ ನಿರಸನ **ಮಾಡುತ್ತಾರೆ**

**ಇವರ್ಗಳೈ** - ಇಂತಹ **ಪೂರ್ವಪಕ್ಷಿಗಳನ್ನು**, **ವಿಲಕ್ಕುಮ್ಪಡಿ** - ನಿರಾಕರಿಸಿ ಸಮಾಧಾನವನ್ನು ಹೇಳುವ ರೀತಿಯನ್ನು, **ಶೊಲ್ಲುಗಿರೋಮ್** - ಹೇಳುತ್ತೇವೆ, ಏನೆಂದರೆ ಎಂದು ಅಧ್ಯಾಹಾರಮಾಡಿಕೊಳ್ಳತಕ್ಕದ್ದು **ತೆಳಿವಿಕ್ಕುಮ್ಪಡಿ**- ತಿಳಿಸುವ ರೀತಿ ಎಂಬದಾಗಿ ಪಾಠಾಂತರವು. **ಪರಮರ್ಷಿಗಳುಮ್** - ಶ್ರೇಷ್ಠರಾದ ಋಷಿಗಳು ಯಾರೆಂದರೆ ಪರಾಶರ ವ್ಯಾಸ ವಾಲ್ಮೀಕಿ ಮಹರ್ಷಿಗಳೂ, **ಶ್ರೀ ಭಾಷ್ಯಕಾರಾದಿಗಳುಮ್** - ಶ್ರೀ ಯತಿವರ್ಯರೇ ಮೊದಲಾದವರುಗಳೂ ಆದಿ ಶಬ್ದದಿಂದ ಅವರ ಶಿಷ್ಯಪರಂಪರೆಗೆ ಸೇರಿದವರೂ ಸಹ, **ವಿಶ್ವಾಸಪೂರ್ವಕ** -

**ಳುವರ್ ಅನುಷ್ಟಿತ್ತು, ಇದುಕ್ಕು ಶಾಸ್ತ್ರಙ್ಗಳೈ ಮೂದಲಿಪ್ಪಿತ್ತುಕ್ಕೊಂಡು, ಉಪದೇಶ ಪರಂಪರೈಯುಮ್ ನಡತ್ತಿಪ್ಪೋರುಗೈಯಾಲೇ ಶೇಷಿತ್ವಾದಿ ಸಂಬಂಧಮ್ ನಿತ್ಯಮೇಯಾಗಿಲುಮ್ ಕರ್ಮಾರ್ಣಗಳಾನ ಜೀವರ್‌ಗಳ್ ವಿಷಯತ್ತಿಲ್, ಈಶ್ವರನೊರು ಸಾಧ್ಯೋಪಾಯವಿಶೇಷತ್ತೈ ಮುನ್ನಿಟ್ಟಿಲ್ಲದು ರಕ್ಷಿಯಾರ್ ಎನ್ರು ಶಾಸ್ತ್ರನಿಷ್ಠರ್‌ಕ್ಕು ಪರಿಗ್ರಹಿಕ್ಕವೇಣುಮ್.**

ಮಹಾವಿಶ್ವಾಸದಿಂದ ಯುಕ್ತವಾದ, **ಪ್ರಾರ್ಥನಾತ್ಮನಿಕ್ಷೇಪಾದಿಗಳೈ** - ಗೋಪ್ತೃತ್ವವರಣದಿಂದ ಸೇರಿದ ಆತ್ಮನಿಕ್ಷೇಪರೂಪ ಭರನ್ಯಾಸಾದಿಗಳನ್ನು, **ತಾಙ್ಗಳುಮ್** - ತಾವೂ, **ಅನುಷ್ಟಿತ್ತು** - ಅನುಷ್ಠಾನಮಾಡಿ, **ಇದುಕ್ಕು** - ಈ ಭರನ್ಯಾಸಮಾಡಿದುದಕ್ಕೆ, **ಶಾಸ್ತ್ರಙ್ಗಳೈ**-ಶಾಸ್ತ್ರಗಳನ್ನು, **ಮೂದಲಿಪ್ಪಿತ್ತುಕೊಂಡು**-ಪ್ರಮಾಣವನ್ನಾಗಿ ತೋರಿಸಿ, **ಉಪದೇಶಪರಂಪರೈಯುಮ್** - ತಾವು ತಮ್ಮ ಶಿಷ್ಯರಿಗೂ ಈ ಶಿಷ್ಯರೂ, ತಮ್ಮ ಶಿಷ್ಯರಿಗೂ, ಹೀಗೆ ಕ್ರಮಕ್ರಮವಾಗಿ ಉಪದೇಶವನ್ನು, **ನಡತ್ತಿಪ್ಪೋರುಗೈಯಾಲೇ** - ಮಾಡಿಕೊಂಡುಗಿರುವುದರಿಂದ, ಶೇಷಿತ್ವವೇ ಮೊದಲಾದ ಸಂಬಂಧವು ಎಂಬಲ್ಲಿರುವ ಆದಿಪದದಿಂದ, ಪಿತಾ ಪುತ್ರ ಸಂಬಂಧವೇ ಮೊದಲಾದವು ಹೇಳಲ್ಪಟ್ಟಿತು, **ನಿತ್ಯಮೇಯಾಗಿಲುಮ್**-ನಿತ್ಯವಾದರೂ ಕೂಡ, **ಕರ್ಮಾರ್ಣಗಳಾನ** - ಕರ್ಮಬಂಧಕ್ಕೆ ಸಿಲುಕಿದ, ಜೀವಾತ್ಮರ ವಿಷಯದಲ್ಲಿ, **ಈಶ್ವರನ್** - ಸರ್ವೇಶ್ವರನು, **ಒರು ಸಾಧ್ಯೋಪಾಯ ವಿಶೇಷತ್ತೈ** - ಒಂದು ಸಾಧ್ಯೋಪಾಯ ವಿಶೇಷವನ್ನು, **ಮುನ್ನಿಟ್ಟಿಲ್ಲದು** - ಪುರಸ್ಕರಿಸಿ ಅಲ್ಲದೆ, **ರಕ್ಷಿಯಾರ್** - ರಕ್ಷಿಸುವುದಿಲ್ಲವು, **ಎನ್ರು** - ಎಂಬದಾಗಿ, **ಶಾಸ್ತ್ರನಿಷ್ಠರ್‌ಕು** - ಶಾಸ್ತ್ರದಲ್ಲಿ ಹೇಳಿರುವ ಹಾಗೆ ಆಚಾರವುಳ್ಳವರು, **ಪರಿಗ್ರಹಿಕ್ಕವೇಣುಮ್** - ಅಂಗೀಕರಿಸತಕ್ಕದ್ದು ಈ ವ್ಯಾಜರೂಪ ಭರನ್ಯಾಸಮೂಲಕವಾಗಿಯೇ ಶ್ರಿಯಃಪತಿಯು ರಕ್ಷಿಸುವನೇ ವಿನಾ ಅನ್ಯಥಾ ಇಲ್ಲವೆಂದು ಹೇಳುತ್ತಾರೆ ಈ ಅಭಿಪ್ರಾಯವನ್ನು ಹಿಂದೆಯೂ ಅಧಿಕಾರಿ ವಿಭಾಗಾಧಿಕಾರದಲ್ಲಿ "**ಪ್ರಪನ್ನಾದನ್ಯೇಷಾಂ ನದಿಶತಿ ಮುಕುಂದೋ ನಿಜಪದಂ**" ಎಂಬ ಶ್ಲೋಕಮೂಲಕ ಸ್ಥಾಪಿಸಿರುತ್ತಾರೆ. ೭೩೭ನೆಯ ಪುಟ ನೋಡಿ ಹೀಗೆ ಹೇಳಲು ತಮಗೆ ಸಾಧನವೇನು ? ಎಂದರೆ ತುಂಬಾ ಜ್ಞಾನನಿಧಿಗಳಾದ ಮಹರ್ಷಿಗಳು ಮಹಾವಿಶ್ವಾಸಪೂರ್ವಕವಾದ ಆತ್ಮನಿಕ್ಷೇಪವು ಆವಶ್ಯಕವೆಂದು ಹೇಳಿರುತ್ತಾರೆ ಶ್ರೀ ಪರಾಶರರು "**ತಾವದಾರ್ತಿಸ್ತಥಾವಾಂಛಾ**" ಎಂಬ ಶ್ಲೋಕದಲ್ಲಿ ಶರಣಾಗತಿಯ ಆವಶ್ಯಕತೆಯನ್ನು ಉಪಪಾದಿಸಿರುತ್ತಾರೆ. ೭೩೦ನೆಯ ಪುಟವನ್ನು ನೋಡಿರಿ. ಶ್ರೀ ವ್ಯಾಸಮಹರ್ಷಿಯು "**ಸರ್ವೇಷಾ**

ಶಾಸ್ತ್ರತ್ತೈ ಕ್ಕೈವಿಟ್ಟಾಲ್, ಇಸ್ಸಂಬಂಧಮ್ ಶೊಲ್ಲುಗೈಕ್ಕು ಈಶ್ವರ

ಮೇವ ಲೋಕಾನಾಂ ಪಿತಾಮಾತಾ ಚ ಮಾಧವಃ । ಗಚ್ಛಧ್ವಮೇನಂ ಶರಣಂ ಶರಣ್ಯಂ ಪುರುಷರ್ಷಭಾಃ" (ಭಾರ. ಅರ. ೧೯೨. ೫೬) ಎಂದು ಹೇಳಿರುತ್ತಾರೆ. ಇದು ಮಾರ್ಕಂಡೇಯರು ಯುಧಿಷ್ಠಿರಾದಿಗಳನ್ನು ಕುರಿತ ಪರಮ ಹಿತೋಪದೇಶವು. ಶ್ರೀ ಕೃಷ್ಣನೇ ಪುರುಷೋತ್ತಮನಾದುದರಿಂದ ಆತನಲ್ಲಿ ಶರಣಾಗತಿಯನ್ನನುಷ್ಠಿಸಿರಿ ಎಂದು ಉಪದೇಶಿಸಿರುತ್ತಾರೆ ಹಾಗೆಯೇ ಶ್ರೀ ವಾಲ್ಮೀಕಿರಾಮಾಯಣದಲ್ಲೂ "ವಿದಿತಸ್ಸಹಿ ಧರ್ಮಜ್ಞಶ್ಶರಣಾಗತವತ್ಸಲಃ । ತೇನ ಮೈತ್ರೀ ಭವತು ತೇ ಯದಿ ಜೀವಿತು ಮಿಚ್ಛಸಿ । ಪ್ರಸಾದಯಸ್ವತ್ವಂ ಚೈನಂ ಶರಣಾಗತ ವತ್ಸಲಂ । ಮಾಂ ಚಾಸ್ಮೈಪ್ರಯತೋಭೂತ್ವಾ ನಿರ್ಯಾತಯಿತು ಮರ್ಹಸಿ" ಇದರರ್ಥಕ್ಕೆ ನೆಯ ಪುಟವನ್ನು ಪರಾಂಬರಿಸಿ "ತಮೇವ ಶರಣಂಗಚ್ಛ" "ರಾಘವಂ ಶರಣಂಗತಃ" ಇತ್ಯಾದಿ ಪ್ರಮಾಣಗಳನೇಕ ಇವೆ ಶ್ರುತಿ, ಸ್ಮೃತಿ, ಪುರಾಣಗಳುಂಟೆಂದು ಹಿಂದೆಯೇ ಅವುಗಳು ಉದಾಹರಿಸಲ್ಪಟ್ಟಿವೆ. "ತಮೇವಂ ವಿದ್ವಾ ನಮೃತ ಇಹಭವತಿ", ಎಂದು ಭಕ್ತಿ ಮಾರ್ಗವು ಉಪಾಯವಾಗಿ ವಿಧಿಸಲ್ಪಟ್ಟಿರುತ್ತದೆ. "ಭಕ್ತ್ಯಾ ಪರಮಯಾವಾಪಿ ಪ್ರಪತ್ತ್ಯಾವಾ ಮಹಾಮತೇ । ಪ್ರಾಪ್ಯೋಽಹಂ ನಾನ್ಯಥಾ ಪ್ರಾಪ್ಯೋ ಮಮಕೈಂಕರ್ಯ ಲಿಪ್ಸುಭಿಃ" ಎಂಬೀ ಪ್ರಮಾಣದಲ್ಲಿ ಭಕ್ತಿಪ್ರಪತ್ತಿಯಾಗಲಿ ಸಾಧ್ಯೋಪಾಯವಾಗುತ್ತೆಂದೂ, ಇವೆರಡರಲ್ಲ ಯಾವುದಾದರೂ ಒಂದರ ಅನುಷ್ಠಾನದಿಂದ ನನ್ನ ಕೈಂಕರ್ಯಾಭಿಲಾಷೆಯುಳ್ಳವರಿಂದ ಎಂದರೆ ಮೋಕ್ಷಾರ್ಥಿಗಳಿಂದ ಪ್ರಾಪ್ಯನೇ ವಿನಾ ಅನ್ಯಥಾ ಇಲ್ಲವೆಂದು ಭಗವಂತನೇ ಹೇಳಿರುತ್ತಾನೆ. ಹೀಗೆ ಶಾಸ್ತ್ರಬಲ ಮಾತ್ರವೇ ಅಲ್ಲದೆ, ನಮ್ಮ ಪೂರ್ವಾಚಾರ್ಯರುಗಳು ತಾವು ಅನುಷ್ಠಿಸಿ, ತಮ್ಮ ಶಿಷ್ಯರಿಗೂ ಉಪದೇಶಿಸಿ ಅವರೂ ಅನುಷ್ಠಿಸುವ ಹಾಗೆ ಮಾಡಿರುತ್ತಾರೆ. ಅಂತವರಲ್ಲಿ ಅಗ್ರಗಣ್ಯರಾಗಿ ನಮ್ಮ ದರ್ಶನಸ್ಥಾಪಕರಾದ ಶ್ರೀ ಭಾಷ್ಯಕಾರರು ತಾವೂ ಅನುಷ್ಠಿಸಿ, ತಮ್ಮ ಶಿಷ್ಯರೂ ಕೂಡ ಅನುಷ್ಠಿಸುವ ಹಾಗೆ ಮಾಡಿರುತ್ತಾರೆ. ಹೀಗೆ ಎರಡು ಬಲವೂ ಇರುವದರಿಂದ ಈ ಪೂರ್ವ ಪಕ್ಷವು ಎಂದಿಗೂ ನಿಲ್ಲಲಾರದು ಸರ್ವೇಶ್ವರನು ನಿರುಪಾಧಿಕಶೇಷಿಯಾಗಿಯೂ, ಈತನು ಶೇಷನಾಗಿಯೂ, ಹೀಗೆ ಈ ಸಂಬಂಧವು ನಿತ್ಯವಾಗಿದ್ದರೂ, ಸಾಧ್ಯೋಪಾಯವನ್ನನುಷ್ಠಿಸಿದ ಹೊರತು, ಆತನು ಸಿದ್ಧೋಪಾಯನಾಗಿ ನಿಂತು ರಕ್ಷಿಸನು ಎಂದು ಸ್ಥಾಪಿಸಿರುತ್ತಾರೆ. ಶಾಸ್ತ್ರವು ಬೇಕಿಲ್ಲವೆಂಬು ಈ ಶೇಷಿಶೇಷ ಸಂಬಂಧ ಮೂಲಕ ಯುಕ್ತಿವಾದವನ್ನೂ ತಂದಿರು

ನೈಯುಮ್ ಕಿಡೈಯಾದು.

ತ್ತೇವೆ ಎಂದರೆ, ಈ ಸಂಬಂಧವೂ ಶಾಸ್ತ್ರಮೂಲಕವಾದುದರಿಂದ, ಶಾಸ್ತ್ರ ಬೇಡವೆಂಬುವನಿಗೆ ಈ ಸಂಬಂಧವೂ ಇಲ್ಲವು, ಆತನಿಗೆ ಸರ್ವೇಶ್ವರನೂ ಇಲ್ಲವು, ಏಕೆಂದರೆ ಶಾಸ್ತ್ರಮೂಲಕವಾಗಿಯಲ್ಲದೇ ಸರ್ವೇಶ್ವರನುಂಟೆ ಎಂದು ಸ್ಥಾಪಿಸಬಹುದ, ಎಂಬ ಮುಂದಿನ ವಾಕ್ಯದಿಂದ ತಿಳಿಸುತ್ತಾರೆ ಶಾಸ್ತ್ರತ್ತೈ ಕೈವಿಟ್ಟಾಲ್ - ಶಾಸ್ತ್ರವು ಬೇಡವೆಂದು ಕೈಬಿಟ್ಟರೆ, ಇಸ್ಸಂಬಂಧಮ್ ಶೊಲ್ಲುಗೈಕ್ಕು - ಈ ಶೇಷಿಶೇಷ ಸಂಬಂಧವನ್ನು ಹೇಳುವುದಕ್ಕೆ, ಈಶ್ವರನೈಯುಮ್ ಕಿಡೈಯಾದು- ಈಶ್ವರಸಿದ್ಧಿಯೂ ಉಂಟಾಗುವುದಿಲ್ಲವು. ಅಥವಾ ಅಂತವನಿಗೆ ಈಶ್ವರನೇ ಇಲ್ಲವು. “ಯತೋವಾ ಇಮಾನಿ ಭೂತಾನಿ” (ತೈ ಭೃ ೧) ಇತ್ಯಾದಿ ಶ್ರುತಿವಾಕ್ಯವೇ ಜಗತ್ಕಾರಣನಾದ ಸರ್ವೇಶ್ವರನಿದ್ದಾನೆಂಬುದಕ್ಕೆ ಪ್ರಮಾಣವಾದುದರಿಂದ, ಶಾಸ್ತ್ರಯೋನಿತ್ವಾತ್ (೧ ೧. ೩) ಎಂಬ ವ್ಯಾಸಸೂತ್ರದಲ್ಲಿ ಶಾಸ್ತ್ರದಿಂದಲೇ ಪರಬ್ರಹ್ಮನನ್ನು ತಿಳಿಯಬಹುದೇ ವಿನಾ ಅನ್ಯಥಾ ಆಗುವುದಿಲ್ಲವೆಂದು ಸ್ಥಾಪಿತವಾಗಿರುವುದರಿಂದ, ಯಾವಾಗ ಶಾಸ್ತ್ರವನ್ನು ಕೈಬಿಟ್ಟಿದ್ದಾಯಿತೋ ಆಗ ಸರ್ವೇಶ್ವರನೇ ಇಲ್ಲವೆಂದಾಯಿತು. ಹಾಗಾದ ನಂತರ ಶೇಷಿಶೇಷಭಾವ ತಾನೇ ಎಲ್ಲಿಯದು? ನಿಮ್ಮ ವಾದಕ್ಕೆ ತಳಹದಿಯೇ ಇಲ್ಲವಾಯಿತೆಂಬ ಭಾವವು

ಹೀಗೆ ವ್ಯಾಜಸಾಪೇಕ್ಷತನಾಗಿಯೇ ಸರ್ವಶೇಷಿಯಾದ ಸರ್ವೇಶ್ವರನು ಈ ಪರತಂತ್ರನಾದ ಚೇತನನನ್ನು ರಕ್ಷಿಸುವನೆಂಬುದು (೧) ಶಾಸ್ತ್ರಸಮ್ಮತವಾದುದು (೨) ಪೂರ್ವಾಚಾರ್ಯಾನುಷ್ಠಾನಕ್ಕೆ ಸಮ್ಮತವಾದುದು ಎಂದು ಒಪ್ಪಿಕೊಂಡರೆ ಪೂರ್ವಪಕ್ಷಿಯು ಇನ್ನೊಂದು ಆಕ್ಷೇಪವನ್ನು ಹೇಳುತ್ತಾನೆ. ಶ್ರೀ ದೇಶಿಕರವರೇ ಪ್ರಧಾನಪ್ರತಿತಂತ್ರಾಧಿಕಾರದಲ್ಲಿ ಹೇಳಿರುವುದೇನೆಂದರೆ.—(೩೦೮-೯ನೆಯ ಪುಟಗಳನ್ನು ನೋಡಿ) “ಚೇತನರುಡೈಯ ರಕ್ಷಣತ್ತಿಲ್, ಈಶ್ವರನ್ ಪ್ರಾಪ್ತನುಮಾಯ್ ಶಕ್ತನುಮಾಯ್, ತದಧೀನ ಪ್ರವೃತ್ತಿಯುಮೊಳಿಯ ಚೇತನರ್ ಅಪ್ರಾಪ್ತರುಮಾಯ್ ಅಶಕ್ತರುಮಾಯ್, ಇರುಕ್ಕೈಕ್ಕು ನಿಬಂಧನಮ್ —ಈಶ್ವರನುಡೈಯ ನಿರುಪಾಧಿಕ ಶೇಷಿತ್ವಮುಮ್, ನಿರುಪಾಧಿಕ ನಿಯಂತೃತ್ವಮುಮ್, ಇವರುಡೈಯ ನಿರುಪಾಧಿಕ ಶೇಷತ್ವಮುಮ್ ನಿರುಪಾಧಿಕ ನಿಯಾಮ್ಯತ್ವಮುಮ್” ಎಂದುಪದೇಶಿಸಿರುತ್ತಾರೆ ಚೇತನರು ಸರ್ವೇಶ್ವರನಿಗೆ ಶೇಷಭೂತರಾಗಿ ತದಧೀನ ಪ್ರವೃತ್ತಿಯುಳ್ಳವರಾದುದರಿಂದ ಪೂರ್ಣ ಅಶಕ್ತರು ಎಂದು ಅಲ್ಲಿ ಹೇಳಿರುತ್ತಾರೆ. ಈಗ ಸಾಧ್ಯೋಪಾಯಾನುಷ್ಠಾನದಿಂದ ತನ್ನನ್ನು

## ಸ್ವೋಕ್ತಿ ವಿರೋಧಮ್ ಪೂರ್ವಪಕ್ಷೀ ದರ್ಶಯತಿ, ತತ್ಪರಿಹಾರಃ.

ಆನಪಿನ್ಪು ಸಂಬಂಧವಡಿಯಾಗ ಈಶ್ವರನ್ ರಕ್ಷಿಕ್ಕ ಪ್ರಾಪ್ತನೆನ್ರುಮ್, ಶೇಷಭೂತನಾನ ಇವನ್ ತನ್ನೈ ರಕ್ಷಿತ್ತುಕೊಳ್ಳ ಪ್ರಾಪ್ತನನ್ರೆನ್ರುಮ್, ಮುನ್ಪು ಶೊನ್ನತವುಮ್, ರಕ್ಷ್ಯ ರಕ್ಷಕಭಾವತ್ತುಕ್ಕು ಲೋಕದೃಷ್ಟತ್ತುಕ್ಕು ಲೋಕದೃಷ್ಟಪ್ರಕ್ರಿಯೈಯಾಲೇ ಔಚಿತ್ಯಮ್ ಶೊನ್ನಪಡಿಯತ್ತನ್ನೈ ; ಇವ್ವಳವೇ ರಕ್ಷೈಕ್ಕು ನಿರಪೇಕ್ಷಕಾರಣ ಮೆನ್ರುಪಡಿಯನ್ರು. ಅಪ್ಪಡಿ

---

ತಾನು ರಕ್ಷಿಸಿಕೊಳ್ಳಲು ಶಕ್ತನೆಂದು ಹೇಳಿದಂತಾಗಿ ಪರಸ್ಪರ ವಿರುದ್ಧವಾಕ್ಯವಾಗಲಿಲ್ಲವೇ ಎಂದು ಆಕ್ಷೇಪಿಸುತ್ತಾನೆ ಇದಕ್ಕೆ ಸಮಾಧಾನವನ್ನು ಹೇಳುವುದೂ ಅಲ್ಲದೆ, ಹೀಗೆ ಸಾಧ್ಯೋಪಾಯಾನುಷ್ಠಾನ ಬೇಡವೆಂದರೆ ಉಂಟಾಗುವ ಬಾಧಕಗಳನ್ನು ಮುಂದಿನ ವಾಕ್ಯಗಳಿಂದ ತಿಳಿಸುತ್ತಾರೆ

**ತಮ್ಮ ಉಕ್ತಿಗೇನೇ ವಿರೋಧವೆಂಬ ಪೂರ್ವಪಕ್ಷಿಯಾಕ್ಷೇಪವನ್ನು ಪರಿಹರಿಸಿ ಅನ್ಯಥಾ ಉಂಟಾಗುವ ಬಾಧಕಗಳನ್ನೂ ತೋರಿಸುತ್ತಾರೆ.**

**ಆನಪಿನ್ಪು** - ಹೀಗಾದ ಮೇಲೆ ಎಂದರೆ ಉಪಾಯಾನುಷ್ಠಾನವು ಆವಶ್ಯಕವೆಂದಾದ ನಂತರ, **ಸಂಬಂಧಮಡಿಯಾಗ** - ಸರ್ವೇಶ್ವರನು ಶೇಷಿಯಾಗಿ ನಾವು ಶೇಷರಾಗಿರುವದರ ಮೂಲಕ, **ಈಶ್ವರನ್ ರಕ್ಷಿಕ್ಕ ಪ್ರಾಪ್ತನೆನ್ರು** - ಈಶ್ವರನೇ ರಕ್ಷಿಸಲು ಶಕ್ತನೆಂದೂ, ಶೇಷಭೂತನಾದ, **ಇವನ್** - ಈ ಚೇತನನು, **ರಕ್ಷಿತ್ತುಕ್ಕೊಳ್ಳ ಪ್ರಾಪ್ತನನ್ರೆನ್ರುಮ್** - ರಕ್ಷಿಸಿಕೊಳ್ಳಲು ಶಕ್ತನಲ್ಲವೆಂದೂ, **ಮುನ್ಪು**-ಮೊದಲು ಪ್ರಧಾನಪ್ರತಿತಂತ್ರಾಧಿಕಾರದಲ್ಲಿ. **ಶೊನ್ನದವುಮ್**-ಹೇಳಿದುದಾದರೂ, **ರಕ್ಷ್ಯ ರಕ್ಷಕ ಭಾವತ್ತುಕ್ಕು** - ಸರ್ವೇಶ್ವರನು ರಕ್ಷಕನು ನಾವು ರಕ್ಷಿಸಲ್ಪಡಲು ಅರ್ಹರು ಎಂಬೀ ಅಭಿಪ್ರಾಯಕ್ಕೆ ಎಂದರೆ ಆತನೇ ನಿರುಪಾಧಿಕ ಶೇಷಿಯಾಗಿ ರಕ್ಷಿಸಲು ಶಕ್ತನು, ನಾವು ಆತನಿಗೆ ನಿರುಪಾಧಿಕ ಶೇಷರಾಗಿ ನಾವಾಗಿಯೇ ರಕ್ಷಿಸಿಕೊಳ್ಳಲಶಕ್ತರಾದ ಪ್ರಯುಕ್ತ ಆತನಿಂದ ರಕ್ಷಿಸಲ್ಪಡಲು ಯೋಗ್ಯರು ಎಂಬಭಿಪ್ರಾಯಕ್ಕೆ, **ಲೋಕದೃಷ್ಟಪ್ರಕ್ರಿಯೈಯಾಲೆ** - ನಾವು ಲೋಕದಲ್ಲಿ ಸ್ವಾಮಿಭೃತ್ಯರಿಗಿರುವ ನ್ಯಾಯ ಮೂಲಕ, **ಔಚಿತ್ಯಮ್ ಶೊನ್ನಪಡಿಯತ್ತನ್ನೈ** - ಪ್ರಾಶಸ್ತ್ಯವನ್ನು ಹೇಳುವುದಕ್ಕಾಗಿ ಮಾತ್ರವೇ , ಹಾಗಲ್ಲದೆ, **ಇವ್ವಳವೇ**-ಈ ಶೇಷಿಶೇಷ ಸಂಬಂಧ ಮಾತ್ರವೇ, **ರಕ್ಷೈಕ್ಕು** - ರಕ್ಷಣೆಗೆ, **ನಿರಪೇಕ್ಷ ಕಾರಣಮೆನ್ರುಪಡಿಯನ್ರು** - ಇನ್ನು ಯಾವುದರ ಅಪೇಕ್ಷೆಯಿಲ್ಲದೆ ಕಾರಣವೆಂದು ಹೇಳಿದ ಹಾಗಲ್ಲವು. ಪ್ರಧಾನ

**ಕ್ಕೊಳ್ಳಿಲ್ ಸರ್ವರುಮ್ ನಿತ್ಯಮುಕ್ತರಾಗ ಪ್ರಸಂಗಿಕ್ಕುಮ್. ಸ್ವಾತಂತ್ರ್ಯತ್ತಾಲೇ ನಿಯಮಮ್ ಕೊಳ್ಳಿಲ್, ಮುನ್ ಶೊನ್ನಪಡಿಯೇ ವೈಷಮ್ಯ ನೈರ್ಘೃಣ್ಯಙ್ಗಳ್ ಪ್ರಸಙ್ಗಿಕ್ಕುಮ್.**

---

ಪ್ರತಿತಂತ್ರಾಧಿಕಾರದಲ್ಲಿ ಹೇಳಿದುದೇನೋ ಉಂಟು ಈ ಶೇಷಿ ಶೇಷ ಸಂಬಂಧ ಮೂಲಕ ರಕ್ಷಿಸಲು ಸರ್ವೇಶ್ವರನೇ ಶಕ್ತನು, ತಾನೇ ರಕ್ಷಿಸಿಕೊಳ್ಳಲು ಜೀವಾತ್ಮನು ಅಶಕ್ತನೆಂದೇನೋ ಹೇಳಿದುದುಂಟು. ಆದರೆ ಇಷ್ಟು ಮಾತ್ರವೇ ಸಾಕು ಆತನು ರಕ್ಷಿಸುವುದಕ್ಕೂ ಈತನು ರಕ್ಷಿಸಲ್ಪಡುವುದಕ್ಕೂ ಎಂದೇನೂ ಅಲ್ಲಿ ಹೇಳಲಿಲ್ಲವು. ಲೋಕದಲ್ಲೂ ಸ್ವಾಮಿಯಾದವನು ರಕ್ಷಿಸಲು ಶಕ್ತನು, ಭೃತ್ಯನು ತಾನೇ ಅಶಕ್ತನಾಗಿ ಸ್ವಾಮಿಯಿಂದ ರಕ್ಷಿಸಲ್ಪಡತಕ್ಕವನು ಇಷ್ಟು ಮಾತ್ರ ಹೇಳಿದುದರಿಂದ ಸ್ವಾಮಿಯಾದವನು ತನಗೆ ರಕ್ಷಿಸುವ ಶಕ್ತಿಯಿದ್ದ ಮಾತ್ರಕ್ಕೇನೆ, ಭೃತ್ಯನಿಗೆ ತಾನೇ ರಕ್ಷಿಸಿಕೊಳ್ಳಲು ಅಶಕ್ತತೆಯಿದ್ದ ಮಾತ್ರಕ್ಕೇನೆ, ಭೃತ್ಯನು ರಕ್ಷಿಸಲ್ಪಡುವನೇ ? ಭೃತ್ಯನ ಕಿಂಚಿತ್ಕಾರ್ಯವಿಲ್ಲದೇನೇ ರಕ್ಷಿಸಿಬಿಡುವನೇ ? ಹಾಗೆಯೇ ಈ ಸಂದರ್ಭದಲ್ಲೂ ಎಂದು ಭಾವಿಸತಕ್ಕದ್ದು

ಆದರೆ ಈ ಸಂಬಂಧ ಮಾತ್ರವೇ ರಕ್ಷಣೆಗೆ ನಿರಪೇಕ್ಷವಾದ ಕಾರಣವೆಂದರೆ ಅದರಿಂದುಂಟಾಗುವ ಬಾಧಕವನ್ನು ತಿಳಿಸುತ್ತಾರೆ **ಅಪ್ಪಡಿಕ್ಕೊಳ್ಳಿಲ್** - ಹಾಗೆ ಅಭಿಪ್ರಾಯಪಟ್ಟರೆ, ಎಂದರೆ ಈ ಸಂಬಂಧ ಮಾತ್ರವೇ ಇನ್ನು ಯಾವುದರ ಅಪೇಕ್ಷೆಯೂ ಇಲ್ಲದೇನೆ ಕಾರಣವೆಂದಭಿಪ್ರಾಯಪಟ್ಟರೆ, **ಸರ್ವರೂ, ನಿತ್ಯಮುಕ್ತರಾಗ ಪ್ರಸಙ್ಗಿಕ್ಕುಮ್** - ಅನಾದಿ ಕಾಲದಿಂದಲೂ ಸದಾ ಮುಕ್ತರಾಗಿಯೇ ಇರಬೇಕಾಗಿ ಬರುತ್ತದೆ ಹಾಗಾಗಲೇನೂ ಕಾರಣವಿಲ್ಲವು, ಏಕೆಂದರೆ ಸರ್ವೇಶ್ವರನು ಸ್ವತಂತ್ರನು, ಆದುದರಿಂದ ಆತನು ಯೋಗ್ಯತೆಯನ್ನರಿತು ಯಾರನ್ನು ರಕ್ಷಿಸಬೇಕೋ ಅವರನ್ನು ಮಾತ್ರ ರಕ್ಷಿಸುವನೇ ವಿನಾ ಎಲ್ಲರನ್ನೂ ರಕ್ಷಿಸುವುದಿಲ್ಲವು ಎಂದು ಹೇಳಿದದಾದರೆ ಆಗಲೂ ಬಾಧಕ ತಪ್ಪಿದ್ದಲ್ಲವೆಂದು ಹೇಳುತ್ತಾರೆ :— **ಸ್ವಾತಂತ್ರ್ಯತ್ತಾಲೆ** - ಸರ್ವೇಶ್ವರನು ಸ್ವತಂತ್ರನಾದುದರಿಂದ, **ನಿಯಮಮ್ ಕೊಳ್ಳಿಲ್** - ಯೋಗ್ಯರನ್ನು ರಕ್ಷಿಸುವುದ ಇತರರನ್ನು ರಕ್ಷಿಸದಿರುವುದು ಹೀಗೆ ನಿಯಮವನ್ನು ಹೇಳಿದುದಾದರೆ, **ಮುನ್ ಶೊನ್ನಪಡಿಯೇ** - ಹಿಂದೆ ಹೇಳಿದ ಹಾಗೆಯೇ, **ವೈಷಮ್ಯ ನೈರ್ಘೃಣ್ಯಗಳು** ಸರ್ವೇಶ್ವರನಿಗೆ, **ಪ್ರಸಙ್ಗಿಕ್ಕುಮ್** - ಪ್ರಾಪ್ತವಾಗುವುವು. ತಾನು ಸ್ವತಂತ್ರನಾದದರಿಂದ ತನಗೆ ಅಭಿಮತವಾದಾಗ ಯಾರನ್ನು ರಕ್ಷಿಸಬೇಕೋ ಅವರನ್ನು ಮಾತ್ರ ರಕ್ಷಿಸುವನು, ಮಿಕ್ಕವರನ್ನು

ಯುಕ್ತಿಮಾತ್ರತ್ತಾಲ್ ಇವ್ವರ್ಥಙ್ಗಳ್ ಶೊಲ್ಲುವಾರ್ಕ್ಕು ಸಂಬಂಧಜ್ಞಾನಮೇ ಅಪೇಕ್ಷಿತಮ್ ರಕ್ಷಾಪೇಕ್ಷಾದಿಗಳ್ ವೇಣ್ಣಾ,ವೆನ್ರುಶೊಲ್ಲವೊಣ್ಣಾದು; ಅಚಿದ್ದ್ರವ್ಯಙ್ಗಳುಮ್. ಪಶುಮೃಗಪಕ್ಷ್ಯಾದಿಗಳುಮ್, ಸ್ತನಂಧಯರುಮ್, ರಕ್ಷಾಪೇಕ್ಷಾರಹಿತಙ್ಗಳಾನಾರ್ಪ್ಪೋಲೆ ಸಂಬಂಧಜ್ಞಾನರಹಿತಙ್ಗಳುಮಾಯಿರುಕ್ಕ, ಅವತ್ತೈ ರಕ್ಷಿಕ್ಕಕ್ಕಾಣಾ ನಿನ್ರೋಮಿರೆ. ಅಪ್ಪಡಿ ಕಂಡೋ

ಇಲ್ಲವು, ಆದುದರಿಂದ ಸರ್ವಮುಕ್ತಿ ಪ್ರಸಂಗರೂಪ ದೋಷವನ್ನಾರೋಪಿಸಲು ಮಾರ್ಗವಿಲ್ಲವೆಂದರೆ ಆಗ ವೈಷಮ್ಯ ನೈರ್ಘೃಣ್ಯರೂಪ ದೋಷಗಳು ತಪ್ಪಿದ್ದಲ್ಲವೆಂಬ ಭಾವವು.

ಆದರೆ ಈ ಶೇಷಿ ಶೇಷಸಂಬಂಧ ಜ್ಞಾನವೇ ಆವಶ್ಯಕವೆಂದು ಪೂರ್ವಪಕ್ಷ ತಂದಿರುವವರನ್ನು ವಿಕಲ್ಪಿಸಿ ಆಚಾರ್ಯರವರು ಕೇಳುತ್ತಾರೆ. ಹೀಗೆ ಆವಶ್ಯಕವೆಂದು ಹೇಳುತ್ತೀರಲ್ಲಾ ಇದೇನು (೧) ಯುಕ್ತಿಬಲದಿಂದಲೋ (೨) ಶಾಸ್ತ್ರಬಲದಿಂದಲೋ ಎಂದು ಪ್ರಶ್ನಿಸಿ, ಪ್ರಥಮಕಲ್ಪವು ಶಾಸ್ತ್ರವನ್ನತಿಕ್ರಮಿಸಿದುದು, ಆದುದರಿಂದ ಸರಿಯಲ್ಲವಾದರೂ, ಆಗಲೂ ದೋಷವು ತಪ್ಪಿದ್ದಲ್ಲವೆಂದು ಹೇಳುತ್ತಾರೆ. ಹೇಗೆಂದರೆ.—ಯುಕ್ತಿ ಮಾತ್ರತ್ತಾಲ್ - ಕೇವಲ ಯುಕ್ತಿ ಬಲದಿಂದಲೇ, ಇಲ್ಲಿ ಮಾತ್ರತ್ತಾಲ್ ಎಂದು ಹೇಳಿರುವದರಿಂದ ಶಾಸ್ತ್ರಬಲವನ್ನು ನಿರಾಕರಿಸಿ ಎಂಬಭಿಪ್ರಾಯವು, ಇವ್ವರ್ಥಙ್ಗಳ್ ಶೊಲ್ಲುವಾರ್ಕ್ಕು - ಈ ಅಭಿಪ್ರಾಯಗಳನ್ನು ಹೇಳುವವರಿಗೆ, ಸಂಬಂಧಜ್ಞಾನವೇ ಆವಶ್ಯಕ. ಪ್ರಪದನವು ಅನಾವಶ್ಯಕವು ಎಂಬದಾಗಿ ಅಭಿಪ್ರಾಯಪಡುವವರಿಗೆ, ಸಂಬಂಧ ಜ್ಞಾನಮೇ ಅಪೇಕ್ಷಿತಮ್ - ಶೇಷಿ ಶೇಷಸಂಬಂಧ ಜ್ಞಾನವೇ ಆವಶ್ಯಕವು, ರಕ್ಷಾಪೇಕ್ಷಾದಿಗಳ್ - ಗೋಪ್ತೃತ್ವವರಣವೇ ಮೊದಲಾದ ಸಪರಿಕರ ಪ್ರಪತ್ತಿಯು, ವೇಣ್ಣಾವೆನ್ರು - ಬೇಡವೆಂಬದಾಗಿ, ಶೊಲ್ಲವೊಣ್ಣಾದು - ನೀವು ಹೇಳಲಾಗುವುದಿಲ್ಲವು ಏಕೆಂದರೆ ಮುಂದೆ ಕಾರಣವನ್ನು ತಿಳಿಸುತ್ತಾರೆ: —ಅಚಿದ್ರವ್ಯಗಳೂ, ಪಶು, ಮೃಗ, ಪಕ್ಷ್ಯಾದಿಗಳೂ, ಬಾಲರೂ ಸಹ, ರಕ್ಷಾಪೇಕ್ಷಾ ರಹಿತಙ್ಗಳಾನಾರ್ಪ್ಪೋಲೆ - ಎಲ್ಲಾ ಜ್ಞಾನಶೂನ್ಯತೆಯುಳ್ಳವಾದ ಪ್ರಯುಕ್ತ ರಕ್ಷಾಪೇಕ್ಷೆ ಹೇಗಿಲ್ಲವೋ ಅವುಗಳಿಗೆ ಹೇಗೆ ಇಲ್ಲವೋ, ಹಾಗೆಯೇ, ಸಂಬಂಧಜ್ಞಾನ ರಹಿತಙ್ಗಳುಮಾಯಿರುಕ್ಕ - ಶೇಷಭೂತರೆಂಬ ಜ್ಞಾನವಿಲ್ಲದವರಾಗಿದ್ದರೂ, ಅವತ್ತೈ ರಕ್ಷಿಕ್ಕಕ್ಕಾಣಾನಿನ್ರೋಮಿರೆ - ಅವುಗಳನ್ನೂ ಕೂಡ ಸರ್ವೇಶ್ವರನು ರಕ್ಷಿಸುವುದನ್ನು ಕಂಡಿರುವೆವಷ್ಟೇ. ಹೀಗೆ ಈ ಅಚಿತ್ತು, ಪಶು ಮೃಗ ಪಕ್ಷ್ಯಾದಿಗಳೂ ಬಾಲರೂ

**ಮಾಗಿಲುಮ್ ಶಾಸ್ತ್ರ ಬಲತ್ತಾಲೇ ಇಜ್ಜ್ಗ ಸಂಬಂಧಜ್ಞಾನಮ್ ಅಪೇಕ್ಷಿತಮೆನ್ನಿಲ್, ಶಾಸ್ತ್ರಮ್ ಶೊನ್ನ ಕಟ್ಟಳೈಯಿಲೇ ಜ್ಞಾನವಿಶೇಷಮ್ ಸ್ವೀಕರಿಕ್ಕ**

---

ಸಹ ಸರ್ವಜ್ಞಾನಶೂನ್ಯವಾಗಿರುವುವು ರಕ್ಷಿಸಲ್ಪಟ್ಟಿರುವುದರಿಂದ, ಆಗಮೋತ್ಥಜ್ಞಾನವೇನು, ವಿವೇಕೋತ್ಥಜ್ಞಾನವೇನು ಇವುಗಳುಳ್ಳ ನಾವು ಅಚಿತ್ತು, ಪಶು ಮೃಗ ಪಕ್ಷ್ಯಾದಿಗಳ ಹಾಗೆಯೇ ಇರಬಹುದು, ಆಗ ಸಂಬಂಧಜ್ಞಾನ ತಾನೇ ಏಕೆ ಎಂಬದಾಗಿ ಆಕ್ಷೇಪಣೆಯು ಆಗಲ್ಲವು. ನಮಗೆ ಶಾಸ್ತ್ರಜ್ಞಾನವೂ ಆವಶ್ಯಕವು ತನ್ಮೂಲಕ ಸಂಬಂಧಜ್ಞಾನವೂ ಆವಶ್ಯಕವು ಎಂದು ಎರಡನೆಯ ವಿಕಲ್ಪವನ್ನು ಅವಲಂಬಿಸಿರುವೆವು ಎಂದರೆ ಆಗಲೂ ಆಕ್ಷೇಪಣೆಯು ತಪ್ಪಿದ್ದಲ್ಲವೆಂದು ತಿಳಿಸುತ್ತಾರೆ.—**ಅಪ್ಪಡಿ ಕಣ್ಡೋಮಾಗಿಲುಮ್** – ಹಾಗೆ ಅಚಿದ್ದ್ರವ್ಯಗಳನ್ನೂ ಪಶು ಮೃಗ ಪಕ್ಷ್ಯಾದಿಗಳನ್ನೂ ಯಾವ ವಿಧವಾದ ಜ್ಞಾನವಿಲ್ಲದಿದ್ದರೂ ರಕ್ಷಿಸಲ್ಪಟ್ಟಿದ್ದನ್ನು ನಾವು ಕಂಡಿದ್ದರೂ, ಶಾಸ್ತ್ರಬಲದಿಂದ, **ಇಜ್ಜ್ಗ** - ಈ ಸಂದರ್ಭದಲ್ಲಿ, ಎಂದರೆ ರಕ್ಷಿಸುವ ಸಂದರ್ಭದಲ್ಲಿ, **ಸಂಬಂಧಜ್ಞಾನಮ್** - ಶೇಷಿಶೇಷಸಂಬಂಧದ ಜ್ಞಾನವು, **ಅಪೇಕ್ಷಿತಮೆನ್ನಿಲ್** - ಆವಶ್ಯಕವೆಂದು ಹೇಳಿದರೆ, ಇದಕ್ಕೆ ಪ್ರಮಾಣ ಉಂಟೋ ಎಂದರೆ:— **"ಸ್ವೋಜ್ಜೀವನೇಚ್ಛಾ ಯದಿ ತೇ ಸ್ವಸತ್ತಾಯಾಂ ಸ್ಪೃಹಾ ಯದಿ । ಆತ್ಮದಾಸ್ಯಂ ಹರೇಸ್ಸ್ವಾಮ್ಯಂ ಸ್ವಭಾವಂ ಚ ಸದಾ ಸ್ಮರ"** ಎಂದಿರುತ್ತದೆ. ಆತ್ಮೋಜ್ಜೀವನದಲ್ಲಿ ಇಚ್ಛೆಯಿದ್ದರೆ, ತನ್ನ ಸತ್ತೆಯನ್ನು ಕಾಪಾಡಿಕೊಳ್ಳಬೇಕೆಂಬ ಆಸೆಯಿದ್ದರೆ, ತನ್ನ ದಾಸಭಾವವನ್ನೂ, ಹರಿಯ ಸ್ವಾಮಿತ್ವವನ್ನೂ, ಆತನ ಕಲ್ಯಾಣಗುಣಗಳನ್ನೂ ಯಾವಾಗಲೂ ಸ್ಮರಿಸತಕ್ಕದ್ದು ಎಂಬ ಶಾಸ್ತ್ರಪ್ರವೃತ್ತಿಯಿರುತ್ತದೆ **ಶಾಸ್ತ್ರಮ್ ಶೊನ್ನ ಕಟ್ಟಳೈಯಿಲೇ** - ಶಾಸ್ತ್ರವು ಹೇಳಿದ ವಿಧ್ಯುಕ್ತಿಗಳ ಪ್ರಕಾರ, **ಜ್ಞಾನವಿಶೇಷಮ್** - ಈ ಪ್ರಪದನರೂಪ ಜ್ಞಾನ ವಿಶೇಷವನ್ನು, **ಸ್ವೀಕರಿಕ್ಕವೇಣುಮ್** - ಅಂಗೀಕರಿಸತಕ್ಕದ್ದು. ಶಾಸ್ತ್ರಮೂಲಕ ಶೇಷಶೇಷಿಜ್ಞಾನವು ಆವಶ್ಯಕವಾದರೆ, ಈ ಪ್ರಪತ್ತಿಯೂ ಶಾಸ್ತ್ರ ವಿಧ್ಯುಕ್ತಿಯಾಗಿ ಒಂದು ಜ್ಞಾನವಿಶೇಷವಾದರೆ, ಇದು ಮಾತ್ರ ಏತಕ್ಕೆ ಆವಶ್ಯಕವಲ್ಲವು? ಶಾಸ್ತ್ರದಲ್ಲಿ ಒಂದು ಜ್ಞಾನ ಮಾತ್ರ ಆವಶ್ಯಕವು ಇನ್ನೊಂದು ಅನಾವಶ್ಯಕವೆಂದು ಹೇಳಬಹುದೋ? ಎಂಬ ತಾತ್ಪರ್ಯವು. ಪ್ರಪದನವೂ ಒಂದು ಜ್ಞಾನವಿಶೇಷವೆಂಬುದಕ್ಕೆ ಹಿಂದೆ ೮೦ನೆಯ ಪುಟ ನೋಡಿ "ಓಮಿತ್ಯಾತ್ಮಾನಂ ಯುಂಜೀತ" ಇತ್ಯಾದಿ ವಾಕ್ಯಗಳನ್ನೂ ಅಂಗೀಕರಿಸಿ ಭರನ್ಯಾಸವನ್ನನುಷ್ಠಿಸತಕ್ಕದ್ದು ಆವಶ್ಯಕವೆಂದೇ ಹೇಳಬೇಕಾಗುತ್ತದೆ ಎಂಬುದು ಮುಖ್ಯಾಭಿಪ್ರಾಯವು.

**ವೇಣುಮ್ ತನ್ನೈ ಈಶ್ವರನ್ ರಕ್ಷಿಕ್ಕುಮ್ಪೋದು ಸಂಬಂಧತ್ತೋಡೆ ಕೂಡ ವಿಲಕ್ಕಾಮೈಯೇ ವೇಣ್ಡುವದೆನ್ನಿಲ್, ಅದುವುಮ್ ಅನುಪಪನ್ನಮ್; ಸುಷುಪ್ತ್ಯಾದ್ಯವಸ್ಥೈಗಳಿಲೇ ಎಲ್ಲಾರ್ಕ್ಕುಮ್ ಮೋಕ್ಷಮ್ ಕೊಡುಕ್ಕ ಪ್ರಸಙ್ಗಿಕ್ಕೈಯಾಲೆ. ತನ್ ವಿಲಕ್ಕುಗೈಕ್ಕು ಯೋಗ್ಯತೆಯುಳ್ಳ ಅವ**

ಶೇಷಶೇಷಿ ಜ್ಞಾನವು ಶಾಸ್ತ್ರಮುಖೇನ ಅವಶ್ಯಕವಾದರೆ, ಚರಮೋಪಾಯರೂಪ ಜ್ಞಾನವಿಶೇಷವೂ ವಿಧಿಸಲ್ಪಟ್ಟಿದ್ದರೂ ಹೇಗೆ ಅನಾವಶ್ಯಕವೆಂದು ಸಿದ್ಧಾಂತಿ ಕೇಳಿದುದಕ್ಕೆ ಪೂರ್ವಪಕ್ಷಿಯು ಈ ಆಕ್ಷೇಪವನ್ನು ತಪ್ಪಿಸಿಕೊಳ್ಳುವುದಕ್ಕೆ ಹೇಳುವುದೇನೆಂದರೆ, ಬರೀ ಶೇಷಶೇಷಿ ಸಂಬಂಧವೇ ಇಲ್ಲಿ ರಕ್ಷಣೆಗೆ ಕಾರಣವೆಂದು ನಾವು ಹೇಳುವುದಿಲ್ಲವು, ಇದರೊಂದಿಗೆ ಸರ್ವೇಶ್ವರನು ರಕ್ಷಣೆಗೆ ಅಯೋಗ್ಯನೆಂದು ನಿರಾಕರಣೆ ಮಾಡದೇ ಇರುವದೂ ಸಹ ಅವಶ್ಯಕವೆಂದು ಹೇಳುವೆವು. ಆಗ ಸರ್ವಮುಕ್ತಿ ಪ್ರಸಂಗಕ್ಕೂ ಅವಕಾಶವಿಲ್ಲವು, ಹೀಗೆ ಪೂರ್ವಪಕ್ಷಿ ಅಂದರೆ ಅದೂ ಕೂಡ ಅಸಂಗತವಾದುದೇ, ಏಕೆಂದರೆ ಆಗಲೂ ಸರ್ವಮುಕ್ತಿ ಪ್ರಸಂಗವು ತಪ್ಪಿದ್ದಲ್ಲವೆಂದು ಮುಂದೆ ತಿಳಿಸುತ್ತಾರೆ:—**ತನ್ನೈ, ಈಶ್ವರನ್ ರಕ್ಷಿಕ್ಕುಮ್ಪೋದು** - ತನ್ನನ್ನು ಸರ್ವೇಶ್ವರನು ರಕ್ಷಿಸುವಾಗ, **ಸಂಬಂಧತ್ತೋಡೆ ಕೂಡ** - ಈ ಶೇಷಶೇಷಿ ಸಂಬಂಧ ಜ್ಞಾನದೊಂದಿಗೆ, **ವಿಲಕ್ಕಾಮೈಯೇ** - ಸರ್ವೇಶ್ವರನು ನಮ್ಮನ್ನು ತಿರಸ್ಕರಿಸದೇ ಇರೋಣವೇ, **ವೇಣ್ಡುವದೆನ್ನಿಲ್** - ಬೇಕಾದುದು ಎಂದರೆ, **ಅದುವುಮ್** - ಆ ಅಭಿಪ್ರಾಯವೂ, **ಅನುಪಪನ್ನಮ್** - ಯುಕ್ತವಾದುದಲ್ಲವು, ಅಸಂಗತವೆಂಬ ಭಾವವು ಕಾರಣವೇನೆಂದರೆ ಹೇಳುತ್ತಾರೆ:—**ಸುಷುಪ್ತ್ಯಾದ್ಯವಸ್ಥೈಗಳಿಲೇ** - ಸುಷುಪ್ತಿ ಮೊದಲಾದ ಅವಸ್ಥೆಗಳಲ್ಲಿ ಇಲ್ಲಿ ಆದಿ ಶಬ್ದದಿಂದ ದೇಹಾವಸಾನ ಕಾಲದಲ್ಲಿ ಉಂಟಾಗುವ ಪರಮಾತ್ಮ ಸಂಪತ್ತಿರೂಪ ಅವಸ್ಥೆಯು ಹೇಳಲ್ಪಟ್ಟಿತು. **ಎಲ್ಲಾರ್ಕ್ಕುಮ್** - ಎಲ್ಲರಿಗೂ, **ಮೋಕ್ಷಮ್ ಕೊಡುಕ್ಕ ಪ್ರಸಙ್ಗಿಕ್ಕೈಯಾಲೇ** - ಸರ್ವೇಶ್ವರನು ಮೋಕ್ಷ ಕೊಡಬೇಕಾಗಿ ಬರುವುದರಿಂದ ಅನುಪಪನ್ನವು ಏಕೆಂದರೆ ಸುಷುಪ್ತಿಯಲ್ಲಿ ನಿರಾಕರಣವಿಲ್ಲದೆ ಪರಮಾತ್ಮ ಸಂಪತ್ತಿಯೂ ಇದೆ ಮತ್ತು ಶೇಷಶೇಷಿ ಸಂಬಂಧವೂ ಇದೆ; ಆದುದರಿಂದ ಸರ್ವಮುಕ್ತಿ ಪ್ರಸಂಗ ಉಂಟಾಗುತ್ತದೆ ಎಂಬ ದೋಷವು ತಪ್ಪಿದ್ದಲ್ಲವು.

ಪೂರ್ವಪಕ್ಷಿಯು ತನ್ನಭಿಪ್ರಾಯಕ್ಕೆ ಇನ್ನೊಂದು ವಿಧ ನಿರ್ವಾಹವನ್ನು ತರುತ್ತಾನೆ ಹೇಗೆಂದರೆ:—ಕರ್ಮಪರಿಪಾಕದಿಂದಲೋ ಅಥವಾ ಸ್ವಪ್ನಾವಸ್ಥೆಯಲ್ಲದೆ ಜಾಗರಾವಸ್ಥೆಯಲ್ಲೋ ಹೇಗೋ ಅಂತೂ ನಿವಾರಣೆಯನ್ನು ಹೊಂದಲು

**ಸ್ಥೈಯಿಲೇ ವಿಲಕ್ಕಾದೊಳಿಯುವೇ ಅಪೇಕ್ಷಿತಮೆನ್ನವು ಮೊಣ್ಣಾದು; ವಿಲಕ್ಕೈಗ್ಗೈಕ್ಕು ಯೋಗ್ಯತೆಯಿಲ್ಲಾದ ಅಚಿತ್ತೈಯುಮ್ ವಿಲಕ್ಕಿರ ಪಶ್ವಾದಿಗಳೈಯುಮ್ ಪುತ್ರಾದಿಗಳೈಯುಮ್ ರಕ್ಷಿಕ್ಕ ಕಾಣ್ಗೈಯಾಲ್.**

ಯೋಗ್ಯವಾದ ಅವಸ್ಥೆಯಲ್ಲಿರುತ್ತಾನೆಂದು ಭಾವಿಸೋಣ; ಅಂತವನನ್ನು ಕೂಡ ನಿರಾಕರಣೆ ಮಾಡದೇ ಇರುವುದೇ ಈಗ ನಮಗೆ ಅಪೇಕ್ಷಿತವೆಂದು ಹೇಳುವೆವು ಎಂದು ಹೇಳಬಹುದು ಈ ಅಭಿಪ್ರಾಯವೂ ಸರಿಯಲ್ಲವೆಂದು ಹೇಳುತ್ತಾರೆ.—ಏಕೆಂದರೆ, ವಿಲಕ್ಕುಗೈಕ್ಕು ಯೋಗ್ಯತೆಯಿಲ್ಲಾದ - ನಿರಾಕರಣೆ ಮಾಡುವುದಕ್ಕೆ ಯೋಗ್ಯತೆಯೇ ಇಲ್ಲದ ಅಚಿತ್ತನ್ನೂ, ನಿರಾಕರಣೆ ಮಾಡಲು ಯೋಗ್ಯತೆಯುಳ್ಳ ಪಶುವೇ ಮೊದಲಾದವುಗಳನ್ನೂ, ಜ್ಞಾನಶೂನ್ಯರಾದ ಪುತ್ರಾದಿಗಳನ್ನೂ, **ರಕ್ಷಿಕ್ಕ ಕಾಣ್ಗೈಯಾಲೇ** – ಸರ್ವೇಶ್ವರನು ರಕ್ಷಿಸಿರುವುದನ್ನು ಕಂಡಿರೋಣದರಿಂದ, ನಿರಾಕರಣೆ ಮಾಡಿಬಿಡುವ ದೆಶೆಯನ್ನು ಹೊಂದಿದ್ದರೂ ನಿರಾಕರಣ ಮಾಡದೆ ಸರ್ವೇಶ್ವರನಿರುತ್ತಾನೆ; ಇದೇ ಬೇಕಾದುದೆಂದು ಪೂರ್ವಪಕ್ಷಿಯು ಹೇಳಿದನು. ಅಂತಹ ದೆಶೆಯಿಲ್ಲದೇ ಇರುವ ಅಚಿತ್ತುಗಳೂ, ಅಂತಹ ದೆಶೆಯಿರುವುವೂ ಸಹ ರಕ್ಷಣೆಯನ್ನು ಹೊಂದುತ್ತಿರುವುದರಿಂದ ಆ ಅಭಿಪ್ರಾಯವು ಸರಿಯಾದುದಲ್ಲವೆಂದು ಹೇಳಿದರು,

ಪೂರ್ವಪಕ್ಷಿಯು ಪುನಃ ಹೇಳುತ್ತಾನೆ —ಆಗಲಿ ಕೆಲವು ಮಹರ್ಷಿಗಳು ನಮ್ಮಭಿಪ್ರಾಯವನ್ನು ಅನುಮೋದಿಸಿ ಹೇಳಿರುತ್ತಾರಲ್ಲಾ "**ಯೇನಾಥವಂತೋಹಿ**" ಎಂಬ ಭಾರತ ವನಪರ್ವದ ವಚನವು, ಈ ಚೇತನನ ವ್ಯಾಪಾರವು ನಾಥನಾದ ಸರ್ವೇಶ್ವರನನ್ನು ನಂಬಿರುವವರಿಗೆ ಬೇಕಾಗಿಲ್ಲವೆಂದು ಹೇಳಿದೆಯಲ್ಲಾ ಅದಕ್ಕೇನುತ್ತರವು ಎಂಬ ಪೂರ್ವಪಕ್ಷಿಯ ಪ್ರಶ್ನೆಗೆ ಆ ಶ್ಲೋಕದಭಿಪ್ರಾಯವು ಪುರುಷಪ್ರಯತ್ನವೇನೂ ಬೇಡ ಎಂಬುದಲ್ಲವು, ಅದರ ಸರಿಯಾದಭಿಪ್ರಾಯವೇನೆಂಬುದನ್ನು ಪದೇಶಿಸುತ್ತಾರೆ.—**ಯೇ** - ಯಾವ ಪುಣ್ಯಶಾಲಿಗಳು, **ಲೋಕೇ** – ಈ ಲೋಕದಲ್ಲಿ, **ನಾಥವನ್ತಃ** - ಶಕ್ತರಾದ ಸ್ವಾಮಿಗಳನ್ನು ಹೊಂದಿರುವವರೋ, **ತೇ** – ಅವರು, **ಆತ್ಮಕರ್ಮಾಣಿ** - ತಮ್ಮ ಕೆಲಸಗಳನ್ನು, **ನ ಸಮಾರಭಂತೇ** – ಪ್ರಾರಂಭಿಸುವದಿಲ್ಲವು, ಏಕೆಂದರೆ ಹೇಳುತ್ತಾರೆ —**ತೇಷಾಂ** - ಅಂತವರುಗಳಿಗೆ, **ಕಾರ್ಯೇಷು** - ಕಾರ್ಯಗಳಲ್ಲಿ, **ನಾಥಾಃ** - ಸ್ವಾಮಿಗಳು, **ಭವನ್ತಿಹಿ** - ಶಕ್ತರಾದವರು ಆಗುವರು, ನಿರ್ವಾಹ ಮಾಡುವರಾಗುವರು, ಹೇಗೆಂದರೆ.—**ಹೇ ರಾಮ** – ಓ ಬಲರಾಮನೇ ಕೇಳು ಎಂದು ಸಾತ್ಯಕಿಯು ಒಂದು ದೃಷ್ಟಾಂತವನ್ನು ಹೇಳುತ್ತಾರೆ, **ಯಯಾತೇಃ** - ಯಯಾತಿಗೆ, **ಶೈಬ್ಯಾದಯಃ** – ಶೈಬ್ಯನೇ ಮೊದ

**ಅನಹಿನ್ನು (೧) "ಯೇ ನಾಥ ವಂತೋಹಿ ಭವನ್ತಿ ಲೋಕೇ ತೇ ನಾತ್ಮ ಕರ್ಮಾಣಿ ಸಮಾರಭಂತೇ । ತೇಷಾಂ ಹಿ ಕಾರ್ಯೇಷು ಭವಂತಿ ನಾಥಾ ಶ್ಶೈಬ್ಯಾದಯೋ ರಾಮ ಯಥಾ ಯಯಾತೇಃ ॥"**

---

೮ ದ ನಾಲ್ಕು ಜನ ದೌಹಿತ್ರರು ಹೇಗೆ ನಾಥರಾಗಿ ಆ ಯಯಾತಿಗೆ ಬೇಕಾದ ಸ್ವರ್ಗಪ್ರಾಪ್ತಿಯನ್ನುಂಟುಮಾಡಿಕೊಟ್ಟರೋ ಹಾಗೆ ಎಂಬ ಭಾವವು ಇಲ್ಲಿ ಯಯಾತಿಯು ಏನನ್ನೂ ಮಾಡದೆ ಆತನ ನಾಥರ ರೂಪದಲ್ಲಿರುವ ನಾಲ್ಕು ಜನ ದೌಹಿತ್ರರುಗಳಿಂದ ಹೇಗೆ ಸ್ವರ್ಗರೂಪ ಪುರುಷಾರ್ಥವನ್ನು ಹೊಂದಿದನೋ ಹಾಗೆ ಯೇ ನಾವೂ ಸಹ ನಾಥನಾದ ಶ್ರಿಯಃಪತಿಯಿಂದಲೇ ನಮ್ಮ ಪ್ರಯತ್ನದ ಅಪೇಕ್ಷೆ ಯಿಲ್ಲದೇನೇ ಹೊಂದುವೆವೆಂಬ ಪೂರ್ವಪಕ್ಷಿಯ ಅಭಿಪ್ರಾಯವು. ಪ್ರಕರಣವೇ ನೆಂದರೆ ಪ್ರಭಾಸಕ್ಷೇತ್ರಕ್ಕೆ, ಯುಧಿಷ್ಠಿರಾದಿಗಳು ವನವಾಸದಲ್ಲಿರುವಾಗ, ತೆರಳಿ ಅಲ್ಲಿ ಬಲರಾಮ ಕೃಷ್ಣ ಸಾತ್ಯಕಿ ಮೊದಲಾದವರನ್ನು ಕಂಡ ಕಾಲದಲ್ಲಿ ಬಲರಾಮರು ಶ್ರೀಕೃಷ್ಣನನ್ನು ಕುರಿತು ಅಧರ್ಮಿಯಾದ ದುರ್ಯೋಧನನಿಗೆ ಸರ್ವ ಶ್ರೇಯಸ್ಸೂ, ತುಂಬಾ ಧರ್ಮಸ್ವರೂಪವ ಪಾಂಡವರಿಗೆ "**ಹೃತಸ್ವರಾಜ್ಯಾ ಯತನಾರ್ಥಭಾರ್ಯಾಃ**" ಅಪಹರಿಸಲ್ಪಟ್ಟ ರಾಜ್ಯ, ಮನೆ ಧನವುಳ್ಳವರಾಗಿ, ಹೆಂಡತಿಗೆ ಸಭೆಯಲ್ಲಿ ವಿಶೇಷಾವ ಮಾನವುಳ್ಳವರಾಗಿ, ಹೀಗೆ ನಾನಾವಿಧ ಕ್ಲೇಶವನ್ನು ಹೊಂದಿರುವುದು ಸರಿಯಾಗಿ ಕಾಣುವುದಿಲ್ಲವೇ ಎಂದು ಪರಿತಾಪ ಪಡುತ್ತಿದ್ದಾಗ, ಸಾತ್ಯಕಿಯು ಬಲರಾಮರನ್ನು ಕುರಿತು ಹೇಳುವ ಸಂದರ್ಭವು ಅಭಿಪ್ರಾಯವೇನೆಂದರೆ, ಈಗ ನೋಡಿದರೆ ಕ್ಲೇಶಾನುಭವವಿರುವ ಹಾಗೆ ತೋರಿದರೂ, ಶ್ರೀ ಕೃಷ್ಣನನ್ನೇ ನಾಥನಾಗಿ ಉಳ್ಳವ ರಾದುದರಿಂದ ಯುಧಿಷ್ಠಿರಾದಿಗಳಿಗೆ ಏನೂ ಕೊರತೆಯಿಲ್ಲವು, ಸರ್ವ ಶ್ರೇಯಸ್ಸನ್ನೂ ನಾಥನಾದ ಶ್ರೀ ಕೃಷ್ಣನು ಉಂಟುಮಾಡತಕ್ಕವನು, ಇದರಲ್ಲಿ ಸಂದೇಹವೇನೂ ಇಲ್ಲವೆಂದು ಹೇಳುವುದಕ್ಕಾಗಿ ಸಾಮಾನ್ಯೋಕ್ತಿರೂಪದಲ್ಲಿ ನಾಥರನ್ನು ಹೊಂದಿರು ವವರು ತಾವೇ ಕಾರ್ಯದಲ್ಲಿ ಸ್ವತಃ ಪ್ರವರ್ತಿಸುವುದಿಲ್ಲವು. ನಾಥನ್ನು ಪುರಸ್ಕ ರಿಸುವುದರಿಂದ ಅವರೇ ಸಾಧಿಸಿಕೊಡುವರು ಎಂಬಭಿಪ್ರಾಯವು. **ನಾತ್ಮಕರ್ಮಾಣಿ ಸಮಾರಭಂತೇ**-ತಮ್ಮ ಕೆಲಸಗಳನ್ನು ತಾವೇ ಆರಂಭಿಸುವುದಿಲ್ಲವು, **ಕಾರ್ಯೇಷು**- ಅವರ ಕಾರ್ಯಗಳಲ್ಲಿ, **ಭವಂತಿಹಿ ನಾಥಾಃ** - ನಾಥರಾದವರು ಸಾಧಕರಾಗುವರು ಎಂಬ ಭಾವವು. ಅವರುಗಳು ಏನನ್ನೂ ಮಾಡದೆ ಸುಮ್ಮನೆಯೇ ಇದ್ದುಬಿಡು ವರು, ನಾಥರೇ ಎಲ್ಲವನ್ನೂ ಮಾಡುವರು ಎಂಬರ್ಥವಲ್ಲವು. **ತೇಷಾಂಹಿ ಕಾರ್ಯೇಷು ಭವನ್ತಿ** ಎಂಬಲ್ಲಿ ಕಾರ್ಯೇಷು ಯಾರ ಕೆಲಸಗಳು ಎಂಬುದರಲ್ಲಿ ನಿಸ್ಸಂದೇಹ

## ನಿಗಮನೇ ಸ್ವಸಿದ್ಧಾಂತಮಾಹ

### ಸರ್ವ ರಕ್ಷಕನಾಗ ಮೂಲಮಂತ್ರಾದಿಗಳಿಲೆ ಶಿಕ್ಷಿತನಾನ ಇವನ್ತಾನೇ

ನಮ್ಮನ್ನು ರಕ್ಷಿಸಿಕೊಳ್ಳುವುದಕ್ಕೆ ತುಂಬಾ ಅಶಕ್ತರಾದುದರಿಂದಲೂ, ಸ್ವರಕ್ಷಣೆಯ ವ್ಯಾಪಾರದಲ್ಲಿ ನಮಗೆ ಅನ್ವಯವಿಲ್ಲವೆಂದೂ ಹೇಳಿದರು. ಇದು ಎರಡನೆಯ ಅಭಿಪ್ರಾಯವು. ಇಷ್ಟು ಮಾತ್ರವೇ ಆ ಆಪ್ತರ ವಾಕ್ಯಕ್ಕೆ ಅಭಿಪ್ರಾಯವೇ ವಿನಾ ಉಪಾಯಾನುಷ್ಠಾನವು ಯಥಾವಿಧಿ ಮಾಡತಕ್ಕದ್ದಲ್ಲವೆಂಬುದು ಅವರ ತಾತ್ಪರ್ಯ ವಲ್ಲವು. ಕರ್ಮವು ಅನಾದಿಯಾಗಿ ಈತನಿಗೆ ಬಂದಿರುತ್ತದೆ ಈ ಚೇತನನು ಮೊದಲೋ, ಕರ್ಮವು ಮೊದಲೋ, ಎಂದು ಹೇಳಲು ಸಾಧ್ಯವಿಲ್ಲವಾದುದರಿಂದ ಬೀಜಾಂಕುರ ನ್ಯಾಯಪ್ರಕಾರ ಚೇತನನೂ ತನ ಕರ್ಮಾದಿಗಳೂ ಅನಾದಿ ಎಂದು ಹೇಳಲ್ಪಟ್ಟವು. ಯಾವುದೋ ಒಂದು ಕಾಲದಲ್ಲಿ ಯಾದೃಚ್ಛಿಕ ಸುಕೃತಮೂಲಕ ಇಂತಹ "ಏಷ ಏವ ಸಾಧುಕರ್ಮಕಾರಯತಿ" ಉತ್ತಮ ಕೆಲಸಗಳನ್ನು ಮಾಡಿಸಿ ನಿರತಿಶಯ ಫಲವನ್ನು ಕೊಡುವನು ಇದೆಲ್ಲ ಬಹು ವಿಸ್ತಾರವಾಗಿ ಹಿಂದೆಯೇ ಉಪಪಾದಿಸಿರುತ್ತಾರೆ. ೧೨೨—೧೪೬ನೆಯ ಪುಟಗಳನ್ನು ನೋಡಿ. "ಅಧಿಷ್ಠಾನಂ ತಥಾ ಕರ್ತಾ" ಎಂಬ ಗೀತಾ ಶ್ಲೋಕದಲ್ಲೂ ಸರ್ವೇಶ್ವರ ಸಂಕಲ್ಪ ವಿಲ್ಲದೆ ಈತನು ಯಾವ ಕೆಲಸವನ್ನೂ ಮಾಡಲು ಸಾಧ್ಯವಿಲ್ಲವೆಂಬುದೂ ಸಹ ಹಿಂದೆಯೇ ಉಪಪಾದಿತವಾಗಿರುತ್ತದೆ

ಹೀಗೆ ಸ್ವರಕ್ಷಣೆಯಲ್ಲಿ ನಮಗೆ ಸಂಪೂರ್ಣವಾದ ಅಶಕ್ತಿಯು ಸ್ಪಷ್ಟವಾದ ನಂತರ ಸರ್ವಶಕ್ತನಾದ ಸರ್ವೇಶ್ವರನು ತಾನೇ ರಕ್ಷಕನಾಗಬೇಕಲ್ಲವೇ ಎಂದರೆ ಹೌದು, ವ್ಯಾಜಸಾಪೇಕ್ಷಕನಾಗಿಯೇ ರಕ್ಷಿಸುವನು ; ಹಾಗೆಯೇ ಮೂಲಮಂತ್ರಾದಿಗಳು ಹೇಳುವುದರಿಂದ ತಮಗೆ ಈ ಅಭಿಪ್ರಾಯದಲ್ಲ ಶಾಸ್ತ್ರ ಸಮ್ಮತಿಯೂ ಉಂಟೆಂದು ಮುಂದಿನ ವಾಕ್ಯದಿಂದ ತಿಳಿಸುತ್ತಾರೆ .—

### ಕೊನೆಯಲ್ಲಿ ತಮ್ಮ ಸಿದ್ಧಾಂತವನ್ನು ತಿಳಿಸುತ್ತಾರೆ.

ಅಭಿಯುಕ್ತರಭಿಪ್ರಾಯವೂ ತಮ್ಮಭಿಪ್ರಾಯವೂ ಎಲ್ಲಾ ಒಂದೇ, ಏನೂ ವ್ಯತ್ಯಾಸವಿಲ್ಲವು ಅದು ಯಾವುದೆಂದರೆ ಸಿದ್ಧಾಂತಿಸಿ ಹೇಳುತ್ತಾರೆ :-**ಸರ್ವರಕ್ಷಕನಾಗ** - ಸರ್ವರಿಗೂ ರಕ್ಷಕನೆಂದು, **ಮೂಲಮಂತ್ರಾದಿಗಳಿಲೇ** - ಅಷ್ಟಾಕ್ಷರ, ಆದಿ ಪದದಿಂದ ದ್ವಯ ಚರಮಶ್ಲೋಕಗಳಲ್ಲೂ, **ಶಿಕ್ಷಿತನಾನ** - ಉಪದೇಶಿಸಲ್ಪಟ್ಟಿರುವ, **ಇವನ್** - ಈ ಸರ್ವೇಶ್ವರನೇ, **ತಾನೇ** - ತಾನಾಗಿಯೇ, ನಮ್ಮ

**ನಮ್ಮೈ ಒರು ಉಪಾಯತ್ತಿಲೆ ವ್ಯಾಪರಿಪ್ಪಿತ್ತು, ಅನ್ದ ವ್ಯಾಪಾರತ್ತಾಲೆ ಪ್ರಸನ್ನನಾಯ್ ರಕ್ಷಿಕ್ಕಿರಾನೆನ್ನಿರುಕ್ಕ ಪ್ರಾಪ್ತಮ್.**

**ಸ್ವಾಮೀ ಸ್ವಶೇಷಂ ಸ್ವವಶಂ ಸ್ವಭರತ್ವೇನ ನಿರ್ಭರಮ್ ।**
**ಸ್ವದತ್ತ ಸ್ವಧಿಯಾ ಸ್ವಾರ್ಥಂ ಸ್ವಸ್ಮಿನ್ನ್ಯಸ್ಯತಿ ಮಾಂ ಸ್ವಯಮ್ ॥೭೨॥**

---

ಅಲ್ಪಸುಕೃತವನ್ನೆಸಗಿದ ನಮ್ಮನ್ನು, **ಒರು ಉಪಾಯತ್ತಿಲೆ** - ಒಂದು ಉಪಾಯದಲ್ಲಿ, **ವ್ಯಾಪರಿಪ್ಪಿತ್ತು** - ಪ್ರವರ್ತಿಸುವ ಹಾಗೆ ಮಾಡಿ, **ಅನ್ದ ವ್ಯಾಪಾರತ್ತಾಲೆ**- ಆ ಉಪಾಯಾನುಷ್ಠಾನದಿಂದ, **ಪ್ರಸನ್ನನಾಯ್** - ಸುಪ್ರೀತನಾಗಿ ಅನುಗ್ರಹಮುಖನಾಗಿ, **ರಕ್ಷಿಕ್ಕಿರಾನ್** - ನಮ್ಮನ್ನು ರಕ್ಷಿಸುವನು, **ಎನ್ನಿರುಕ್ಕ ಪ್ರಾಪ್ತಮ್**- ಎಂದು ತಿಳಿದಿರುವುದು ಉಚಿತವು. ಸರ್ವರಕ್ಷಕನು ಈಶ್ವರನು ಎಂಬುದು ಶ್ರುತಿಸ್ಮೃತಿಗಳಲ್ಲಿ ಉಪಪಾದಿತವೆಂದು ಹಿಂದೆಯೇ ಹೇಳಲ್ಪಟ್ಟಿರುತ್ತದೆ ಹಾಗೆಯೇ ಮೂರು ರಹಸ್ಯಗಳಲ್ಲೂ ಉಪಪಾದಿತವು, ಮೂಲಮಂತ್ರದ ಅಕಾರದಲ್ಲಿರುವ ಅವ ರಕ್ಷಣೆ ಎಂಬ ಧಾತುವಿನಿಂದಲೂ, ನಾರಾಯಣ ಶಬ್ದದ ಅಯನಪದದ ಅರ್ಥದಲ್ಲೂ, ಹಾಗೆಯೇ ದ್ವಯದ ನಾರಾಯಣ ಶಬ್ದದಲ್ಲೂ, ಚರಮಶ್ಲೋಕದ "**ಅಹಂ ಮೋಕ್ಷಯಿಷ್ಯಾಮಿ**" ಎಂಬ ಪದಗಳಲ್ಲೂ ಸರ್ವರಕ್ಷಕತ್ವವು ವ್ಯಕ್ತವು ಇಂತಹ ಸರ್ವರಕ್ಷಕನು ನಮ್ಮನ್ನು ಒಂದು ಉಪಾಯವನ್ನು ಆಚರಿಸುವ ಹಾಗೆ ಮಾಡಿ, ಅದರಿಂದ ಸುಪ್ರೀತನಾಗಿ ರಕ್ಷಿಸುವನು ಇದೀಗ ಶಾಸ್ತ್ರಸಮ್ಮತವಾದ ಸಿದ್ಧಾಂತವಾದ ಅಭಿಪ್ರಾಯವು ಈ ಅಭಿಪ್ರಾಯದಲ್ಲಿ ಸರ್ವೇಶ್ವರನಿಗೆ ಸರ್ವಮುಕ್ತಿ ಪ್ರಸಂಗ ವೈಷಮ್ಯ ನೈರ್ಘೃಣ್ಯಾದಿ ಯಾವ ದೋಷಗಳಿಗೂ ಆಸ್ಪದವಿಲ್ಲವೆಂಬ ಭಾವವು

ಈ ಅಭಿಪ್ರಾಯವೇ ಭರನ್ಯಾಸ ಪ್ರಕ್ರಿಯೆಯನ್ನು ಸಂಗ್ರಹವಾಗಿಯೂ ವಿಶದವಾಗಿಯೂ ಉಪಪಾದಿಸಿರುವ ನ್ಯಾಸ ದಶಕದಲ್ಲಿ ಪ್ರಕಟಪಲ್ಪಟ್ಟಿದೆ ಎಂದು ಅದ್ದಿನ ಶ್ಲೋಕವನ್ನು ಮುಂದೆ ಉದಾಹರಿಸುತ್ತಾರೆ — ಸರ್ವವಿಧ ಶಂಕೆಗಳಿಗೂ ಸಮಾಧಾನ ಹೇಳಿ, ಭರನ್ಯಾಸ ವಿಷಯದಲ್ಲಿ ಯಾವ ವಿಧವಾದ ಮಮತೆಯೂ ಇಲ್ಲದೆ ಸ್ವನಿಷ್ಠಾಭಿಜ್ಞಾನವಿರಬೇಕೆಂದು ಹಿಂದೆ ಹೇಳಿದುದನ್ನೆಲ್ಲಾ ಸ್ಮರಿಸುವ ಹಾಗೆ ಮಾಡುವ ಉತ್ಕೃಷ್ಟ ಶ್ಲೋಕವಾಗಿರುತ್ತದೆ **ಸ್ವಾಮೀ** - ನಾವು ಮೊದಲುಗೊಂಡು ಸರ್ವಚಿದಚಿತ್ತುಗಳೂ ಆತನಿಗೆ ಸ್ವಂ ಆಗಿ, ಆತನ ಪ್ರಯೋಜನಕ್ಕಾಗಿಯೇ ಆಗಿರುವುದರಿಂದ ಸರ್ವಶೇಷಿಯಾದ ಸರ್ವೇಶ್ವರನು, **ಸ್ವವಶಂ** - ತನಗೆ ಅಧೀನನಾದ, **ಮಾಂ** – ನನ್ನನ್ನು. **ಸ್ವದತ್ತ ಸ್ವಧಿಯಾ** - "**ದದಾಮಿ ಬುದ್ಧಿಯೋಗಂ ತಂ ಯೇನ ಮಾಮುಪಯಾಂತಿ ತೇ**" (ಗೀ. ೧೦.೧೦) ಎಂದು **ಹೇಳಿರುವ ಹಾಗೆ**

## ಅತಃ ದೋಷಸಪ್ತಕ ವಿವರ್ಜಿತ ಭರನ್ಯಾಸಸ್ಯ ಆವಶ್ಯಕತ್ವಮ್

### ಇದು ಆತ್ಮಸಮರ್ಪಣ ದಶೈಯಿಲ್ ಖ್ಯಾತಿ ಲಾಭ ಪೂಜಾ ಫಲ

ತನ್ನಿಂದಲೇ ಅನುಗ್ರಹಿಸಿ ಕೊಡಲ್ಪಟ್ಟ ಸ್ವಕೀಯವಾದ ಜ್ಞಾನದಿಂದ, **ಸ್ವಾರ್ಥಂ**- ಸ್ವಪ್ರಯೋಜನಕ್ಕಾಗಿಯೇ, **ಸ್ವಸ್ಮಿನ್** – ತನ್ನಲ್ಲಿ, **ಸ್ವಯಂ** - ತಾನಾಗಿಯೇ, **ಸ್ವಭರತ್ವೇನ** - ತಾನು ರಕ್ಷಿಸಿಬಿಡುವನೆಂಬ ಸಂಪೂರ್ಣ ನಂಬಿಕೆಯಿಂದ, **ನಿರ್ಭರಂ** – ರಕ್ಷಾಭರದ ಯೋಚನೆಯಿಲ್ಲದಿರೋಣ ಹೇಗೋ ಹಾಗೆ, **ನ್ಯಸ್ಯತಿ** - ಭರನ್ಯಾಸವನ್ನು ಮಾಡಿಸುತ್ತಾನೆ ಈ ಭರನ್ಯಾಸದಲ್ಲಿ **ಸ್ವಾಮೀ ಸ್ವಶೇಷಂ** ಎಂಬುದರಿಂದ, ಸ್ವರೂಪ ಸಮರ್ಪಣವೂ, **ಸ್ವಭರತ್ವೇನ ನಿರ್ಭರಂ** ಎಂಬುದರಿಂದ ರಕ್ಷಾಭರಸಮರ್ಪಣವೂ, **ಸ್ವಾರ್ಥಂ** ಎಂಬುದರಿಂದ ಫಲಸಮರ್ಪಣವೂ, ಹೇಳಲ್ಪಟ್ಟಿತು. **ಸ್ವಯಂ ಸ್ವಸ್ಮಿನ್ನ್ಯಸ್ಯತಿ** ಎಂಬುದರಿಂದ ಕರ್ತೃತ್ವದಲ್ಲಿ ಮಮತಾತ್ಯಾಗವೂ, ನಿರ್ಭರಂ ಎಂದು ಹೇಳಿರುವುದರಿಂದ ರಕ್ಷಾಭರದಲ್ಲಿ ತನಗೆ ಸಂಬಂಧವಿಲ್ಲವೆಂಬುದೂ, **ಸ್ವಶೇಷಂ ಸ್ವವಶಂ** ಎಂಬುದರಿಂದ ಸಂಪೂರ್ಣಪಾರತಂತ್ರ್ಯವೂ ಬೋಧಿಸಲ್ಪಟ್ಟಿತು. **ಸ್ವದತ್ತ ಸ್ವಧಿಯಾ** ಎಂಬುದರಿಂದ ಮಮತಾತ್ಯಾಗವೂ ಹೇಳಲ್ಪಟ್ಟಿತು ಹೀಗೆ ಅನುಸಂಧಾನಪೂರ್ವಕವಾಗಿ ಭರನ್ಯಾಸವನ್ನನುಷ್ಠಿಸಿ ಮುಕ್ತಿ ಹೊಂದುವನು

ಈ ಶ್ಲೋಕದಿಂದ ನಾವು ಮುಖ್ಯವಾಗಿ ಗ್ರಹಿಸತಕ್ಕದ್ದೇನೆಂದರೆ:—"ಮಾಮೇಕಂ ಶರಣಂ ವ್ರಜ" ಎಂಬ ಚರಮಶ್ಲೋಕದಲ್ಲಿ **ಮಾಮೇಕಂ** ಎಂದು ಏಕಶಬ್ದವಿರುವುದನ್ನು ನೋಡಿದರೆ ಏಕಮೇವ ಎಂದು ಅರ್ಥ ಮಾಡಿ, ಶ್ರೀಕೃಷ್ಣನನ್ನು ಮಾತ್ರವೇ ಉಪಾಯವಾಗಿ ನಂಬತಕ್ಕದ್ದೇ ವಿನಾ, ಇನ್ನು ಯಾವುದನ್ನೂ ಉಪಾಯವಾಗಿ ಅಂಗೀಕರಿಸುವುದು ಯುಕ್ತವಲ್ಲವು, ಆದುದರಿಂದ ಭರನ್ಯಾಸವನ್ನನುಷ್ಠಿಸಿದರೆ ಮಾಮೇಕಂ ಎಂಬುದು ವಿರುದ್ಧವಾಗುತ್ತದೆ, ಮುಮುಕ್ಷುವು ಪ್ರಪತ್ತಿಯನ್ನು ಮಾಡಿದರೆ ಇದೂ ಉಪಾಯವೆಂದೇ ತಿಳಿಯುವನು, ಇದೂ ವಿರುದ್ಧವು; ತನ್ನಲ್ಲಿ ಹೀಗೆ ಕರ್ತೃತ್ವ ಉಂಟಾದರೆ ಸರ್ವೇಶ್ವರನೇ ಕರ್ತಾ ತಾನಲ್ಲವೆಂಬ ಪರಜ್ಞಾನ ತಾನೇ ಹೇಗೆ ಉಂಟಾದೀತು ; ತಾನು ಪೂರ್ಣ ಪರತಂತ್ರನು ತನಗೆ ಪ್ರವೃತ್ತಿಯಲ್ಲಿ ಕರ್ತೃತ್ವವಿಲ್ಲವೆಂಬ ಅನುಸಂಧಾನ ತಾನೇ ಹೇಗೆ ಉಂಟಾಗಲು ಕಾರಣವಾಗುತ್ತದೆ? ಇತ್ಯಾದಿ ಶಂಕಾಗಳಿಗೆಲ್ಲಾ ಈ ಶ್ಲೋಕವು ಸಮಾಧಾನ ಹೇಳುತ್ತದೆ ಎಂಬದಾಗಿ ಭಾವಿಸತಕ್ಕದ್ದು

ಸಂಗ ಕರ್ತೃತ್ವೋಪಾಯತ್ವಙ್ಗಳಾಗಿರ ತು (ತೊ) ರಾಲತ್ತ ಭಗವದನು ಸಂಧಾನ ಕಟ್ಟಿಳೈ.

ಆದುದರಿಂದ ದೋಷಸಪ್ತಕಗಳಿಲ್ಲದ ಭರನ್ಯಾಸದ ಅವಶ್ಯಕತೆಯು.

**ಇದು** - ಈ ಮೇಲಿನ ಕಾರಿಕೆಯಲ್ಲಿ ಹೇಳಿರುವುದು, **ಆತ್ಮ ಸಮರ್ಪಣ ದಶೈಯಿಲ್** - ಭರಸಮರ್ಪಣೆ ಕಾಲದಲ್ಲಿ, **ಖ್ಯಾತಿ** – ತಾನು ತುಂಬಾ ಶ್ರೇಷ್ಠನಾದ ಪ್ರಪನ್ನನಾಗುವನೆಂಬ ಯಶಸ್ಸು, **ಲಾಭ** - ತನಗೆ ತುಂಬಾ ಲಾಭ ಉಂಟಾಯಿತೆಂಬ ಗರ್ವವು, **ಪೂಜಾ** – ಪ್ರಪನ್ನನಾದುದರಿಂದ ಭಾಗವತ ಗೋಷ್ಠಿಯಲ್ಲಿ ತನಗೆ ಸನ್ಮಾನವು ದೊರಕುತ್ತದೆಂಬ ಹೆಮ್ಮೆಯು, **ಫಲ** - ಸರ್ವೇಶ್ವರನಭಿಮಾನ ಉಂಟಾಯಿತೆಂಬ ಗರ್ವವು, **ಸಂಗ** – ಈ ಅನುಷ್ಠಾನ ಮೊದಲಾದವುಗಳಲ್ಲಿ ಅನ್ವಯ ಉಂಟೆಂದು ಭಾವಿಸೋಣವು, **ಕರ್ತೃತ್ವ** - ತಾನೇ ಭರನ್ಯಾಸವನ್ನು ಅನುಷ್ಠಿಸಿದೆನೆಂಬ ಭಾವವು, **ಉಪಾಯತ್ವ** - ಈ ಭರನ್ಯಾಸದ ಮೂಲಕ ಮೋಕ್ಷವು ಸಾಧಿಸಲ್ಪಟ್ಟಿತೆಂಬ ಅಭಿಮಾನವು, ಹೀಗೆ, **ತುರಾಲತ್ತ** - ಇಂತಹ ದೋಷಗಳೊಂದೂ ಇಲ್ಲದಿರುವ ಹಾಗೆ, **ಭಗವದನುಸಂಧಾನ ಕಟ್ಟಿಳೈ** - ಭಗವಂತನ ಪಾದಾರವಿಂದದಲ್ಲಿ ಈ ಆತ್ಮನನ್ನು ಸಮರ್ಪಿಸಿದ ಹಾಗೆ ಭಗವದನುಸಂಧಾನದ ನಿಬಂಧನೆಯು. **ಕಟ್ಟಿಳೈ** ಎಂದು ಏಕೆ ಹೇಳಿ ನಿಗಮನ ಮಾಡಿದರು ಎಂದರೆ, ವಿಧಿವಾಕ್ಯಬಲದಿಂದ ಮುಮುಕ್ಷುವು ಮಾಡಿಯೇ ತೀರಬೇಕೆಂಬ ಭಾವವು ವಾದಗಳ ಮೂಲಕ ಅನಾವಶ್ಯಕವೆಂದು ಬಿಡತಕ್ಕದ್ದಲ್ಲವೆಂಬುದೂ ತೋರಿಬರುತ್ತದೆ. ಇದೆಲ್ಲಾ ಮಾಡಿಸುವನು ಸರ್ವೇಶ್ವರನೇ. ಅವನಿಗೇ ಇವನು ಪರತಂತ್ರನು, ಇದನ್ನು ಮಾಡಲು ಈತನ ಅಲ್ಪ ಸುಕೃತ ವ್ಯಾಜದಿಂದ ಬುದ್ಧಿಯೋಗವನ್ನು ಕೊಡುವನೂ ಅವನೇ, ಈತನಿಗೆ ಮುಕ್ತಿಯನ್ನು ಕೊಡುವುದೂ ಸರ್ವೇಶ್ವರನ ಪ್ರಯೋಜನಕ್ಕಾಗಿಯೇ, ಹೀಗೆ ಅನುಸಂಧಾನವು ಆತ್ಮನಿಕ್ಷೇಪ ಕಾಲದಲ್ಲಿದ್ದರೆ, ಈ ಏಳುವಿಧವಾದಭಿಪ್ರಾಯಗಳಿಗೆ ಕಾರಣವೇ ಇರುವುದಿಲ್ಲವು. ಸ್ವಾರ್ಥಂ ಎಂದು ಸರ್ವೇಶ್ವರನ ಪ್ರಯೋಜನಕ್ಕಾದರೆ, ಈತನಿಗೆ ಖ್ಯಾತಿಯಾಗಲಿ, ಲಾಭವಾಗಲಿ, ಪೂಜೆಗಾಗಲಿ, ಫಲಕ್ಕಾಗಲಿ ಕಾರಣವೇ ಇಲ್ಲವು. ಎಲ್ಲಾ ಸರ್ವೇಶ್ವರನೇ ಮಾಡಿಸುವಾಗ, ಇವನಿಗೆ ಸಂಗವಾಗಲಿ ಕರ್ತೃತ್ವವಾಗಲಿ ಎಲ್ಲಿಯದು ? ಅಚೇತನವಾದ ಭರನ್ಯಾಸವು ಏನನ್ನು ಸಾಧಿಸಿಕೊಟ್ಟೀತು ? ಈ ವ್ಯಾಜಮೂಲಕ ಭಗವಂತನು ಪ್ರಸನ್ನನಾಗಿ ರಕ್ಷಿಸುವನೆಂಬ ಅನುಸಂಧಾನವಿರುವುದರಿಂದ ಉಪಾಯತ್ವ ಬುದ್ಧಿಯೂ ಇಲ್ಲವು

**ಆಗೈಯಾಲ್ ತಾಯ್ ಮುಲೈಪ್ಪಾಲ್ ಪೋಲೇ ವರುಗಿರ ಈಶ್ವರ ಪ್ರಸಾದತ್ತುಕ್ಕು ಸ್ತನಂಧಯನುಡೈಯ ಮುಲೈ ಯುಣ್ಗಿರ ವ್ಯಾಪಾರ ವ್ಪೋಲೆ ಇವನುಡೈಯ ಅಪೇಕ್ಷಾದಿಗಳ್. ಇತ್ತಾಲ್ ಸಿದ್ಧೋಪಾಯ ಸ್ವರೂಪತ್ತುಕ್ಕುಕ್ಕೊತ್ತೈವಾರಾದು.**

---

ಹಿಂದಿನ ಕಾರಿಕೆಯಲ್ಲಿ **ಸ್ವಯಂ ನ್ಯಸ್ಯತಿ** - ಸರ್ವೇಶ್ವರನು ತಾನೇ ಭರನ್ಯಾಸವನ್ನನುಷ್ಠಿಸುವ ಹಾಗೆ ಮಾಡಿ ಸ್ವತಂತ್ರನಾಗಿ ರಕ್ಷಿಸುವನೆಂದಲ್ಲವೇ, ಸರ್ವಕರ್ತೃತ್ವವೂ ಭಗವಂತನದೆಂದು ಹೇಳಲ್ಪಟ್ಟಿತು. ಹಾಗಾದರೆ ತಾಯಿಯು ತಾನೇ ಮಗುವಿಗೆ ಸ್ತನ್ಯವನ್ನು ಕೊಟ್ಟು ಕಾಪಾಡುವ ಹಾಗೆ ಸರ್ವೇಶ್ವರನು ತಾನೇ ಕಾಪಾಡುವನು, ಈ ವ್ಯಾಜರೂಪವಾದ ಭರನ್ಯಾಸಾಪೇಕ್ಷೆಯು ಸರ್ವೇಶ್ವರನಿಗೆ ಏತಕ್ಕೆ? **ಸ್ವಯಂ ನ್ಯಸ್ಯತಿ** ಎಂದು ಹೇಳಿರುವ ಹಾಗೆ **ಸ್ವಯಂ ರಕ್ಷತಿ** ಎಂದು ಏಕೆ ಹೇಳಕೂಡದು? ಎಂಬಾಕ್ಷೇಪಕ್ಕೆ ಸಮಾಧಾನ ಹೇಳಿ ವ್ಯಾಜರೂಪ ಭರನ್ಯಾಸವು ಆವಶ್ಯಕವೆನ್ನುತ್ತಾರೆ. ತಾಯಿಯೇನೋ ತುಂಬಾ ಕೃಪೆಯಿಂದಲೂ ವಾತ್ಸಲ್ಯದಿಂದಲೂ ತನ್ನ ಮಗುವಿಗೆ ಹಾಲು ಕೊಟ್ಟು ಸಂರಕ್ಷಿಸಲು ಕಂಕಣಬದ್ಧಳಾಗಿರಬಹುದು. ಮಗುವು ಹಾಲನ್ನು ಕುಡಿಯಬೇಕಷ್ಟೆ, ಕುಡಿದರಲ್ಲವೇ ಅದಕ್ಕೆ ಶಕ್ತಿ ಬರುತ್ತದೆ. ವ್ಯಾಧಿಪೀಡಿತವಾಗಿ ಕುಡಿಯದೇ ಇದ್ದರೆ ತಾಯಿಯು ಎದೆಯಲ್ಲಿ ಎಷ್ಟು ಹಾಲಿದ್ದರೇನು ಫಲ? ತಾಯಿಯೇ ರಕ್ಷಿಸುವವಳಾಗಿದ್ದರೂ ಮಗುವಿಗೆ ಕುಡಿಯುವ ವ್ಯಾಪಾರವು ಹೇಗೆ ಆವಶ್ಯಕವೋ, ಹಾಗೆಯೇ ಮುಮುಕ್ಷುವಿಗೂ ಸಿದ್ಧೋಪಾಯನು ರಕ್ಷಿಸಲು ಸಿದ್ಧನಾಗಿದ್ದರೂ ಸಾಧ್ಯೋಪಾಯಾನುಷ್ಠಾನವೂ ಆವಶ್ಯಕವು. ಈ ಅಭಿಪ್ರಾಯವನ್ನೇ ಮುಂದಿನ ವಾಕ್ಯದಿಂದ ಪ್ರತಿಪಾದಿಸುತ್ತಾರೆ:-

**ಆಗೈಯಾಲ್** - ಆ ಕಾರಣದಿಂದ, ಎಂದರೆ ಭರನ್ಯಾಸರೂಪ ವ್ಯಾಜವಾದ ಸಾಧ್ಯೋಪಾಯದ ಅನುಷ್ಠಾನವೂ ಆವಶ್ಯಕವೆಂದಾದುದರಿಂದ, **ತಾಯ್ ಮುಲೈಪ್ಪಾಲ್ ಪೋಲೇ ವರುಗಿರ** - ತಾಯಿಯ ಸ್ತನ್ಯದ ಹಾಗೆ ಬರುವ, **ಈಶ್ವರ ಪ್ರಸಾದತ್ತುಕ್ಕು** - ಸರ್ವೇಶ್ವರನ ಅನುಗ್ರಹಕ್ಕೆ, **ಸ್ತನಂಧಯನುಡೈಯ** - ಮಗುವಿನ, **ಮುಲೈಯುಣ್ಗಿರ ವ್ಯಾಪಾರವ್ಪೋಲೆ** - ಸ್ತನ್ಯಪಾನ ಮಾಡುವ ವ್ಯಾಪಾರದ ಹಾಗೆ, **ಇವನುಡೈಯ** - ಈ ಮುಮುಕ್ಷುವಿನ, **ಅಪೇಕ್ಷಾದಿಗಳ್** - ಗೋಪ್ತೃತ್ವವರಣವೇ ಮೊದಲಾದವುಗಳು; ಮೊದಲಾದವುಗಳೆಂದು ಹೇಳಿದುದರಿಂದ, ಇತರ ಪ್ರಪತ್ತಿಯ ಅಂಗಗಳು ಮತ್ತು ಆತ್ಮನಿಕ್ಷೇಪವೂ ಹೇಳಲ್ಪಟ್ಟವು. ತಾಯಿಯು ಸ್ತನ್ಯ ಕೊಟ್ಟರೂ, ಅದನ್ನು ಶಿಶುವು ಪಾನಮಾಡಬೇಕಾದುದು ಆವ

## ಅಥ ಪತ್ನೀ ಸಂಬಂಧ ಪ್ರಾಪ್ತ ಶಙ್ಕಾ ನಿರಸ್ಯಂತೇ

### ಇಪ್ಪಡಿ ನಾರಾಯಣ ಶಬ್ದತ್ತಿಲ್ ಸಿದ್ಧಮಾನ ಗುಣವಿಶೇಷ ಸಂಬಂಧ

ಶ್ಯಕವಾದುದರಿಂದ ಹಾಗೆ ಸ್ತನ್ಯಪಾನವನ್ನು ಯಾವಾಗ ಬಿಟ್ಟುಬಿಟ್ಟಿತೋ, ಆಗ ತಾಯಿಯು ಹಾಲನ್ನು ಕೊಡವುದು ನಿವರ್ತಿಸಿಹೋಗುತ್ತದೆ, ಹಾಗೆ ಜೀವನ ವ್ಯಾಪಾರವಾದ ಸಾಧ್ಯೋಪಾಯಾನುಷ್ಠಾನವಿಲ್ಲವೋ, ಮಾತೃವಿನೋಪಾದಿಯಲ್ಲಿ ಸಂರಕ್ಷಣೋದ್ಯುಕ್ತನಾದ ಸರ್ವೇಶ್ವರನು ಈತನ ರಕ್ಷಣೆಯಿಂದ ನಿವರ್ತಿಸುವನೆಂಬ ಭಾವವು ಇತ್ತಾಲ್ - ಈ ಸಾಧ್ಯೋಪಾಯವಾದ ಭರನ್ಯಾಸಾನುಷ್ಠಾನದಿಂದ, ಸಿದ್ಧೋಪಾಯದ ಸ್ವರೂಪಕ್ಕೆ, ಕೊತ್ತೈವಾರಾದು - ಸರ್ವಶಕ್ತಿತ್ವ ಕಾರುಣ್ಯ ಸ್ವತಂತ್ರತ್ವಾದಿಗಳ ಹಾನಿರೂಪದೋಷವು ಬರುವುದಿಲ್ಲವು ಮತ್ತೇನೆಂದರೋ ಈ ಸಾಧ್ಯೋಪಾಯವನ್ನು ಸಿದ್ಧೋಪಾಯನು ಎದುರುನೋಡುವುದು ವೈಷಮ್ಯ ನೈರ್ಘೃಣ್ಯ ಸರ್ವಮುಕ್ತಿ ಪ್ರಸಂಗಾದಿ ದೋಷಗಳ ಪರಿಹಾರಾರ್ಥವಾಗಿ ತನ್ನ ಸ್ವಾತಂತ್ರ್ಯ ಮೂಲಕ ಸ್ವಸಂಕಲ್ಪಸಿದ್ಧವಾಗಿ ಇದನ್ನು ಏರ್ಪಡಿಸಿರುವುದು ಸರ್ವೇಶ್ವರನ ಸ್ವಾತಂತ್ರ್ಯದ ಪರಾಕಾಷ್ಠೆ ಎಂಬ ದೇ ಅಭಿಪ್ರಾಯವು

ಈಗ ಎರಡು ಮುಖ್ಯ ಪೂರ್ವಪಕ್ಷಗಳಿಗೆ ಸಮಾಧಾನ ಹೇಳಿದರು —(೧) ಗುಣಸಂಬಂಧವಾದ ಪೂರ್ವಪಕ್ಷವು; ಸರ್ವಸ್ವಾತಂತ್ರ್ಯ, ನಿರ್ಹೇತುಕ ಕಾರುಣ್ಯ ಮೂಲಕ ಉಂಟಾದುದು, ಸರ್ವಸ್ವತಂತ್ರನಾಗಿರುವ ಕರುಣಾಸಾಗರನು ತಾನೇ ನಿರಪೇಕ್ಷವಾಗಿ ರಕ್ಷಿಸಬೇಕೆಂಬುದು, ಇದು ಪರಿಹರಿಸಲ್ಪಟ್ಟಿತು (೨) ಸಂಬಂಧ ವಿಶೇಷ ಮೂಲಕ ಉಂಟಾದುದು; ಶೇಷಿಯಾದವನು ತಾನೇ ಶೇಷನನ್ನು ರಕ್ಷಿಸಬೇಕೆಂಬುದು, ಇದೂ ಪರಿಹರಿಸಲ್ಪಟ್ಟಿತು

**ಮುಂದೆ ಪತ್ನೀ ಸಂಬಂಧದಿಂದುಂಟಾಗುವ ಶಙ್ಕಾದಿಗಳು ನಿರಸನ ಮಾಡಲ್ಪಡುತ್ತವೆ.**

ಮುಂದೆ ಏನು ಮಾಡುತ್ತಾರೆಂಬುವಕ್ಕೆ ಪ್ರತಿಜ್ಞಾ ವಾಕ್ಯವನ್ನು ಹೇಳ ತಕ್ಕದ್ದು ಸಂಪ್ರದಾಯವು ಅದಕ್ಕೆ ಮುಂಚೆ ಹಿಂದೆ ಹೇಳಿದುದಕ್ಕೂ ಮುಂದೆ ಹೇಳುವುದಕ್ಕೂ ಸಂಗತಿ ಏನೆಂಬುವನ್ನು ತಿಳಿಸುತ್ತಾರೆ — ಇಪ್ಪಡಿ - ಮೇಲೆ ಉಪಪಾದಿಸಿದ ರೀತಿಯಲ್ಲಿ, ನಾರಾಯಣ ಶಬ್ದತ್ತಿಲ್ ಸಿದ್ಧಮಾನ - ನಾರಾಯಣ ಶಬ್ದದಲ್ಲಿ ಅರ್ಥವಾಗಿ ವ್ಯಕ್ತವಾಗಿರುವ, ಗುಣವಿಶೇಷ - ಸ್ವಾತಂತ್ರ್ಯ

ವಿಶೇಷಙ್ಗಳ್ ಅಡಿಯಾಗ ಪ್ಪಿರಕ್ಕುಮ್ ಶಙ್ಕೈಙ್ಗಳುಕ್ಕು ಪರಿಹಾರಮ್ ಉದಾಹರಿತ್ತೋಮ್; ಇನಿ, (೧) ಲಕ್ಷ್ಮ್ಯಾ ಸಹ ಹೃಷೀಕೇಶೋ ದೇವ್ಯಾ ಕಾರುಣ್ಯರೂಪಯಾ । ರಕ್ಷಕಸ್ಸರ್ವಸಿದ್ಧಾನ್ತೇ ವೇದಾಂತೇಷು ಚ ಗೀಯತೇ" ಎಙ್ಗಿರಪಡಿಯೇ, ಸಪತ್ನೀಕನಾಯ್ ಕೊಣ್ಡು ಸರ್ವರಕ್ಷಣ ಯಜ್ಞ ದೀಕ್ಷಿತನಾನ ಸರ್ವೇಶ್ವರನುಕ್ಕು ಶ್ರೀಮಚ್ಛಬ್ದತ್ತಿಲೆ ಶೊಲ್ಲುಗಿರ ಪತ್ನೀ ಸಂಬಂಧತ್ತಿಲೇ ವರುಮ್ ಶಙ್ಕೈಙ್ಗಳುಕ್ಕು ದಿಙ್ಮಾತ್ರತ್ತಾಲೆ ಪರಿಹಾರಮ್ ಕಾಟ್ಟುಗಿರೋಮ್.

---

ಕಾರುಣ್ಯಗಳ, ಸಂಬಂಧ ವಿಶೇಷ – ಶೇಷಿ ಶೇಷ ಸಂಬಂಧಗಳ, ಅಡಿಯಾಗ – ಮೂಲಕವಾಗಿ, ಪಿರಕ್ಕುಮ್ - ಹುಟ್ಟುವ, ಶಙ್ಕೈಙ್ಗಳುಕ್ಕು - ಶಂಕಾಗಳಿಗೆ, ಪರಿಹಾರವನ್ನು, ಉದಾಹರಿತ್ತೋಮ್ - ಸಪ್ರಮಾಣವಾಗಿ, ಹೇಳಿದೆವು ಇನಿ ಮುಂದೆ, "ಲಕ್ಷ್ಮ್ಯಾ ಸಹ" ಎಂಬ ಶ್ಲೋಕದಲ್ಲಿ, ಎಙ್ಗಿರಪಡಿಯೇ - ಹೇಳಿರುವ ರೀತಿಯಲ್ಲಿ, ಸಪತ್ನೀಕನಾಯ್‌ಕೊಂಡು - ಸರ್ವೇಶ್ವರನ ಸಕಲ ದಿವ್ಯ ಚೇಷ್ಟಿತ ಲೀಲಾಗಳಲ್ಲೂ ಪತ್ನೀಸಹಿತನಾಗಿಯೇ, ಸರ್ವ ರಕ್ಷಕ ಯಜ್ಞದೀಕ್ಷಿತನಾನ – ಸರ್ವರನ್ನೂ ರಕ್ಷಿಸಬೇಕೆಂಬುದೇ ಒಂದು ಮಹಾಯಜ್ಞವು, ಅದನ್ನು ಮಾಡಬೇಕೆಂದು ಸಂಕಲ್ಪಮಾಡಿ ದೀಕ್ಷೆಯನ್ನು ವಹಿಸಿರುವ, ಸರ್ವೇಶ್ವರನಿಗೆ, ಶ್ರೀಮಚ್ಛಬ್ದತ್ತಿಲೆ ಶೊಲ್ಲುಗಿರ - ಶ್ರೀಮತ್ ಎಂಬ ದ್ವಯದ ಆದಿಪದದಲ್ಲಿ ಹೇಳಿರುವ ಪತ್ನೀಸಂಬಂಧದಲ್ಲಿ, ವರುಮ್ - ತೋರಿಬರುವ, ಶಙ್ಕೈಙ್ಗಳುಕ್ಕು - ಶಂಕಾಗಳಿಗೆ, ದಿಙ್ಮಾತ್ರತ್ತಾಲೆ - ಅದರ ಪರಿಹಾರದ ಮಾರ್ಗವನ್ನು ತೋರಿಸುವ ಹಾಗೆ ಎಂದರೆ ಅತಿ ಸಂಗ್ರಹವಾಗಿ, ಪರಿಹಾರಮ್ ಕಾಟ್ಟುಗಿರೋಮ್ - ಪರಿಹಾರವನ್ನು ತೋರಿಸಿಕೊಡುವೆವು. ಲಕ್ಷ್ಮೀತಂತ್ರ ಶ್ಲೋಕಾಭಿಪ್ರಾಯವೇನೆಂದರೆ.—ಹೃಷೀಕೇಶಃ - "ಹೃಷೀಕಾಣೀನ್ದ್ರಿಯಾಣ್ಯಾಹುಃ ತೇಷಾಮೀಶೋ ಯತೋಭವಾನ್ । ಹೃಷೀಕೇಶಸ್ತತೋ ವಿಷ್ಣುಃ ಖ್ಯಾತೋ ದೇವೇಷು ಕೇಶವಃ ॥" ಎಂದು ಹರಿವಂಶದೊಳಗೆ ಹೇಳಿರುವ ಹಾಗೆ ಇಂದ್ರಿಯಗಳಿಗೆ ನಿಯಾಮಕನಾದ ಶ್ರೀಹರಿಯು, ದೇವ್ಯಾ - ಕ್ರೀಡಾಸಕ್ತಳಾದ, ಕಾರುಣ್ಯರೂಪಯಾ - ಕಾರುಣ್ಯದಿಂದ ಯುಕ್ತವಾದ ದಿವ್ಯಮಂಗಳವಿಗ್ರಹವುಳ್ಳ, ಅಥವಾ "ಕರುಣಾಮಿವರೂಪಿಣೀಂ" (ದಯಾ) ಎಂದು ಹೇಳಿರುವ ಹಾಗೆ ಕಾರುಣ್ಯವೇ ಮೂರ್ತೀಭವಿಸಿದ ಹಾಗಿರುವ, ಕಾರುಣ್ಯವೇ ಸ್ವರೂಪವಾಗಿ ಉಳ್ಳ

---

(೧) ಲಕ್ಷ್ಮೀತಂತ್ರ ೨೮. ೧೪.

**ಲಕ್ಷ್ಮ್ಯಾ ಸಹ** - ಲಕ್ಷ್ಮಿಯೊಂದಿಗೇನೆ, **ರಕ್ಷಕಃ** - ಹೀಗೆ ಇಬ್ಬರೂ ಸೇರಿಯೇ ರಕ್ಷಕರೆಂದು, **ಸರ್ವ ಸಿದ್ಧಾನ್ತೇ** - ಎಲ್ಲಾ ಸಿದ್ಧಾಂತವಲ್ಲೂ, ಅವು ಯಾವುವೆಂದರೆ, ಮಂತ್ರ ಸಿದ್ಧಾನ್ತ, ತಂತ್ರ ಸಿದ್ಧಾನ್ತ, ತಂತ್ರಾಂತರ ಸಿದ್ಧಾನ್ತ, ಆಗಮ ಸಿದ್ಧಾನ್ತವೆಂಬದಾಗಿ ನಾಲ್ಕು ಸಿದ್ಧಾನ್ತಗಳು, **ವೇದಾಂತೇಪಿಚ** - ವೇದಾಂತದಲ್ಲೂ ಕೂಡ, **ಗೀಯತೇ** - ಗಾನಮಾಡಲ್ಪಟ್ಟಿದೆ, ಹೊಗಳಲ್ಪಟ್ಟಿದೆ ಎಂಬ ಭಾವವು ಈ ಶ್ಲೋಕವು ಸ್ವಸಿದ್ಧಾಂತವನ್ನು ತಿಳಿಯಪಡಿಸುತ್ತದೆಯಾದುದರಿಂದ, ಅದನ್ನು ಮೊದಲು ಉದಾಹರಿಸುತ್ತಾರೆ. ಈ ಶ್ಲೋಕದ ವ್ಯಾಖ್ಯಾನಪ್ರಾಯವನ್ನು **"ಸಪತ್ನೀಕನಾಯ್‌ಕ್ಕೊಣ್ಡು ಸರ್ವರಕ್ಷಣ ಯಜ್ಞದೀಕ್ಷಿತರ್ ಸರ್ವೇಶ್ವರರ್"** ಎಂಬದಾಗಿ ತಿಳಿಸಿರುತ್ತಾರೆ. ಜಗತ್ಸೃಷ್ಟಿ ಸ್ಥಿತಿ ಲಯಗಳು, ಚೇತನರಿಗೆ ಉಪಾಯೋಪೇಯವಾಗಿರೋಣ, ಅವತಾರಗಳಲ್ಲಿ ದಿವ್ಯಚೇಷ್ಟಿತಗಳು, ಮೋಕ್ಷಪ್ರದತ್ವ, ಇವುಗಳನ್ನೆಲ್ಲಾ ಸರ್ವೇಶ್ವರನು ಲಕ್ಷ್ಮೀಯುಕ್ತನಾಗಿಯೇ, ಲಕ್ಷ್ಮೀಸಹಾಯಕನಾಗಿಯೇ ನಡೆಸುತ್ತಾನಾದುದರಿಂದ ಲಕ್ಷ್ಮೀಯುಕ್ತನಾಗಿಯೇ ಚೇತನರಿಗೆ ಉಪಾಯಭೂತನಾಗಿ ರಕ್ಷಕನು ಎಂಬುದು ಪ್ರತಿಜ್ಞಾವಾಕ್ಯವು. ಇದನ್ನು ಪೂರ್ವಪಕ್ಷ ಮಾಡಿ ಸ್ಥಾಪಿಸುತ್ತಾರೆ. ಇಲ್ಲಿ ಯಜ್ಞದೀಕ್ಷಿತನು ಸರ್ವೇಶ್ವರನು ಎಂದು ಏಕೆ ಹೇಳಿದರೆಂದರೆ, ಭಕ್ತರನ್ನು ರಕ್ಷಿಸುವುದೆಂಬುದು ಒಂದು ಯಜ್ಞದೀಕ್ಷೆಯು, ಯಜ್ಞದಲ್ಲಿ ಯಜಮಾನನು ಸಮಸ್ತ ಕಾರ್ಯಗಳನ್ನೂ ಸಪತ್ನೀಕನಾಗಿಯೇ ಮಾಡಬೇಕೇ ವಿನಾ, ಪತ್ನಿಯನ್ನು ಬಿಟ್ಟು ಮಾಡುವುದು ಯುಕ್ತವಲ್ಲವು. ಅಪತ್ನೀಕನು ರಕ್ಷಾರೂಪ ಯಜ್ಞದೀಕ್ಷೆಯನ್ನು ಆಚರಿಸಕೂಡದಷ್ಟೇ ?

ಆದರೆ ಇಲ್ಲಿ **ಲಕ್ಷ್ಮ್ಯಾ ಸಹ**, ಲಕ್ಷ್ಮಿಯೊಂದಿಗೆ ಸರ್ವೇಶ್ವರನಿರುವವನಾಗಿ ರಕ್ಷಕನಾಗಿದ್ದಾನೆ ಎಂದು ಹೇಳಿದರೆ, ಲಕ್ಷ್ಮಿಯೂ ಸಹ ರಕ್ಷಕಳು ಎಂದು ಹೇಗಾಗುತ್ತದೆ ? ಸುಮ್ಮನೆ ಜೊತೆಯಲ್ಲಿರಕೂಡದೆ ಎಂದರೆ ಲಕ್ಷ್ಮಿಯೊಂದಿಗೇನೇ ರಕ್ಷಕನೆಂದು ತೋರುವುದಕ್ಕಾಗಿ, **ದೇವ್ಯಾ ಕಾರುಣ್ಯರೂಪಯಾ** ಎಂಬ ಎರಡು ವಿಶೇಷಣಗಳು ಕೊಟ್ಟಿರುತ್ತವೆ. ಹೃಷೀಕೇಶನು ರಕ್ಷಕನೆಂಬುದು ನಿರ್ವಿವಾದ ವಿಷಯವಾದುದರಿಂದ, ಹೃಷೀಕೇಶ ಶಬ್ದಕ್ಕೆ ಯಾವ ವಿಶೇಷಣವೂ ಇಲ್ಲವು. ಲಕ್ಷ್ಮಿಯೂ ರಕ್ಷಕಳು ಹೌದೋ ಅಲ್ಲವೋ ಎಂಬ ವಿವಾದ ಉಂಟಾಗಬಹುದು ಎಂದು ಭಾವಿಸಿ, ಅದನ್ನು ತಪ್ಪಿಸುವುದಕ್ಕಾಗಿಯೇ, **ದೇವ್ಯಾ ಕಾರುಣ್ಯರೂಪಯಾ** ಎಂಬ ಎರಡು ವಿಶೇಷಣಗಳು **ಲಕ್ಷ್ಮ್ಯಾ ಸಹ** ಎಂಬುದಕ್ಕೆ ಕೊಡಲ್ಪಟ್ಟಿವೆ. **ದಿವ್ ಕ್ರೀಡನೇ** ಎಂಬ ಧಾತ್ವರ್ಥದಿಂದ **ದೇವ್ಯಾ** - ಜಗತ್ತಿನ ಲೀಲೆಯಲ್ಲಿ ಆಸಕ್ತಳಾದ ಎಂದು ಹೇಳಲ್ಪಟ್ಟಿತು. **"ಸ ಏಕಾಕೀ ನರಮೇತ"** ಎಂಬ ಉಕ್ತಿಗನುಸಾರವಾಗಿ ಸರ್ವೇಶ್ವರನು ಲಕ್ಷ್ಮಿಯೊಂದಿಗೆ ಸೇರಿಯೇ ಈ ಲೀಲಾ

ವಿಭೂತಿಯ ಸರ್ವವಿಧ ವ್ಯಾಪಾರಗಳನ್ನೂ ನಡೆಸುತ್ತಾನೆ. ಶ್ರುತಿಯೂ ಕೂಡ ಶ್ರದ್ಧಯಾದೇವೋ ದೇವತ್ವಮಶ್ನುತೇ, ಶ್ರದ್ಧಯಾ - ಲಕ್ಷ್ಮಿಯೊಂದಿಗೆ ಲೀಲಾಸಕ್ತನಾದ ಸರ್ವೇಶ್ವರನು ಲೀಲಾರಸವನ್ನನುಭವಿಸುವನೆಂದು ಹೇಳಲ್ಪಟ್ಟಿರುತ್ತದೆ. ರಕ್ಷಣೆಗೆ ಕಾರುಣ್ಯವು ಮುಖ್ಯ ಗುಣವಾದುದರಿಂದ, ಅಪಾಸ್ತನಿಗ್ರಹಳಾದ ಕರುಣಾಮೂರ್ತಿಯಾದ ಲಕ್ಷ್ಮಿಯೊಂದಿಗೆ ರಕ್ಷಣೆಯು ಸರಸವು. ಹೀಗೆ ಈ ಎರಡು ವಿಶೇಷಣಗಳೂ ಇರುವದರಿಂದ ರಕ್ಷಣೋಪಾಯದಲ್ಲಿ ಲಕ್ಷ್ಮಿಯು ಸೇರಿದವಳೆಂಬುದು ವ್ಯಕ್ತವು ಹೀಗೆ ವೇದಾಂತದಲ್ಲೂ ಸರ್ವಸಿದ್ಧಾಂತದಲ್ಲೂ ಹೇಳಲ್ಪಟ್ಟಿದೆ ಎಂಬರ್ಥವು. ಸರ್ವಸಿದ್ಧಾನ್ತೇ ವೇದಾನ್ತೇಷು ಎಂದು ಹೇಳಿರುವದರಿಂದ ಈ ಅಭಿಪ್ರಾಯವು ಸರ್ವಸಿದ್ಧಾಂತಿಗಳಿಗೂ ಅಭಿಮತವಾಗಿ ಶ್ರುತಿಯಲ್ಲೂ ಹೇಳಲ್ಪಟ್ಟಿರುವದರಿಂದ, ತಾವು ಬರೀ ವಾದವನ್ನು ದೂರೀಕರಿಸಿ ತಮ್ಮ ಪೂರ್ವಾಚಾರ್ಯರುಗಳಿಗೆ ಅಭಿಮತವಾದುದಾಗಿಯೂ ಶಾಸ್ತ್ರಪ್ರಮಾಣಸಿದ್ಧವಾದುದಾಗಿಯೂ ಇರುವದರಿಂದ ತಮ್ಮ ಸಿದ್ಧಾಂತವು ಪೂರ್ಣ ದಾರ್ಢ್ಯವುಳ್ಳದುದೆಂಬ ಭಾವವೂ ದ್ಯೋತಿತವು. ಪತ್ನೀಸಂಬಂಧತ್ತಿಲ್ ವರುಮ್ ಕಲಕ್ಕಙ್ಗಳ್ ಎಂಬುವದರಿಂದ, ಲಕ್ಷ್ಮಿಗೆ ಮೇಲೆ ಹೇಳಿದವುಗಳಲ್ಲಿ ಸಂಬಂಧವಿಲ್ಲವೆಂಬುದೇ ಶಙ್ಕಾಗಳೆಂಬುವದೂ ಈ ವಾಕ್ಯದಲ್ಲಿ ತೋರಿ ಬರುತ್ತವೆ ಇವುಗಳಿಗೆ ಪರಿಹಾರವನ್ನು ದಿಙ್ಮಾತ್ರದಿಂದ ತೋರಿಸುವೆವು ಎಂದು ಹೇಳಿರುವದರಿಂದ, ಹಿಂದಿನ ಎರಡು ಪ್ರಬಲ ಶಙ್ಕಾಗಳಹಾಗಲ್ಲದೆ, ಸಾಧಾರಣವಾಗಿ, ಅವುಗಳನ್ನು ಪರಿಹರಿಸುವದು ತುಂಬಾ ಸುಲಭವೆಂಬಭಿಪ್ರಾಯದಿಂದಲಾಗಲಿ ಅಥವಾ ಶಙ್ಕೆಗೆ ಯಾವ ಕಾರಣವೂ ಪ್ರಮಾಣವೂ ಇಲ್ಲದುದರಿಂದ ಅದನ್ನು ನಿರಸನ ಮಾಡುವದು ಲೀಲಾರೂಪವಾದುದೆಂದಾಗಲಿ, ಅಥವಾ ಇತರ ಸ್ಥಳಗಳಾದ ಚತುಶ್ಲೋಕಿಯ ವ್ಯಾಖ್ಯಾನ ಮೊದಲಾದವುಗಳಲ್ಲಿ ವಿಸ್ತರವಾಗಿ ಹೇಳಿರುವದರಿಂದ ಇಲ್ಲಿ ಸೂಕ್ಷ್ಮವಾಗಿ ಹೇಳುವೆವೆಂಬಭಿಪ್ರಾಯದಿಂದಾಗಲಿ ಹಾಗೆ ಪ್ರಯೋಗವು.

### ೧. ಮೊದಲು ಲಕ್ಷ್ಮಿಗೆ ಉಪಾಯದಲ್ಲಿ ಸಂಬಂಧವಿಲ್ಲವೆಂಬ ವಾದವು ನಿರಸನ ಮಾಡಲ್ಪಡುತ್ತದೆ.

---

ಇತರರು ಹೇಳುವ ಪೂರ್ವ ಪಕ್ಷವನ್ನು ಅನುವಾದ ಮಾಡುತ್ತಾರೆ:—ಶಿಲರ್ ಕೆಲವರು, ದ್ವಯತ್ತಿಲ್ – ದ್ವಯಮಂತ್ರದ ಪೂರ್ವಖಂಡದಲ್ಲಿರುವ, ಶ್ರೀಮನ್ನಾರಾಯಣ ಎಂಬಲ್ಲಿರುವ ಲಕ್ಷ್ಮೀಯುಕ್ತನಾದ ನಾರಾಯಣನೆಂಬ ಪದದಲ್ಲಿರುವ ಶ್ರೀಮತ್ ಎಂಬ ಶಬ್ದವನ್ನು, ಉಪಲಕ್ಷಣ ಪರಮೆನ್ರುಮ್–ಉಪಲಕ್ಷಣದ ಅರ್ಥಬೋಧಕವೆಂದೂ, ಉತ್ತರ ಖಂಡದಲ್ಲಿ ಶ್ರೀಮತೇ ನಾರಾಯ

## ೧. ಪ್ರಥಮಂ, ಲಕ್ಷ್ಮ್ಯಾಃ ಉಪಾಯತ್ವೇ ನಾನ್ವಯ ಇತಿ ಪಕ್ಷಂ ನಿರಸ್ಯತಿ.

ಶಿಲರ್ ದ್ವಯತ್ತಿಲ್ ಪೂರ್ವಖಂಡತ್ತಿಲ್ ಶ್ರೀಮಚ್ಛಬ್ದವುಮ್ ಉಪಲಕ್ಷಣ ಪರಮೆನ್ರುಮ್, ಉತ್ತರಖಂಡತ್ತಿಲ್ ಶ್ರೀಮಚ್ಛಬ್ದಮ್ ವಿಶೇಷಣ ಪರಮೆನ್ರುಮ್, ಶಿರಿಯ ಚೊನ್ನಾರ್ಗಳ್.

---

ಣಾಯ ಎಂಬಲ್ಲಿರುವ ಶ್ರೀಮಚ್ಛಬ್ದವು, ವಿಶೇಷಣಪರಮೆನ್ರು-ವಿಶೇಷಣವನ್ನು ಬೋಧಿಸುತ್ತದೆಂದೂ, ಶಿರಿಯ ಚೊನ್ನಾರ್ಗಳ್-ಹೀಗೆ ಶ್ರೀಮತ್ ಎಂಬ ಒಂದೇ ಪದಕ್ಕೆ ಎರಡು ವಿಧವಾದ ವ್ಯತ್ಯಸ್ತವಾದ ಬೇರೆ ಬೇರೆ ಅರ್ಥಗಳನ್ನು ಹೇಳಿದರು. ಇಲ್ಲಿ ಮೊದಲಿನ ಶ್ರೀಮಚ್ಛಬ್ದವು ಉಪಲಕ್ಷಣವೆಂದೂ, ಎರಡನೆಯದಾದ ಶ್ರೀಮತೇ ಎಂಬ ಪದದಲ್ಲಿನ ಶ್ರೀಮಚ್ಛಬ್ದವು ವಿಶೇಷಣವೆಂದೂ ಹೇಳುತ್ತಾರೆಂಬ ಭಾವವು. ಒಂದು ವಸ್ತುವಿನಲ್ಲಿ ಒಂದು ಧರ್ಮವು ಇರುವದಾಗಿ ವ್ಯಾವರ್ತಿಸಿ ಹೇಳಿದರೆ, ಆ ಧರ್ಮವು ಆ ವಸ್ತುವಿಗೆ ವಿಶೇಷಣವೆನಿಸುತ್ತದೆ ಹೇಗೆಂದರೆ:— ನೀಲವಾದ ಘಟವು. ನೈಲ್ಯವು ಘಟದೊಂದಿಗೆ ಇರುವದರಿಂದ ಅದು ವಿಶೇಷಣವು. ಒಂದು ಧರ್ಮವು ವಸ್ತುವಿನಲ್ಲಿಲ್ಲದೆ ಅದರ ಹೊರಗೆ ಇರುವದಾಗಿ ವ್ಯಾವರ್ತಿಸಿ ಹೇಳಿದರೆ ಆ ಧರ್ಮವು ಉಪಲಕ್ಷಣವೆನಿಸುತ್ತದೆ. ಒಂದು ಲಕ್ಷಣವು ಲಕ್ಷ್ಯದಲ್ಲಿ ಯಾವಾಗಲೂ ಇದ್ದರೆ ಅದು ವಿಶೇಷಣವೆಂದೂ ಒಂದು ಕಾಲದಲ್ಲಿದ್ದು, ಇನ್ನೊಂದುಕಾಲದಲ್ಲಿಲ್ಲದಿದ್ದರೆ ಉಪಲಕ್ಷಣವೆಂದೂ ಹೇಳತಕ್ಕದ್ದೆಂಬ ಭಾವವು ಹೇಗೆಂದರೆ, ಸಾರಸಪಕ್ಷಿ ಇರುವ ಗದ್ದೆಯು ದೇವದತ್ತನದು, ಎಂಬಲ್ಲಿ ಸಾರಸಪಕ್ಷಿ ಇರುವದು ಎಂಬುವ ಧರ್ಮವು ಗದ್ದೆಯೊಂದಿಗೇನೇ ಇಲ್ಲದೆ ಹೊರಗೆ ಇರುವದರಿಂದ ಉಪಲಕ್ಷಣವೆಂದು ಹೆಸರು. ಮೇಲಿನ ನೀಲಘಟವೆಂಬಲ್ಲಿ, ಈ ಘಟವಿರುವ ಕಡೆಯಲ್ಲೆಲ್ಲಾ ನೈಲ್ಯವು ಇರುವದರಿಂದ ನೈಲ್ಯವೇ ವಿಶೇಷಣವು, ಆದರೆ ಗದ್ದೆಯಲ್ಲಿ ಕೂತಿರುವ ಸಾರಸಪಕ್ಷಿಯು ಸ್ವಲ್ಪ ಕಾಲವಾದ ನಂತರ ಗದ್ದೆಯನ್ನು ಬಿಟ್ಟು ಹೋಗಿರಬಹುದು ಆದುದರಿಂದ ಅದು ಉಪಲಕ್ಷಣವು ಎಂಬ ಭಾವವು. ದ್ವಯದ ಪೂರ್ವ ಖಂಡದ ಶ್ರೀಮಚ್ಛಬ್ದವು ಉಪಲಕ್ಷಣವೆಂದು ಹೇಳುವದರಲ್ಲಿ ಲಕ್ಷ್ಮಿಯು ಉಪಾಯ ಕೋಟಿಗೆ ಹೊರಗೆ ಇರುವಳೆಂದೂ, ಉತ್ತರಖಂಡದ ಶ್ರೀಮಚ್ಛಬ್ದವು ಪ್ರಾಪ್ಯಕೋಟಿಗೆ ಸೇರಿ, ಮುಕ್ತರಿಂದ ಕೈಂಕರ್ಯಗಳನ್ನು ಸ್ವೀಕರಿಸುವದರಿಂದ ವಿಶೇಷಣವೆಂದೂ, ಹೇಳುವರು. ಒಬ್ಬಳಾದ, ಸರ್ವದಾ ನಾರಾಯಣನೊಂದಿ

ಇವ್ವಿಡತ್ತಿಲ್ ಶಬ್ದಮ್ ಏಕರೂಪಮಾಯಿರುಕ್ಕ, ಸ್ವಾರಸ್ಯತ್ತುಕ್ಕು ಬಾಧಕಮುಮಿನ್ರಿಕ್ಕೇ ಇರುಕ್ಕ, "ಸ್ವರೂಪಂ ಸ್ವಾತಂತ್ರ್ಯ" ಮಿತ್ಯಾದಿಗಳಿಲಿ ಪ್ರಸಿದ್ಧಮಾನ ಕೂಟಸ್ಥ ಸಂಪ್ರದಾಯ ವಿರುದ್ಧಮಾಗಪ್ಪಣ್ಣಿಗಿರ ಇವ್ವಿ ಭಾಗಮ್ ಅನುಪಪನ್ನಮ್.

---

ಗೇನೇ ಸೇರಿ ಅಪೃಥಕ್ಸಿದ್ಧವಿಶೇಷಣಳಾದ ಲಕ್ಷ್ಮಿಯನ್ನು ಬೋಧಿಸುವ ಶ್ರೀಮಚ್ಛಬ್ದವು, ಒಂದು ಕಡೆ ಉಪಲಕ್ಷಣವು, ಒಂದು ಕಡೆ ವಿಶೇಷಣವು ಎಂಬುದು ಹೇಗೆ ಸಮಂಜಸವೋ ತಿಳಿಯದು ಎಂಬ ಭಾವದಿಂದ ಅಪ್ಪಣೆ ಕೊಡಿಸಿದ ವಾಕ್ಯವಾಗಿರುತ್ತದೆ. ಅದೂ ಅಲ್ಲದೆ ವಿಶೇಷಣವೆಂದು ಹೇಳುವ ಶ್ರೀಮಚ್ಛಬ್ದವು ಶ್ರೀಮತೇ ಎಂದು ಪ್ರತ್ಯೇಕ ಪದವಾಗಿರುವಾಗ, ಉಪಾಯವನ್ನು ಬೋಧಿಸುವ ನಾರಾಯಣ ಶಬ್ದದೊಂದಿಗೆ ಸಮಾಸ ಪದವಾಗಿರುವ ಶ್ರೀಮಚ್ಛಬ್ದವು ವಿಶೇಷಣವಲ್ಲ, ಉಪಲಕ್ಷಣ ಮಾತ್ರವೇ ಎಂದು ಹೇಳಿರುವದು ಸಾಹಸವೇ ಸರಿ. ಅದಕ್ಕೆ ಪ್ರಮಾಣ ಬಲವಾದರೂ ಇದ್ದರೆ ಹಾಗೆ ಹೇಳಬಹುದಾಗಿತ್ತು. ಪ್ರಮಾಣ ಬಲವು ಮೊದಲಿಯೇ ಇಲ್ಲವು.

ಹೀಗೆ ಮಂತ್ರಪ್ರತಿಪಾದ್ಯವಾದ ಒಂದೇ ಅರ್ಥವುಳ್ಳ ಪದಕ್ಕೆ ವ್ಯತ್ಯಸ್ತವಾಗಿ ಅರ್ಥ ಹೇಳುವದು ಸ್ವಾರಸ್ಯಕ್ಕೆ ಭಾಧಕವೂ, ಪ್ರಮಾಣವಿರುದ್ಧವೂ ಆಗಿರುವದಲ್ಲದೆ, ಹಾಗೆ ಹೇಳುವವರ ಪರಮಾಚಾರ್ಯ ಸೂಕ್ತಿಗಳೇನೇ ವಿರೋಧವೆಂದು ವ್ಯಕ್ತಪಡಿಸುತ್ತಾರೆ— ಇವ್ವಿಡತ್ತಿಲ್ - ಈ ಸ್ಥಳದಲ್ಲ ಎಂದರೆ ದ್ವಯಮಂತ್ರದಲ್ಲಿ ಶಬ್ದಮ್ ಏಕರೂಪಮಾಯಿರುಕ್ಕ-ಪ್ರಕೃತಿಪ್ರತ್ಯಯಗಳಿಂದ ಸೇರಿದ ಪದವು ಒಂದೇ ವಿಧವಾಗಿದ್ದರೂ, ಒಂದೇ ವ್ಯಕ್ತಿಯನ್ನೇ ಬೋಧಿಸಿದರೂ, ಸ್ವಾರಸ್ಯತ್ತುಕ್ಕು ಬಾಧಕಮುಮಿನ್ರಿಕ್ಕೇ-ಸ್ವಾರಸ್ಯಕ್ಕೇನೂ ತೊಂದರೆಯು ಇಲ್ಲದಿದ್ದರೂ, ಇಲ್ಲಿ ಸ್ವಾರಸ್ಯವ್ಯಾವುದೆಂದರೆ ಶಾಸ್ತ್ರಗಳಿಂದ ತೋರಬರುವ ಲಕ್ಷ್ಮೀ ಮಾಹಾತ್ಮ್ಯೆಯೂ, ಅಥವಾ ಸರಸವಾದ ಅರ್ಥಕ್ಕೆ ತೊಂದರೆ ಏನೂ ಇಲ್ಲದಿರೋಣವೂ, "ಸ್ವರೂಪಂ ಸ್ವಾತಂತ್ರ್ಯಮ್" ಇತ್ಯಾದಿಗಳಿಲೀ - ಸ್ವರೂಪಂ ಸ್ವಾತಂತ್ರ್ಯಮ್ ಎಂಬಿವೇ ಮೊದಲಾದ ಅಭಿಯುಕ್ತರ ದಿವ್ಯ ಸೂಕ್ತಿಗಳಲ್ಲಿ, ಪ್ರಸಿದ್ಧಮಾನ - ಚೆನ್ನಾಗಿ ತೋರಿಬರುವ, ಕೂಟಸ್ಥಸಂಪ್ರದಾಯವಿರುದ್ಧಮಾಕ - ಕೂಟಸ್ಥರೆಂದರೆ ಪ್ರಪನ್ನ ಜನಸಮೂಹಕ್ಕೆಲ್ಲಾ ಮುಖ್ಯಸ್ಥರು ಇಲ್ಲಿ ನಮ್ಮಾಳ್ವಾರ್, ನಾಥಮುನಿ, ಯಾಮುನ, ಭಾಷ್ಯಕಾರರೂ ಅವರಿಂದೀಚೆಗೆ ತನ್ನ ಕಾಲಂಬಿಗಳಾದ ಪರಾಶರಭಟ್ಟರೇ ಮೊದಲಾದವರು ಹೇಳಲ್ಪಟ್ಟರು, ಇಂತ

ವರ ಆಚಾರಕ್ಕೆ ವಿರುದ್ಧವಾಗಿ, ಶಙ್ಗಿರ - ಮಾಡುವ, ಇವ್ವಿಭಾಗವ್ - ಈ ವ್ಯತ್ಯಾಸವು, ಮೊದಲನೆಯ ಶ್ರೀಮಚ್ಛಬ್ದವು ಉಪಲಕ್ಷಣವು ಎರಡನೆಯದು ವಿಶೇಷಣವು ಎಂಬ ವ್ಯತ್ಯಾಸವು, ಅನುಪಪನ್ನವ್ - ಅಸಮಂಜಸವು. ಈ ಅಭಿಪ್ರಾಯವು ಸರಿಯಲ್ಲವೆಂಬುದಕ್ಕೆ ಮೂರು ಕಾರಣಗಳನ್ನು ಹೇಳಿದರು— (೧) ಒಂದೇ ಮಂತ್ರದಲ್ಲಿರುವ ಒಂದೇ ಪ್ರಕೃತಿ ಪ್ರತ್ಯಯವುಳ್ಳ ಒಂದೇ ಅರ್ಥವುಳ್ಳ ಶಬ್ದಕ್ಕೆ ಬೇರೆ ಬೇರೆ ಅಭಿಪ್ರಾಯಗಳನ್ನು ಕಲ್ಪಿಸುವದು ಯುಕ್ತವಲ್ಲವು, (೨) ಒಂದೇ ವಿಧವಾದ ಅರ್ಥವನ್ನು ಹೇಳುವದರಿಂದ ಸ್ವಾರಸ್ಯಕ್ಕೇನೂ ತೊಂದರೆ ಇಲ್ಲದುದರಿಂದ ಭಿನ್ನಾಭಿಪ್ರಾಯಗಳನ್ನು ಕಲ್ಪಿಸುವದು ಸರಿಯಲ್ಲವು ಸ್ವಾರಸ್ಯ ವಿದ್ದರೆ ಭಿನ್ನಾಭಿಪ್ರಾಯಗಳನ್ನು ಕಲ್ಪಿಸಬಹುದು. ಅಂತಹ ಸ್ವಾರಸ್ಯವೂ ಕಾಣಲಿಲ್ಲವು. (೩) ಹಾಗೆ ಕಲ್ಪಿಸುವದು, ಪರಮಾಚಾರ್ಯರುಗಳಾದ ನಾಥಮುನಿ ಯಾಮುನ ಯತಿರಾಜರುಗಳ ಮತ್ತು ಪರಾಶರ ಭಟ್ಟರೇ ಮೊದಲಾದವರುಗಳ ದಿವ್ಯ ಸೂಕ್ತಿಗಳಿಗೆ ವಿರೋಧವಾದುದರಿಂದಲೂ ಅಸಮಂಜಸವು. ಹೀಗೆ ಮೂರು ಕಾರಣಗಳಿಂದ ಸರಿಯಲ್ಲವೆಂದು ಹೇಳಿ ನಿದರ್ಶನಕ್ಕಾಗಿ ಪರಾಶರಭಟ್ಟರ ದಿವ್ಯ ಸೂಕ್ತಿಯನ್ನು ಉದಾಹರಿಸುತ್ತಾರೆ. ಆ ಶ್ಲೋಕವು ಯಾವುದೆಂದರೆ —

ಸ್ವರೂಪಂ ಸ್ವಾತಂತ್ರ್ಯಂ ಭಗವತ ಇದಂ ಚಂದ್ರವದನೇ ।
ತ್ವದಾಶ್ಲೇಷೋತ್ಕರ್ಷಾದ್ಭವತಿ ಖಲು ನಿಷ್ಕರ್ಷ ಸಮಯೇ ।
ತ್ವಮಾಸೀರ್ಮಾತಃ ಶ್ರೀಃ ಕಮಿತು ರಿದಮಿತ್ಥಂ ತ್ವವಿಭವ ।
ಸ್ತದನ್ತರ್ಭಾವಾತ್ತ್ವಂ ನ ಪೃಥಗಭಿಧತ್ತೇ ಶ್ರುತಿರಪಿ ॥ (ಶ್ರೀಗುಣ ೨೮)

ಇದರರ್ಥವು—ಹೇ ಚಂದ್ರವದನೇ - ಚಂದ್ರನಿಗೆ ಸಮಾನವಾದ ಮುಖವುಳ್ಳ ಲಕ್ಷ್ಮಿಯೇ, ಭಗವತಃ - ಪುರುಷಸೂಕ್ತದಲ್ಲಿ ನಾರಾಯಣ ಶಬ್ದ ಸಾಮಾನಾಧಿಕರಣ್ಯದಿಂದ ಹೇಳಲ್ಪಟ್ಟ ಶ್ರುತಿ ಪ್ರತಿಪಾದಿತಗಳಾದ ಸರ್ವ ಭಗವಚ್ಛಬ್ದ ವಾಚನಾದ ಸರ್ವೇಶ್ವರನ, ಸ್ವರೂಪಂ - ಸ್ವರೂಪವೂ, ಸ್ವಾತಂತ್ರ್ಯವೂ ಸಹ ತ್ವದಾಶ್ಲೇಷೋತ್ಕರ್ಷಾತ್ - "ನಿತ್ಯೈವೈಷಾ ಜಗನ್ಮಾತಾ ವಿಷ್ಣೋಃಶ್ರೀ ರನಪಾಯಿನೀ" ಎಂಬ ಪರಾಶರೋಕ್ತಿಯ ಪ್ರಕಾರ ನಿನ್ನೊಂದಿಗೆ ಯಾವಾಗಲೂ ನಿತ್ಯಯೋಗವಿರುವ ಮಹಿಮೆಯಿಂದ ಭವತಿ ಖಲು - ಉಂಟಾಗುತ್ತದೆಯಲ್ಲವೇ ? ಹೇ ಮಾತಃ - ಓ ತಾಯಿಯೇ, ಶ್ರೀಃ-ಆರು ವಿಧ ಅರ್ಥಗಳನ್ನು ಒಳಗೊಂಡಿರುವ (ಶ್ರೀಸ್ತುತಿ)ಶ್ರೀ ಶಬ್ದವಾಚ್ಯಳಾದ ಲಕ್ಷ್ಮಿಯೇ, ನಿಷ್ಕರ್ಷಸಮಯೇ- ಈ ಸ್ವರೂಪ ಸ್ವಾತಂತ್ರ್ಯಗಳನ್ನು ನಿರ್ಣಯಿಸುವ ಸಮಯದಲ್ಲಿ ಕಮಿತುಃ - ನಿನಗೆ ಪ್ರಿಯ ವಲ್ಲಭನಾದ, ಇದಮಿತ್ಥಂ ತ್ವವಿಭವಃ - ಇದಂತ್ವ - ಇದೀಗ, ಎಂಬದಾಗಿಯೂ ಇತ್ಥಂತ್ವ - ಈಪ್ರಕಾರವಾದುದೆಂಬದಾಗಿಯೂ, ಹೇಳಲ್ಪಡುವ ಐಶ್ವರ್ಯವು,

ತ್ವಮಾಸೀಃ - ನೀನೇಯಾಗಿರುತ್ತೀಯೇ ತದನ್ಯತ್ರಾಭಾವಾತ್ - ಹೀಗೆ ಆತನ ಸ್ವರೂಪಸ್ವಾತಂತ್ರ್ಯಗಳ ಮಹಿಮೆಯು ನಿನ್ನನ್ನು ಹೊಂದಿ, ನೀನು ಆತನಲ್ಲಿ ಅಂತರ್ಭೂತಳಾದುದರಿಂದ, ಹೇಗೆಂದರೆ ಪರಿಮಳವು ಹೂವಿನಲ್ಲೂ, ಜ್ಯೋತಿಸ್ಸು ರತ್ನದಲ್ಲೂ ಅಂತರ್ಭೂತವಾಗಿರುವ ಹಾಗೆ ಯಾವಾಗಲೂ ಒಟ್ಟಿಗೇನೆ ಇರುವದರಿಂದ, ಶ್ರುತಿರಪಿ - ಶ್ರುತಿಯೂ ಕೂಡ, ನಪೃಥಗಭಿದತ್ತೇ - ನಿನ್ನನ್ನು ಬೇರೆಯಾಗಿ ಹೇಳಲಿಲ್ಲವು. ನಿನ್ನ ಪತಿಯನ್ನು ಕುರಿತು ಹೇಳಿದರೆ ನೀನೂ ಆತನಿಗೆ ಅಪೃಥಕ್ಸಿದ್ಧ ವಿಶೇಷಣವಾಗಿ, ನಿತ್ಯಾನಪಾಯಿನಿಯಾಗಿ ಒಟ್ಟಿಗೇ ಇರುವದರಿಂದ ಸನ್ನಿಯೋಗ ಶಿಷ್ಟನ್ಯಾಯಪ್ರಕಾರ ಒಂದನ್ನು ಹೇಳಿದರೆ, ಅದರೊಂದಿಗೆ ಯಾವಾಗಲೂ ಅನುವರ್ತಿಸಿ ಬರುವ ಇನ್ನೊಂದನ್ನು ಹೇಳಬೇಕಾದ ಆವಶ್ಯಕವಿಲ್ಲವು ಎಂಬ ಭಾವವು ಸೂರ್ಯನು ಉದಿಸಿದನು ಎಂದು ಹೇಳುವಾಗ ಅದರೊಂದಿಗೆ ಯಾವಾಗಲೂ ಇರುವ ಸೂರ್ಯಕಿರಣಗಳೂ ಉದಿಸಿದವು ಎಂದು ಹೇಳುವ ಆವಶ್ಯಕವು ಹೇಗೆ ಇಲ್ಲವೋ ಹಾಗೆ ಎಂಬ ತಾತ್ಪರ್ಯವು. ಸರ್ವೇಶ್ವರನೆಂಬ ವಿಶೇಷ್ಯಕ್ಕೆ ಲಕ್ಷ್ಮೀ ಎಂಬ ವಿಶೇಷಣವಿಲ್ಲದೆ ಮಾಹಾತ್ಮ್ಯ ಇಲ್ಲವೆಂದು ಹೇಳಿಬಿಟ್ಟರೆ, ಸದೇವ ಸೌಮ್ಯೇದಮಗ್ರ ಆಸೀತ್ ಇತ್ಯಾದಿ ಶ್ರುತಿ ವಾಕ್ಯಗಳಲ್ಲಿ ಭಗವಂತನಿಗೆ ಹೇಗೆ ಉಪಾದಾನತ್ವವೆಂದರೆ, ಆತನಿಗೆ ಉಪಾದಾನತ್ವವನ್ನು ಹೇಳಬೇಕೆಂಬ ಆಶಿಯಿಂದಲೇ, ಶ್ರುತಿಗಳು ಲಕ್ಷ್ಮಿಯಾದ ನಿನ್ನ ಹೆಸರನ್ನು ಬಿಟ್ಟು ನಿನ್ನ ಪತಿಯ ಹೆಸರನ್ನು ಮಾತ್ರವೇ ಹೇಳಿದವು. ನಿನಗೆ ಮಹಿಮೆಯೇ ಇರುವದರಿಂದ ನಿನಗೇನೋ ಉಪಾದಾನತ್ವವು ವ್ಯಕ್ತವು ಎಂಬ ಭಾವವು ಪುರುಷಸೂಕ್ತವೇನೋ ಕಾರಣಾದಿ ವಾಕ್ಯಗಳಲ್ಲಿನ ಸತ್, ಆತ್ಮಾ, ಬಹ್ಮಾದಿ ಶಬ್ದಗಳಿಗೆ, ಏಕೋಹವೈ ನಾರಾಯಣ ಆಸೀತ್" ಎಂಬ ವಾಕ್ಯದ ನಾರಾಯಣ ಶಬ್ದದೊಂದಿಗೆ ಸಾಮಾನಾಧಿಕರಣ್ಯವನ್ನೇನೋ ಸಮರ್ಥಿಸಿರುತ್ತದೆ ; ಲಕ್ಷ್ಮಿಯೊಂದಿಗೆ ಈ ನಾರಾಯಣ ಶಬ್ದಕ್ಕೆ ಅನ್ವಯು ಹೇಗೆ, ಎಂದರೆ "ಹ್ರೀಶ್ಚ ತೇ ಲಕ್ಷ್ಮೀಶ್ಚ ಪತ್ನ್ಯೌ" ಎಂಬ ವಾಕ್ಯದ ಮೂಲಕ ಊಹಿಸಬಹುದೆಂಬ ತಾತ್ಪರ್ಯವು ಶ್ರುತಿಯೂ ಈ ನಿತ್ಯಯೋಗವನ್ನೇ ದೇವಜುಷ್ಟಾಮುದಾರಾಂ ಎಂಬುದರಿಂದ ತಿಳಿಸಿರುತ್ತದೆ. ಅದನ್ನೇ ಶ್ರೀ ಪರಾಶರರೂ ವಿಷ್ಣೋಃಶ್ರೀರನಪಾಯಿನೀ (ವಿ ಪು. ೧.೮ ೧೭) ಎಂದು ಉಪದೇಶಿಸಿರುತ್ತಾರೆ ಶ್ರೀ ವಾಲ್ಮೀಕಿ ಮಹರ್ಷಿಯೂ ಕೂಡ "ಅನನ್ಯಾ ರಾಘವೇಣಾಹಂ ಭಾಸ್ಕರೇಣ ಪ್ರಭಾಯಥಾ" ಸೂರ್ಯನನ್ನಗಲಿ ಹೇಗೆ ಪ್ರಭೆ ಇರಲಾರದೋ ಹಾಗೆ ಶ್ರೀರಾಮನನ್ನಗಲಿ ತಾನೂ ಇರಲಾರೆನೆಂಬ ಸೀತಾ ವಾಕ್ಯದಿಂದಲೂ, "ಅನನ್ಯಾಹಿ ಮಯಾ ಸೀತಾ ಮೈಥಿಲೀ ಜನಕಾತ್ಮಜಾ" "ಸೀತೆಯು ತನ್ನಿಂದ ಪ್ರತ್ಯೇಕಳಾದವಳಲ್ಲವು" ಎಂಬ ಶ್ರೀರಾಮೋಕ್ತಿಯಿಂದಲೂ ವ್ಯಕ್ತಪಡಿ

ಸಿರುತ್ತಾರೆ ಈ ಶ್ರೀ ಪರಾಶರ ಭಟ್ಟರ ದಿವ್ಯಸೂಕ್ತಿಯಿಂದ ಈ ನಿತ್ಯ ಯೋಗವು ಸ್ವರೂಪತಃ ಉಂಟೆಂದು ವ್ಯಕ್ತಪಡುತ್ತದೆ ಶ್ರೀ ಪರಾಶರರೂ ಕೂಡ "ನಿತ್ಯೈವೈಷಾ ಜಗನ್ಮಾತಾ ವಿಷ್ಣೋಃ ಶ್ರೀರನಪಾಯಿನೀ" ಎಂದು ಪೂರ್ವಾರ್ಧದಿಂದ ನಿತ್ಯಯೋಗವನ್ನು ಹೇಳಿ, ಮುಂದಕ್ಕೆ ಉತ್ತರಾರ್ಧದಿಂದ "ಯಥಾ ಸರ್ವಗತೋ ವಿಷ್ಣುಸ್ತಥೈವೇಯಂ ದ್ವಿಜೋತ್ತಮ" ಎಂಬುದರಿಂದ ಸ್ವರೂಪತಃ ನಿತ್ಯಯೋಗವನ್ನು ಪ್ರತಿಪಾದಿಸಿರುತ್ತಾರೆ ಇದರಂತೆಯೇ ವಿಷ್ವಕ್ಸೇನ ಸಂಹಿತೆಯಲ್ಲಿಯೂ

"ತಥಾ ಲಕ್ಷ್ಮ್ಯಾಃ ಸ್ವರೂಪಂಚ ವಕ್ಷ್ಯೇ ಶೃಣು ಸಮಾಹಿತಃ ।
ಗುಣತಶ್ಚ ಸ್ವರೂಪೇಣ ವ್ಯಾಪ್ತಿಸ್ಸಾಧಾರಣೀ ಮತಾ ।
ಯಥಾಹಮಯಾ ಜಗದ್ವ್ಯಾಪ್ತಂ ಸ್ವರೂಪೇಣ ಸ್ವಭಾವತಃ ।
ತಥಾವ್ಯಾಪ್ತಂ ತಯಾ ಸರ್ವಂ ನಿಯನ್ತ್ರೀಚ ತಥೇಶ್ವರೀ ॥"

ಇದರಿಂದ ಸ್ವರೂಪತಃ ನಿತ್ಯಯೋಗ ಹೇಳದೆ ರೂಪದಿಂದ ಮಾತ್ರ ಹೇಳುವವರ ವಾದವು ದೂರೀಕೃತವಾಯಿತು

ಆದರೆ ಲಕ್ಷ್ಮಿಯಿಂದ ನಾರಾಯಣನಿಗೆ ಸ್ವರೂಪನಿರೂಪಣ ಹೇಗೆ? ಸರ್ವ ಶ್ರುತಿ ಸಾರಭೂತವಾದ ಪುರುಷಸೂಕ್ತವು ಶ್ರುತಿಗಳಲ್ಲಿ ಅನೇಕ ಕಡೆಗಳಲ್ಲಿ ಪ್ರತಿಪಾದ್ಯವಾದ ಶಬ್ದಗಳಾದ ಹಿರಣ್ಯಗರ್ಭ, ಶಿವ, ಶಂಭು, ಪರಮಾತ್ಮ, ಪರಂಜ್ಯೋತಿಸ್ಸು, ವಿಶ್ವಾತ್ಮಾ, ಹರಿ, ಅಚ್ಯುತ, ಇತ್ಯಾದಿಗಳೆಲ್ಲಾ ನಾರಾಯಣನನ್ನೇ ಬೋಧಿಸುತ್ತದೆಂದು ಸಾಮಾನಾಧಿಕರಣ್ಯದಿಂದ ಹೇಳಿ, ಆ ನಾರಾಯಣನು ಯಾರೋ ಎಂಬ ಯೋಗಿಗಳ ಸಂದೇಹ ನಿವರ್ತಿಗಾಗಿ, "ಹ್ರೀಶ್ಚತೇ ಲಕ್ಷ್ಮೀಶ್ಚ ಪತ್ನ್ಯೌ" ಎಂಬುದರಿಂದ ಲಕ್ಷ್ಮೀಪತಿಯು ಯಾರೋ, ಅತನೇ ನಾರಾಯಣನು ಎಂದು ಸೂಕ್ತವು ಮುಂದೆ ನಿರ್ಣಯಿಸಿರುವದರಿಂದ ಲಕ್ಷ್ಮೀ ಸಂಬಂಧವು, ಶ್ರಿಯಃಪತಿತ್ವವು ಸ್ವರೂಪನಿರೂಪಕ ಧರ್ಮವಾಯಿತು ಎಂಬುದು ಈ ಶ್ಲೋಕದ ಮುಖ್ಯ ತಾತ್ಪರ್ಯವು. ಆದುದರಿಂದಲೇ ನಮ್ಮ ಸಿದ್ಧಾಂತಿಗಳೆಲ್ಲರೂ, ಭಗವಂತನನ್ನು ಕುರಿತು ಹೇಳುವಾಗ "ಶ್ರಿಯಃಪತಿಯೂಯ್" ಎಂದು ಪ್ರಾರಂಭಿಸುತ್ತಾರೆ. ಮಹರ್ಷಿಯೂ ಕೂಡ ಈ ಅಭಿಪ್ರಾಯವನ್ನು ಮಾರೀಚ ವಾಕ್ಯವಾದ "ಅಪ್ರಮೇಯಂ ಹಿ ತತ್ತೇಜಃ ಯಸ್ಯಸಾ ಜನಕಾತ್ಮಜಾ" ಎಂಬುದರಿಂದ ವ್ಯಕ್ತಪಡಿಸಿರುತ್ತಾರೆ.

ಲಕ್ಷ್ಮಿಯಿಂದ ಸ್ವಾತಂತ್ರ್ಯದ ವಿಕಾಸ ಹೇಗೆ? ಎಂದರೆ, ಸ್ವಾತಂತ್ರ್ಯವು ದುಷ್ಟರ ಶಿಕ್ಷೆಯಲ್ಲಿ ಮಾತ್ರ ಪರಿಣಮಿಸಿದರೆ ಅಷ್ಟು ಶ್ಲಾಘ್ಯವಲ್ಲವು, ಶಿಷ್ಟ ಪರಿಪಾಲನದಲ್ಲಿ ಅನ್ವಯಿಸಿದರೆ ಪರಮ ಶ್ಲಾಘ್ಯವಾದುದಾಗುತ್ತದೆ ಶಾಸನ ಕಾರ್ಯವನ್ನೂ ನಾರಾಯಣನೂ, ಅನುಗ್ರಹ ಕಾರ್ಯವನ್ನೂ ಲಕ್ಷ್ಮಿಯೂ, ಹೀಗೆ ಕಾರ್ಯ

ವಿಭಾಗವನ್ನೂ ಮಾಡಿಕೊಂಡಿದ್ದಾರೆಂದು "ಯುವತ್ವಾದೌ ತುಲ್ಯೇ" ಎಂಬ ಶ್ರೀಗುಣ ಇಳನೆಯ ಶ್ಲೋಕದಲ್ಲಿ ಶ್ರೀ ಪರಾಶರಭಟ್ಟರು ಉಪಾದಿಸಿರುತ್ತಾರೆ. ಇದು ಹಿಂದೆ(೫೭೮ನೆಯ ಪುಟ ನೋಡಿ)ತತ್ತ್ವತ್ರಯಾಧಿಕಾರದಲ್ಲಿ ಚರ್ಚಿಸಲ್ಪಟ್ಟಿರುತ್ತದೆ. "ಕಾರ್ಯಂ ಕರುಣಮಾರ್ಯೇಣ ನ ಕಶ್ಚಿನ್ನಾಪರಾಧ್ಯತಿ" ರಾ. ಯು. ೧೧೬. ೪೪. ಎಂದು ಆಂಜನೇಯನಿಗೆ ಕರುಣೆಯ ಮಾಹಾತ್ಮ್ಯೆಯನ್ನುಪದೇಶಿಸಿದ ಅಜ್ಞಾತ ನಿಗ್ರಹಳಾಗಿ ಅನುಗ್ರಹ ಮಯಳಾದ ಸೀತೆಯ ಸಂಬಂಧವಿರುವದರಿಂದಲೇ ಶರಣಾಗತರ ವಿಷಯದಲ್ಲಿ ದೋಷವನ್ನೆಣಿಸುವದಿಲ್ಲವೆಂದು "ಮಿತ್ರಭಾವೇನ ಸಂಪ್ರಾಪ್ತಂ ನ ತ್ಯಜೇಯಂ ಕಥಂಚನ । ದೋಷೋಯದ್ಯಪಿ ತಸ್ಯಸ್ಯಾತ್ ಸತಾಮೇತದ ಗರ್ಹಿತಂ" ಎಂದು ಶ್ರೀರಾಮಚಂದ್ರನು ತನ್ನ ಸತ್ಯ ಸಙ್ಕಲ್ಪತೆಯನ್ನು ವ್ಯಕ್ತಪಡಿಸಿರುತ್ತಾನೆ ಆದುದರಿಂದ ಇಂತಹ ಸ್ವಾತಂತ್ರ್ಯದ ಮಹಿಮೆಯೂ ಕೂಡ ಲಕ್ಷ್ಮೀ ಸಂಬಂಧದಿಂದಲೇ ಎಂದು ಉಪದೇಶಿಸಿರುತ್ತಾರೆ. ಈ ಅಭಿಪ್ರಾಯವನ್ನೇ ಲಕ್ಷ್ಮೀತಂತ್ರಶ್ಲೋಕವಾದ

ಲಕ್ಷ್ಮ್ಯಾಸಹ ಹೃಷೀಕೇಶೋ ದೇವ್ಯಾ ಕಾರಣ್ಯರೂಪಯಾ ।
ರಕ್ಷಕಸ್ಸರ್ವಸಿದ್ಧಾನ್ತೇ ವೇದಾನ್ತೇಷು ಚ ಗೀಯತೇ ॥ ಎಂದು

ಬಹು ಸ್ವಾರಸ್ಯವಾಗಿ ಉಪಪಾದಿಸುತ್ತದೆಂಬುದು ಭಾವವು.

ಆಗಲಿ, ನಮ್ಮಾಳ್ವಾರ್ರವರು ಲಕ್ಷ್ಮೀಗೂ ಉಪಾಯ ಕೋಟಿಯಲ್ಲಿ ಅನ್ವಯವನ್ನು ಎಲ್ಲಿಯಾದರೋ ಹೇಳಿರುವದುಂಟೋ ಎಂದರೆ "ಅಗಿಲಗಿಲ್ಲೇನ್" (ತಿರು ೬ ೧೦ ೧೦.) ಎಂಬ ಪಾಶುರದಲ್ಲೂ, "ಮಾಧವನೆನ್ರೇ"(ತಿರು ೧೦ ೫ ೭)ಎಂಬವೇ ಮೊದಲಾದ ಪಾಶುರಗಳಲ್ಲಿ ಹೇಳಿರುತ್ತಾರೆ. ಶ್ರೀ ಯಾಮುನೇಯರವರು ಚತುಶ್ಲೋಕಿಯಲ್ಲಿ "ಶ್ರೇಯೋನಹ್ಯರವಿಂದ ಲೋಚನಮನಃ ಕಾನ್ತಾ ಪ್ರಸಾದಾದೃತೇ ಸಂಸೃತ್ಯಕ್ಷರ ವೈಷ್ಣವಾಧ್ವಸು ನೃಣಾಂ ಸಂಭಾವ್ಯತೇ ಕರ್ಹಿಚಿತ್" ॥೩॥ ಎಂಬ ಶ್ಲೋಕದಲ್ಲಿ ಉಪಪಾದಿಸಿರುತ್ತಾರೆ. ಇದರ ಅರ್ಥ ತಾತ್ಪರ್ಯಾದಿಗಳಿಗೆ ದಾಸನು ಬರೆದಿರುವ ಚತುಶ್ಲೋಕಿ ವ್ಯಾಖ್ಯಾನದ ೫೩ರಿಂದ ೭೦ನೆಯ ಪುಟಗಳನ್ನು ಪರಾಂಬರಿಸಿರಿ. ಶ್ರೀ ಭಾಷ್ಯಕಾರರ ಹೇಳಿಕೆಗೂ ಅದೇ ಗ್ರಂಥದ ೬೬ನೆಯ ಪುಟವನ್ನು ನೋಡಿ. ಶ್ರೀ ಪರಾಶರಭಟ್ಟರೂ ದ್ವಯಾರ್ಥಾಭಿಪ್ರಾಯವನ್ನು ಅಷ್ಟ ಶ್ಲೋಕಿಯಲ್ಲಿ ಉಪಪಾದಿಸುವಾಗಲೂ ಲಕ್ಷ್ಮೀಗೂ ಉಪಾಯತ್ವವನ್ನು ಸ್ಥಾಪಿಸಿರುತ್ತಾರೆ ಚತುಶ್ಲೋಕಿಯ ೬೭ನೇ ಪುಟವನ್ನು ನೋಡಿ.

ಈ ಶ್ಲೋಕಾಂತ್ಯದಲ್ಲಿ ಶ್ರುತಿಯು ನಿನ್ನನ್ನು ಪೃಥಕ್ಕರಿಸಿ ಹೇಳಲಿಲ್ಲವು. ಏಕೆಂದರೆ ನಿನ್ನ ಪತಿಯನ್ನು ಕುರಿತು ಹೇಳಿದುದು ಅನುರೂಪವಾಗಿ ನಿನಗೂ ಸಹ ಅನ್ವಯಿಸುತ್ತದೆ ಎಂದು ಹೇಳಿದರು. ಆದರೆ ನಿನ್ನ ಸಂಬಂಧವನ್ನು ತಿಳಿಸಿ

ಶ್ರುತಿಯು ಎಲ್ಲಿಯೂ ಹೇಳಲಿಲ್ಲವೇ ಎಂದರೆ ಅನೇಕ ಕಡೆಗಳಲ್ಲಿ ಹೇಳಲಿಲ್ಲವೆಂದು ತಾತ್ಪರ್ಯವು. ಎಲ್ಲಿಯೂ ಹೇಳಿಯೇ ಇಲ್ಲವೆಂಬ ತಾತ್ಪರ್ಯವಲ್ಲವು. "ಆನೀದವಾತಗ್ಂ ಸ್ವಧಯಾ ತದೇಕಂ" ಎಂಬ ಶ್ರುತಿಯು ಜಗತ್ಸೃಷ್ಟಿ ಪ್ರಳಯಗಳಲ್ಲೂ ಅನ್ವಯ ಉಂಟೆಂದು ಹೇಳುವದಲ್ಲದೆ, ಸ್ವಧಯಾ ತದೇಕಂ ಎಂದು ಹೇಳಿರುವದರಿಂದ ಲಕ್ಷ್ಮಿಯೊಂದಿಗೆ ಸೇರಿದ ನಾರಾಯಣನೇ, ಏಕಃ ಒಬ್ಬನಾದ ಪರತತ್ವವೆಂದು ಬೋಧಿಸುತ್ತದೆ. ಇಲ್ಲಿ ಸ್ವಧಾ ಶಬ್ದವು ಇತರ ಅನೇಕ ಕಡೆಗಳಲ್ಲಿ ಬೋಧಿಸುವ ಹಾಗೆ ಲಕ್ಷ್ಮೀಪರವು, ಇತರರು ಹೇಳುವ ಅನಿಷ್ಟವಾದ ಅವಿದ್ಯಾಪರವಲ್ಲವು. ಹಾಗೆ ಹೇಳಿದರೆ "ಮಙ್ಗಳಾನಾಂಚ ಮಙ್ಗಳಂ" ಎಂದು ಹೇಳಿಸಿಕೊಳ್ಳುವನಿಗೆ ಹೇಯಸಂಬಂಧವನ್ನು ಕಲ್ಪಿಸಿದಂತಾಗುತ್ತದೆ. ಭಾರತ ಮೋಕ್ಷ ಪರ್ವದಲ್ಲೂ ಶ್ರೀ ವ್ಯಾಸಮಹರ್ಷಿಯೂ "ಏಕಾಕೀ ವಿದ್ಯಯಾ ಸಾರ್ಧಂ" ಲಕ್ಷ್ಮಿಯೊಂದಿಗೆ ಒಬ್ಬನು ಎಂದು ಹೇಳಿ, ತತೋ ಭೂಯೋ ಜಗತ್ಸೃಷ್ಟಿಂ ಕರಿಷ್ಯಾಮೀಹ ವಿದ್ಯಯಾ" ಎಂದು ಲಕ್ಷ್ಮಿಯ ನಿತ್ಯಯೋಗವನ್ನೂ, ಸೃಷ್ಟ್ಯಾದಿ ಸರ್ವ ವ್ಯಾಪಾರಗಳಲ್ಲೂ ಲಕ್ಷ್ಮಿಗೆ ಅನ್ವಯವನ್ನೂ, ಬೋಧಿಸಿರುತ್ತಾರೆ. ಹಾಗೆಯೇ ಶ್ರುತಿಯು "ಶ್ರದ್ಧಯಾದೇವೋ ದೇವತ್ವ ಮಶ್ನುತೇ" ಲಕ್ಷ್ಮಿಗೆ ಜಗತ್ತಿನ ಸಮಸ್ತ ಲೀಲಾ ವ್ಯಾಪಾರಗಳಲ್ಲಿ ಅನ್ವಯವನ್ನು ಬೋಧಿಸುತ್ತದೆ. "ಈಶ್ವರೀಗ್ಂ ಸರ್ವಭೂತಾನಾಂ" ಎಂಬೀ ಶ್ರುತಿವಾಕ್ಯವೂ ಲಕ್ಷ್ಮಿಗೆ ಜಗದ್ವ್ಯಾಪಾರಗಳಲ್ಲಿ ಸಂಬಂಧವುಂಟೆಂದು ಬೋಧಿಸುತ್ತದೆ. ಹೀಗೆ ಒಂದೆರಡು ಶ್ರುತಿಗಳು ಮಾತ್ರ ಹೇಳುತ್ತವೆಂದೂ, ಅನೇಕ ಶ್ರುತಿಗಳು ಪೃಥಕ್ಕರಿಸಿ ಹೇಳಲಿಲ್ಲವೆಂದೂ ತಾತ್ಪರ್ಯವು

ಹೀಗೆ ಈ ಮೂರು ಕಾರಣಗಳಿಂದಲೂ ಮೊದಲನೆಯ ಶ್ರೀಮಚ್ಛಬ್ದವು ಉಪಲಕ್ಷಣವೆಂಬಭಿಪ್ರಾಯವು ಅನುಪಪನ್ನವೆಂದು ಉಪದೇಶಿಸಿರುತ್ತಾರೆ

## ಪೂರ್ವಖಂಡದಲ್ಲೂ ವಿಶೇಷಣವಾದರೆ ಉಪಾಯದ್ವಿತ್ವವು ಎಂಬ ಆಕ್ಷೇಪದ ಖಂಡನವು.

---

ಲಕ್ಷ್ಮಿಯನ್ನು ಉಪಾಯಕೋಟಿಯಲ್ಲಿ ಸೇರಿಸಿದರೆ, ಸರ್ವೇಶ್ವರನಿಗೆ ಅನನ್ಯೋಪಾಯತ್ವವನ್ನು ಹೇಳುವದು ಹೇಗೆ ? ಅದಕ್ಕೆ ಭಂಗಬರಲಿಲ್ಲವೇ ? ಎಂದರೆ, ಈ ದೂಷಣೆಯನ್ನು ಪ್ರತಿ ದೂಷಣೆಯಿಂದ ಖಂಡಿಸುತ್ತಾರೆ—ಹೇಗೆಂದರೆ, ನೀವು ದ್ವಯೋತ್ತರಖಂಡದಲ್ಲಿ ವಿಶೇಷಣವೆಂದು ಹೇಳುವದರಿಂದ, ಪ್ರಾಪ್ಯದ್ವಿತ್ವ ಉಂಟಾಯಿತು. ಆದುದರಿಂದ ಮಾಡುವ ಕೈಙ್ಕರ್ಯದ ಅನನ್ಯಪ್ರಯೋಜನತ್ವಕ್ಕೆ ಭಂಗ ಬರಲಿಲ್ಲವೇ ? ಇಲ್ಲವೆಂದು ಸ್ಥಾಪಿಸುವದಾದರೆ,

## ಲಕ್ಷ್ಮ್ಯಾ ಉಪಾಯತ್ವೇ ಉಪಾಯದ್ವಿತ್ವಮಿತಿ ಪೂರ್ವಪಕ್ಷಸ್ಯ ಖಂಡನಮ್

**ಅನನ್ಯೋಪಾಯತ್ವವಿರುದ್ಧಮಾನ ಉಪಾಯದ್ವಿತ್ವಪ್ರಸಙ್ಗಮ್ ಇವ್ವಿಡತ್ತಿಲ್ ಬಾಧಕಮಾನಾಲೋವೆನ್ನಿಲ್ ? ಅನನ್ಯಪ್ರಯೋಜನತ್ವ ವಿರುದ್ಧಮಾನ ಪ್ರಾಪ್ಯದ್ವಿತ್ವಪ್ರಸಙ್ಗತ್ತಾಲೆ ಉತ್ತರಖಂಡತ್ತಿಲುಮ್ ವಿಶೇಷಣತ್ವಮ್ ತವಿರಪ್ರಸಙ್ಗಿಕ್ಕುಮ್.**

---

ಉಪಾಯದ್ವಿತ್ವದಿಂದ ಸರ್ವೇಶ್ವರನ ಅನನ್ಯೋಪಾಯತ್ವಕ್ಕೂ ಭಂಗವಿಲ್ಲವೆಂದುಪಪಾದಿಸುತ್ತಾರೆ—

ಅನನ್ಯೋಪಾಯತ್ವವಿರುದ್ಧಮಾನ-ಸರ್ವೇಶ್ವರನಲ್ಲದೆ ಇನ್ನು ಯಾರೂ ಉಪಾಯವಲ್ಲವು ಎಂಬಭಿಪ್ರಾಯಕ್ಕೆ ವಿರುದ್ಧವಾದ, **ಉಪಾಯದ್ವಿತ್ವ ಪ್ರಸಙ್ಗಿಕ್ಕುಮ್** - ಲಕ್ಷ್ಮಿಯೂ ಉಪಾಯಕೋಟಿಯಲ್ಲಿ ಸೇರಿದವಳೆಂದು ಹೇಳಿ, ಹೀಗೆ ಇಬ್ಬರೂ ಉಪಾಯವೆಂಬಭಿಪ್ರಾಯವು, **ಇವ್ವಿಡತ್ತಿಲ್** - ಈ ಸಂದರ್ಭದಲ್ಲಿ ಎಂದರೆ ದ್ವಯಮಂತ್ರದ ಶ್ರೀಮಚ್ಛಬ್ದಗಳ ಅರ್ಥ ನಿರ್ಣಯದಲ್ಲಿ, **ಬಾಧಕಮಾನಾಲೋವೆನ್ನಿಲ್** - ಅನನ್ಯೋಪಾಯತ್ವಕ್ಕೆ ಬಾಧಕವಾದರೋ ? ಎಂದರೆ, ಆಗ ನಿಮ್ಮ ಇಷ್ಟಾಪತ್ತಿ, ಇಷ್ಟಾಭಿಪ್ರಾಯಕ್ಕೂ ವಿರೋಧ ಉಂಟಾಗುತ್ತದೆಂದು ಹೇಳುತ್ತಾರೆ—**ಅನನ್ಯ ಪ್ರಯೋಜನತ್ವ ವಿರುದ್ಧಮಾನ** - ಸರ್ವರೂ ಮೋಕ್ಷದೆಶೆಯಲ್ಲಿ ಮಾಡುವ ಎಲ್ಲಾ ಕೈಂಕರ್ಯಗಳೂ ಸರ್ವೇಶ್ವರನಿಗೇನೇ ಎಂಬಭಿಪ್ರಾಯಕ್ಕೆ ವಿರುದ್ಧವಾದ **ಪ್ರಾಪ್ಯದ್ವಿತ್ವ ಪ್ರಸಙ್ಗತ್ತಾಲೆ** - ಲಕ್ಷ್ಮೀನಾರಾಯಣರಿಬ್ಬರೂ ಪ್ರಾಪ್ಯದೆಶೆಯಲ್ಲಿ ಉದ್ದೇಶ್ಯರಾದುದರಿಂದ, **ಉತ್ತರಖಂಡದಲ್ಲೂ, ವಿಶೇಷಣತ್ವ ತವಿರ ಪ್ರಸಙ್ಗಿಕ್ಕುಮ್** - ವಿಶೇಷಣವಲ್ಲವೆಂದು ಹೇಳಬೇಕಾಗಿ ಬರುವದು. ಅನನ್ಯ ಪ್ರಯೋಜನತ್ವಕ್ಕೆ ಹಾನಿ ಉಂಟಾಗುವದರಿಂದ ಪ್ರಾಪ್ಯದ್ವಿತ್ವ ಸರಿಯಿಲ್ಲವಾಗಿ, ಅನನ್ಯ ಪ್ರಯೋಜನತ್ವವು ಸರ್ವೇಶ್ವರನಿಗೆ ಸಿದ್ಧಿಸುವದಕ್ಕಾಗಿ ಉತ್ತರಖಂಡದ ಶ್ರೀಮಚ್ಛಬ್ದವೂ, ಉಪಲಕ್ಷಣವೆಂದೇ ಹೇಳಬೇಕಾಗುತ್ತದೇ ವಿನಾ ವಿಶೇಷಣವಾಗುವದಿಲ್ಲವು.

ಆಗಲಿ, ಹಾಗೆಯೇ ಈ ಉತ್ತರ ಖಂಡದಲ್ಲೂ ವಿಶೇಷಣವೆಂದು ಹೇಳದೆ ಎರಡು ಕಡೆಯಲ್ಲೂ ಉಪಲಕ್ಷಣವೆಂದೇ ಹೇಳಬಿಡುವೆವು ಎಂದರೆ ಆಗಲೂ ವಿರೋಧವು ತಪ್ಪಿದ್ದಲ್ಲವೆಂದು ಹೇಳುತ್ತಾರೆ. ಶ್ರೀಮಚ್ಛಬ್ದವು ಎರಡುಕಡೆಯಲ್ಲೂ ಒಂದೇ ವಿಧವಾಗಿರುವಾಗ ಒಂದೇ ವಿಧವಾಗಿ ಭಾವಿಸತಕ್ಕದ್ದು ಯುಕ್ತವು ಎಂದು

**ಅನಾಲ್ ಇರಣ್ಡಿಡತ್ತಿಲುವರ್ ಉಪಲಕ್ಷಣವಾನಾಲೋ ವೆನ್ನಿಲ್? ಗುಣವಿಗ್ರಹ ವ್ಯಾಪಾರ ವಿಶೇಷಙ್ಗಳುವರ್ ಇರಣ್ಡಿಡತ್ತಿಲುವರ್ ಉಪಲಕ್ಷಣ ಙ್ಗಳಾಗ ಪ್ರಸಙ್ಗಿಕ್ಕುವರ್. ಉಪಯುಕ್ತಙ್ಗಳಾಗೈಯಾಲೇ ಯನ್ವೈ ವಿಶೇ**

---

ನೀವು ಹೇಳಿದುದನ್ನು ಅಂಗೀಕರಿಸಿ ಎರಡುಕಡೆಯೂ ಉಪಲಕ್ಷಣವೇ ಎಂದು ಹೇಳಿದರೆ ಬಾಧಕವೇನು? ಎಂದು ಕೇಳಿದರೆ, ಬಾಧಕವನ್ನು ತೋರ್ಪಡಿಸುತ್ತಾರೆ.

**ಅನಾಲ್**-ಹೀಗೆ ಪತ್ನೀ ಸಂಬಂಧವು ಪ್ರಾಪ್ಯದೆಶೆಯಲ್ಲಿ, ಅನನ್ಯಪ್ರಯೋಜನ ತ್ವಕ್ಕೆ ಬಾಧಕವುಂಟಾಗುವದರಿಂದ, ವಿಶೇಷಣವಾಗಲಾರದು ಎಂದರೆ, **ಇರಣ್ಡಿಡ ತ್ತಿಲುವರ್**-ಎರಡುಕಡೆ ಎಂದರೆ ಖಂಡದಲ್ಲೂ, ಉಪಲಕ್ಷಣವಾದರೋ, ಎಂದರೆ? **ಗುಣವಿಗ್ರಹವ್ಯಾಪಾರ ವಿಶೇಷಙ್ಗಳುವರ್**-ಉಪಾಯಾವಸ್ಥೆಗೂ, ಉಪೇಯಾವ ಸ್ಥೆಗೂ ಅವಶ್ಯಕಗಳಾದ ಸರ್ವೇಶ್ವರನ ಕಲ್ಯಾಣಗುಣಗಳೇನು, ಶರೀರದ ಲಾವಣ್ಯ ಸೌಂದರ್ಯಾದಿಗಳಿಂದ ಸೇರಿದ ದಿವ್ಯಮಙ್ಗಳವಿಗ್ರಹವೇನು, ಸತ್ಯಸಙ್ಕಲ್ಪತೆಯಿಂದ ಮಾಡುವ ದಿವ್ಯ ಚೇಷ್ಟಿತಗಳೇನು ಇವುಗಳೆಲ್ಲಾ, **ಉಪಲಕ್ಷಣಙ್ಗಳಾಗ ಪ್ರಸ ಙ್ಗಿಕ್ಕುವರ್** - ಉಪಲಕ್ಷಣಗಳಾಗಬೇಕಾಗುತ್ತದೆ ಯಾವಾಗ ಸರ್ವೇಶ್ವರ ನೊಂದಿಗೇನೇ ಇರುವ ಲಕ್ಷ್ಮೀಯೇ ಉಪಾಯದೆಶೆಯಲ್ಲೂ ಉಪೇಯದೆಶೆಯಲ್ಲೂ ಉಪಲಕ್ಷಣವೆಂದಾಯಿತೋ, ಹಾಗೆಯೇ ಅನನ್ಯೋಪಾಯತ್ವ, ಅನನ್ಯ ಪ್ರಯೋಜನತ್ವಸಿದ್ಧಿಗಾಗಿ, ಸ್ವಾಮಿಗೆ ಸಂಬಂಧಿಸಿರುವ, ಗುಣ, ವಿಗ್ರಹವ್ಯಾಪಾರ ಗಳೂ ಕೂಡ ಉಪಾಯದೆಶೆಯಲ್ಲೂ ಉಪೇಯ ದೆಶೆಯಲ್ಲೂ, ಉಪಲಕ್ಷಣಗಳೆಂದೇ ಹೇಳಬೇಕಾಯಿತು ಎಂಬ ತಾತ್ಪರ್ಯವು. ಹಾಗಲ್ಲದಿದ್ದರೆ ಆಗಲೂ ಅನನ್ಯೋ ಪಾಯತ್ವ, ಅನನ್ಯ ಪ್ರಯೋಜನತ್ವಗಳಿಗೆ ಹಾನಿಯುಂಟಾಗುತ್ತದೆಂಬ ಭಾವವು ಉಪಯುಕ್ತವಾದ ಗುಣಗಳು—(೧) **ಉಪಾಯತ್ವಕ್ಕೆ**-ಜ್ಞಾನ, ಶಕ್ತ್ಯಾದಿಗಳು, ಸ್ವಾತಂತ್ರ್ಯ, ಕಾರುಣ್ಯಾದಿಗಳು, (೨) **ಉಪೇಯತ್ವಕ್ಕೆ**-ಆನಂದ ಸೌಂದರ್ಯಾದಿ ಗಳು. ಉಪಯುಕ್ತವಾದ ವಿಗ್ರಹ **ವಿಶೇಷವು—(೧) ಉಪಾಯತ್ವಕ್ಕೆ**-ಸೌಂದ ರ್ಯಾದಿಗಳಿಂದ ಕೂಡಿರುವ ಅರ್ಚಾ ವಿಗ್ರಹವಿಶೇಷವು (೨) **ಉಪೇಯತ್ವಕ್ಕೆ**-ಶಂಖ ಚಕ್ರಾದಿ ದಿವ್ಯಾಯುಧ ದಿವ್ಯಾಭರಣಗಳಿಂದ ಯುಕ್ತವಾದ ಪರವಾಸುದೇವ ಮೂರ್ತಿಯು, ಉಪಯುಕ್ತವಾದ ವ್ಯಾಪಾರಗಳು—(೧) **ಉಪಾಯತ್ವಕ್ಕೆ** - ಸಂಸಾರದಿಂದ ಬಿಡಿಸುವ ಸಂಕಲ್ಪಾದಿಗಳು (೨) **ಉಪೇಯತ್ವಕ್ಕೆ**-ಮುಕ್ತಿ ಹೊಂದಿದ ನಂತರ ಅನುಸಂಚರಣಾದಿಗಳಿಗೆ ಕಾರಣಭೂತಗಳಾದ ಸಙ್ಕಲ್ಪವಿಶೇಷ ಗಳು. ಹೀಗೆ ಇವುಗಳೆಲ್ಲಾ ಉಪಲಕ್ಷಣವೆಂದು ಹೇಳುವದು ಸಿದ್ಧಾಂತಕ್ಕೇ

**ಷಣಙ್ಙಳಿನ್ನಿಲ್. ಇದುವುಮ್ ಪೂರ್ವೋತ್ತರ ಖಂಡಙ್ಙಳಿಲ್ ಪತ್ನೀ ಸಂಬಂಧತ್ತಿಲುಮ್ ತುಲ್ಯಮ್.**

---

ವಿರೋಧವಾಗುವದರಿಂದಲೂ, ಅವುಗಳು ಪ್ರಾಪ್ಯತ್ವಕ್ಕೂ ಉಪಾಯತ್ವಕ್ಕೂ ಉಪಯುಕ್ತಗಳಾಗುವದರಿಂದಲೂ, ವಿಶೇಷಣಗಳೆಂದೇ ಹೇಳಬೇಕಾಗುತ್ತದೆಂದು ಭಾವಿಸಿ ಪೂರ್ವಪಕ್ಷಿಯು ಈ ಗುಣವಿಗ್ರಹ ವ್ಯಾಪಾರಗಳು ಉಪಯುಕ್ತಗಳಾದುದರಿಂದ ಸರ್ವೇಶ್ವರನಿಗೆ ವಿಶೇಷಣಗಳೇ ವಿನಾ ಉಪಲಕ್ಷಣಗಳಾಗುವದಿಲ್ಲವೆಂದು ಹೇಳುತ್ತಾರೆ ಹಾಗಾದರೆ ಲಕ್ಷ್ಮೀ ಸಂಬಂಧವೂ ಕೂಡ ಉಪಯುಕ್ತವೆಂಬುದಕ್ಕೆ ಪ್ರಮಾಣ ಸಂಪ್ರದಾಯಗಳಿರುವದರಿಂದ, ಇದೂ ಕೂಡ ವಿಶೇಷಣವೇ ಎಂದು ಸ್ಥಾಪಿಸುತ್ತಾರೆ—

**ಉಪಯುಕ್ತಙ್ಙಳಾಗೈಯಾಲ್** - ಉಪಯೋಗವಾದವುಗಳಾದುದರಿಂದ, **ಅವೈ** - ಆ ಗುಣವಿಗ್ರಹವ್ಯಾಪಾರಗಳು, **ವಿಶೇಷಣಙ್ಙಳಿನ್ನಿಲ್** - ವಿಶೇಷಣಗಳು ಎಂದು ಹೇಳಿದರೆ, **ಪತ್ನೀಸಂಬಂಧತ್ತಿಲ್** - ಪತ್ನಿಯಾದ ಲಕ್ಷ್ಮಿಯ ಸಂಬಂಧದಲ್ಲೂ ಸಹ, **ತುಲ್ಯಮ್** - ಸಮಾನವು ಪತ್ನೀ ಸಂಬಂಧವೂ ಪ್ರಾಪ್ಯ ಪ್ರಾಪಕಾವಸ್ಥೆಯಲ್ಲೂ ಉಪಯುಕ್ತವಾದುದೇ, ಇದಕ್ಕೆ ಪ್ರಮಾಣಗಳೂ ಉಂಟು, ಸಂಪ್ರದಾಯದಲ್ಲೂ ಕಂಡಿರುವೆವು. ಪ್ರಮಾಣಗಳು ಯಾವುವು ಎಂಬುದನ್ನು ಉದಾಹರಿಸುತ್ತಾರೆ ಯಜ್ಞ ಯಾಗಾದಿಗಳಲ್ಲಿ ಪತ್ನೀ ಸಂಬಂಧವು ಆವಶ್ಯಕವಾಗಿ ಬೇಕು ಎಂಬುದು ವ್ಯಕ್ತವು, ಅಪತ್ನೀಕನಿಗೆ ಅವುಗಳಲ್ಲಿ ಅಧಿಕಾರವಿಲ್ಲವು. ಪ್ರಣತರಕ್ಷಣೆ, ಶರಣಾಗತ ಪರಿಪಾಲನೆ, ಮೋಕ್ಷಯಿಷ್ಯಾಮಿ ಎಂಬ ವ್ರತರೂಪ ಸಙ್ಕಲ್ಪವು ಒಂದು ಯಾಗ ರೂಪವ್ರತವು. ಇದಕ್ಕೂ ಪತ್ನೀ ಸಂಬಂಧವೂ ಆವಶ್ಯಕವು ಪುರುಷನಿಗೆ ದಾನದಲ್ಲಿ ಅಧಿಕಾರವಿಲ್ಲವು. ತನ್ನ ಪತ್ನಿಯ ಮೂಲಕವಾಗಿಯೇ ದಾನಮಾಡತಕ್ಕದ್ದು. ಆದುದರಿಂದ ಸರ್ವೇಶ್ವರನಿಗೆ ಮೋಕ್ಷಪ್ರದತ್ವರೂಪದಾನವು ತನ್ನ ಪತ್ನಿಯ ಮೂಲಕವಾಗಿಯೇ ಎಂದು ಭಾವಿಸತಕ್ಕದ್ದು. ಪತ್ನೀ ಎಂಬ ಶಬ್ದವು ಯಜ್ಞಸಂಯೋಗವನ್ನು ಸೂಚಿಸುತ್ತದೆ. ಆದುದರಿಂದ ವಿಷ್ಣುಪತ್ನಿಯು ವಿಷ್ಣುವಿಗೆ ಅನುರೂಪಳಾಗಿ ವಿಷ್ಣುವಿನ ಸಂಕಲ್ಪರೂಪ ಮಹಾಯಜ್ಞಗಳಲ್ಲೆಲ್ಲಾ "**ಪತ್ಯುರ್ನೋ ಯಜ್ಞಸಂಯೋಗೇ**" ಎಂಬ ವಚನಾನುಸಾರ ಉಪಯುಕ್ತಳಾಗಿದ್ದಾಳೆಂದು ಮುಂದಿನ ವಾಕ್ಯದಿಂದ ತಿಳಿಸುತ್ತಾರೆ ಪತಿಯು ದಾನಮಾಡಬೇಕಾದರೆ, ಪತ್ನಿಯು ಅನುಮೋದಿಸಿ, ಆಕೆಯ ಹಸ್ತ ಮೂಲಕವಾಗಿಯೇ ದಾನಕ್ರಿಯೆಯು ನಡೆಯತಕ್ಕದ್ದು. ಹಾಗೆಯೇ ಮೋಕ್ಷ

**ಪ್ರಾಪ್ಯ ಪ್ರಾಪಕಾವಸ್ಥಯೋಃ ಶ್ರೀ ಸಹಾಯ ಇತ್ಯತ್ರ ಪ್ರಮಾಣಾನಿಚ**

**ಉಪಯೋಗ ವಿಶೇಷಙ್ಗಳ್ ತತ್ತದ್ವಸ್ತುಗಳುಕ್ಕು ಅನುರೂಪಮಾನ ಪಡಿಯಿಲೇ ಪ್ರಮಾಣ ಸಂಪ್ರದಾಯಙ್ಗಳಾಲೇ ಕಂಡುಕೊಳ್ವದು. ವಸ್ತ್ವನುರೂಪಮಾಯಿರೇ ಉಪಯೋಗ ಮಿರುಪ್ಪದು.**

ಪ್ರಪತ್ತಿವೂ ಕೂಡ ಲಕ್ಷ್ಮಿಯ ಮೂಲಕವೇ ನಡೆಯತಕ್ಕದ್ದೆಂಬ ಭಾವವು. ಇದನ್ನೇ ಮಹರ್ಷಿಯು "ಸಹಧರ್ಮ ಚರೀತವ" ಎಂಬುದರಿಂದ ಉಪದೇಶಿಸಿದರು. (ರಾ. ಬಾ.)

**ಪ್ರಾಪ್ಯಪ್ರಾಪಕವೆರಡವಸ್ಥೆಯಲ್ಲಿಯೂ ಲಕ್ಷ್ಮಿಯ ಉಪಯೋಗಗಳೂ, ಪ್ರಮಾಣಗಳು.**

ಪ್ರಾಪ್ಯ ದೆಶೆಯಲ್ಲಿಯೂ ಪ್ರಾಪಕದೆಶೆಯಲ್ಲಿಯೂ, ಲಕ್ಷ್ಮಿಯ ಸಂಬಂಧದ ಉಪಯೋಗವೇನು ಎಂದರೆ, ಲೋಕರೂಢಿಯಲ್ಲಿ ಸಾಮಾನ್ಯವಾಗಿ ಪತ್ನೀ ಸಂಬಂಧವು ಹೇಗೆ ಉಪಯುಕ್ತವೆಂಬುದನ್ನು ತಿಳಿಸಿ, ಲಕ್ಷ್ಮಿಯ ಉಪಯೋಗ ಹೇಗೆ ಎಂಬುದಕ್ಕೆ ಅನೇಕ ಪ್ರಮಾಣಗಳನ್ನು ಉದಾಹರಿಸುತ್ತಾರೆ ಉಪಾಯ ದೆಶೆಯಲ್ಲಿ ಲಕ್ಷ್ಮಿಯ ಸಂಬಂಧದ ಉಪಯೋಗದಲ್ಲಿ ಸಂದೇಹಪಡುವವರಿಗೆ ಅವರಿಗೆ ಯಾವ ಪ್ರಮಾಣವಲ್ಲಿ ಅತಿಶಯವಾದ ಆದರವೋ ಅಂತಹ ಪ್ರಮಾಣಗಳನ್ನು ಪ್ರಥಮತಃ ಉದಾಹರಿಸುವದು ಯುಕ್ತವೆಂದರಿತು ಉಪಾಯೋಪೇಯವಾದ ಎರಡು ದೆಶೆಯಲ್ಲಿಯೂ ಉಪಯುಕ್ತವೆಂದು ನಮ್ಮಾಳ್ವಾರ್ರವರ ಪಾಶುರಗಳಿಂದ ತೋರಿಸುತ್ತಾರೆ

**ಉಪಯೋಗ ವಿಶೇಷಙ್ಗಳ್** - ಉಪಯೋಗ ವಿಶೇಷಗಳು (ಈ ಸಂದರ್ಭದಲ್ಲಿ ಲಕ್ಷ್ಮಿಯಿಂದ ಪ್ರಯೋಜನಗಳು ಯಾವುವೆಂದರೆ, ಪುರುಷಕಾರತ್ವವೂ ಉಪಾಯತ್ವವೂ ರತ್ನಾಭರಣಸ್ವೀಕಾರತ್ವವೇ ಮೊದಲಾದವು) **ತತ್ತದ್ವಸ್ತುಗಳುಕ್ಕು** - ಆಯಾ ವಸ್ತುಗಳಿಗೆ, **ಅನುರೂಪಮಾನಪಡಿಯಿಲೇ** - ಸ್ವರೂಪಕ್ಕೆ ಯೋಗ್ಯವಾದ ರೀತಿಯಲ್ಲಿ, **ಪ್ರಮಾಣ ಸಂಪ್ರದಾಯಙ್ಗಳಾಲೇ** - ಪ್ರಮಾಣಗಳಿಂದಲೂ ಸಂಪ್ರದಾಯಗಳಿಂದಲೂ, **ಕಣ್ಡುಕೊಳ್ವದ**.- ತಿಳಿದುಕೊಳ್ಳಬಹುದು. ಇದು ಸಾಧಾರಣವಾಗಿ ಎಲ್ಲಾ ವಸ್ತುಗಳ ಉಪಯೋಗವಾಗಿಯೂ ಕುರಿತು ಹೇಳಿದುದು **"ಈಶ್ವರೀಂಗ್ ಸರ್ವಭೂತಾನಾಂ"** ಎಂಬ ಶ್ರುತ್ಯರ್ಥವನ್ನು ಮಹ

ಜ್ಞಾನನಿಧಿಗಳಾದ ಶ್ರೀ ಯಾಮುನೇಯರವರು "**ಲೋಕೈಕೇಶ್ವರಿ ಲೋಕನಾಥದಯಿತೇ**" ಎಂದು ವಿವರಿಸಿರುವದರಿಂದ, ಇಂತಹ ಲಕ್ಷ್ಮಿಯ ಸ್ವರೂಪ ಸ್ವಭಾವಗಳಿಗೆ ಅನುಗುಣವಾಗಿ ಲಕ್ಷ್ಮಿಯ ಉಪಯೋಗವನ್ನು ಹೇಳತಕ್ಕದ್ದು. ಲಕ್ಷ್ಮಿಯ ಸ್ವರೂಪಾದಿಗಳಿಗೆ ಅನುರೂಪವಾದ ಉಪಯೋಗಗಳೇನೆಂಬುದಕ್ಕೆ "**ಲೋಕೈಕೇಶ್ವರಿ ಲೋಕನಾಥ ದಯಿತೇ**" ಎಂಬ ಪ್ರಯೋಗದಲ್ಲಿ ತೋರಿ ಬರುವ ಸ್ವಾರಸ್ಯಾರ್ಥಗಳಿಗೆ ದಾಸನು ಬರೆದ ಚತುಶ್ಲೋಕಿಯ ವ್ಯಾಖ್ಯಾನದ ೩೧ ರಿಂದ ೩೯ನೆಯ ಪುಟಗಳನ್ನು ಪರಾಂಬರಿಸಿ. ಆದುದರಿಂದ, **ವಸ್ತ್ವನುರೂಪವಾಯಿತೆ** - ವಸ್ತುವಿನ ಸ್ವರೂಪ ಸ್ವಭಾವಗಳಿಗೆ ಅನುಗುಣವಾಗಿ ತಾನೇ, **ಉಪಯೋಗವಿರುವುದು** - ಅದರ ಉಪಯೋಗವಿರುತ್ತದೆ. ಸರ್ವ ಲೋಕಕ್ಕೂ ನಾಥನಾದವನಿಗೆ ಪತ್ನಿಯಾಗಿ, ಸರ್ವಲೋಕದ ಚೇತನರಿಗೂ ನಿಯಾಮಕಳಾಗಿರುವದರಿಂದ ಲೋಕೈಕೇಶ್ವರಿಯಾದವಳ ಸ್ವರೂಪಸ್ವಭಾವಕ್ಕನುಗುಣವಾಗಿಯಲ್ಲವೇ ಉಪಯೋಗವಿರತಕ್ಕದ್ದೆಂಬಭಾವವು. ಲಕ್ಷ್ಮಿಯ ಉಪಯೋಗವು ಪುರುಷಕಾರತ್ವದಲ್ಲಿ ಉಂಟು ಎಂಬುದಕ್ಕೆ ಕೆಲವು ಪ್ರಮಾಣವಿದ್ದರೂ, ಪುರುಷಕಾರತ್ವದಲ್ಲಿ ಮಾತ್ರವೇ ಉಪಾಯತ್ವದಲ್ಲಿ ಇಲ್ಲವೆಂಬುದಕ್ಕೆ ಪ್ರಮಾಣವಿಲ್ಲವಾದುದರಿಂದಲೂ, ಉಪಾಯತ್ವ ಭರಸ್ವೀಕಾರತ್ವದಲ್ಲಿ ಅನ್ವಯವುಂಟೆಂಬುದಕ್ಕೆ ಪ್ರಮಾಣಗಳಿರುವದರಿಂದಲೂ, ಹಾಗೆಯೇ ಪೂರ್ವಾಚಾರ್ಯರುಗಳ ಸಂಪ್ರದಾಯವೂ ಇರುವದರಿಂದಲೂ, ಲಕ್ಷ್ಮಿಗೆ ಅನುರೂಪವಾದ ಉಪಯೋಗವನ್ನು ಗ್ರಹಿಸತಕ್ಕದ್ದೆಂಬ ಭಾವವು. ಇಲ್ಲಿ ಮುಖ್ಯವಾಗಿ ಗ್ರಹಿಸತಕ್ಕ ವಿಷಯವೇನೆಂದರೆ.—ಸರ್ವೇಶ್ವರನ ಸ್ವಾತಂತ್ರ್ಯ, ಕೃಪಾ ಮೊದಲಾದ ಕಲ್ಯಾಣಗುಣಗಳು ವಿಶೇಷಣಗಳಾಗಿ ಸರ್ವೇಶ್ವರನ ಉಪಾಯತ್ವಕ್ಕೆ ಉಪಯುಕ್ತಗಳಾಗಿ ವಿಶೇಷಣಗಳಾದರೆ, ಚೇತನಳಾಗಿ ಕಲ್ಯಾಣಗುಣಾಕರಳಾಗಿ ಅಜ್ಞಾತನಿಗ್ರಹಳಾಗಿ, ಅನುಗ್ರಹಮಯಳಾಗಿ, ನಿತ್ಯಾನಪಾಯಿನಿಯಾಗಿ, ಲೋಕೈಕೇಶ್ವರಿಯಾಗಿ, ಲೋಕನಾಥದಯಿತೆಯಾಗಿರುವ ಮಹಾಲಕ್ಷ್ಮಿಯು ಭರಸ್ವೀಕಾರದಲ್ಲಿ ಉಪಯುಕ್ತಳಲ್ಲವೆಂಬ ವಾದವು ಹೇಗೆ ಸಮಂಜಸವೋ ತಿಳಿಯದು ಆದುದರಿಂದ ಲಕ್ಷ್ಮಿಗೆ ಅನುರೂಪವಾಗಿ ಉಪಯೋಗವನ್ನು ಪ್ರಮಾಣಾನುಸಾರವಾಗಿ ಹೇಳತಕ್ಕದ್ದೇ ವಿನಾ ವಾದವು ಉಪಯೋಗವಿಲ್ಲವೆಂಬ ಭಾವವು

"**ಉಪಯೋಗವಿಶೇಷಙ್ಗಳ್**" ಎಂಬದಾಗಿ ಸಾಧಾರಣವಾದ ಸಙ್ಗ್ರಹವಾದ ಉಕ್ತಿಯು ಗ್ರಂಥವಿಸ್ತರಭಯದಿಂದ ಎಂಬದಾಗಿ ತಿಳಿಯತಕ್ಕದ್ದು. ಗುಣ ವಿಗ್ರಹ ವ್ಯಾಪಾರಗಳು ಹೇಗೆ ಉಪಯುಕ್ತಳೆಂಬುದನ್ನು ಆ ಕಾರಣದಿಂದಲೇ ವಿಸ್ತರಿಸಲಿಲ್ಲವು. ಕೆಲವು ಗುಣಗಳನ್ನು ಕುರಿತು ಚರ್ಚಿಸಿ ಅವು ಹೇಗೆ ಉಪ

ಯುಕ್ತಗಳೆಂಬುದನ್ನು ತಿಳಿಯಬಹುದು ಗುಣಗಳಲ್ಲಿ ಪ್ರಧಾನಗಳಾದವು ಷಾಡ್ಗುಣ್ಯಗಳೂ, ಸರ್ವಜ್ಞತ್ವ ಸರ್ವಶಕ್ತಿತ್ವ ಸತ್ಯಸಙ್ಕಲ್ಪತ್ವ, ಪರಮಕಾರುಣಿಕತ್ವ, ವಾತ್ಸಲ್ಯ, ಸೌಶೀಲ್ಯಾದಿಗಳು. ಈ ಸರ್ವೇಶ್ವರನ ಗುಣಗಳ ಉಪಯೋಗವೇನೆಂದರೆ— ಆತನು ಆಶ್ರಯಿಸಲು ಯೋಗ್ಯನೆಂಬುದನ್ನು ಪ್ರದರ್ಶಿಸುತ್ತವೆ. ಜ್ಞಾನದಿಂದ ಆಶ್ರಿತನನ್ನು ವರಿಸಿ ಆತನ ವಿರೋಧಿಯ ನಿರಸನವನ್ನು ಮಾಡಬಹುದು. ಶಕ್ತಿಯಿಂದ ಭಕ್ತವಿರೋಧಿಗಳನ್ನು ನಿರಸನ ಮಾಡಬಹುದು ಬಲ ವೀರ್ಯ ತೇಜಸ್ಸುಗಳಿಂದ ಶ್ರಮಾದ್ಯವದ್ಯಗಳಿಲ್ಲದೇ ಇರೋಣವು ಸತ್ಯಸಂಕಲ್ಪನಾದುದರಿಂದ ಆಶ್ರಿತನಿಗೆ ಸರ್ವಶ್ರೇಯಸ್ಸನ್ನೂ ಅಪ್ರತಿಹತನಾಗಿ ನಡೆಸಿಕೊಡೋಣವು, ಮತ್ತು ಆಶ್ರಿತನು ಆಶ್ರಯಣಾನಂತರ ಅಪರಾಧಮಾಡಿದರೂ ಅಲ್ಪದಂಡನಾದಿಗಳ ಮೂಲಕ ನಡೆಸಿಕೊಡೋಣವು. ಪರಮಕಾರುಣಿಕತ್ವವಿರುವದರಿಂದ ಅಲ್ಪವಾದ ವ್ಯಾಜರೂಪವಾದ ಭರನ್ಯಾಸದ ಮೂಲಕ ಪರಮನಿಶ್ರೇಯಸ್ಸಿನ ದಾನವು. ವಾತ್ಸಲ್ಯವಿರುವದರಿಂದ ಆಶ್ರಿತನಲ್ಲಿ ಅನೇಕ ದೋಷಗಳಿದ್ದರೂ "ದೋಷೋ ಯದ್ಯಪಿ ತಸ್ಯ ಸ್ಯಾತ್ ಸತಾಮೇತದಗರ್ಹಿತಂ" (ರಾ.ಯು) ಎಂದು ಹೇಳಿ ಅವುಗಳನ್ನು ಪರಿಗಣಿಸದಿರೋಣವು. ಸ್ವಾಮಿತ್ವವಿರುವದರಿಂದ "ರಕ್ಷತೇ ಭಗವಾನ್ ವಿಷ್ಣುರ್ಭಕ್ತಾನಾತ್ಮಶರೀರವತ್" ತನ್ನ ಶರೀರವನ್ನು ಒಬ್ಬನು ತನ್ನದಾದುದರಿಂದ ಹೇಗೆ ಕಾಪಾಡಿಕೊಳ್ಳುವನೋ, ಹಾಗೆ ತನ್ನ ಶರೀರವಾದ ಭಕ್ತರನ್ನು ಕಾಪಾಡುವನು. ಸೌಶೀಲ್ಯವಿರುವದರಿಂದ, "ಗುಹೇನ ಸಹಿತೋ ರಾಮಃ" (ರಾ ಅಯೋ) ಎಂದೂ "ಅಹಂ ವೋ ಬಾಂಧವೋ ಜಾತಃ" ಎಂದೂ ಹೇಳಿರುವಹಾಗೆ ಪರತ್ವವನ್ನು ಹೊಂದಿರುವವನು ಆಶ್ರಿತರಾದ ನಮಗೆ ವಶ್ಯನೇ ಎಂಬ ಸಂಶಯಕ್ಕೆ ಅವಕಾಶವಿಲ್ಲದಿರೋಣವು.

ಹೀಗೆ ಸರ್ವೇಶ್ವರನ ಗುಣಗಳು ಉಪಯುಕ್ತವಾದವು. ಹೀಗೆ ಭಗವಂತನು ಇಂತಹ ಗುಣಗಳಿಂದ ಯುಕ್ತನಾಗಿ ಉಪಾಯವಾಗಿರುವಾಗ, ಲಕ್ಷ್ಮಿಯ ಉಪಾಯತ್ವದಿಂದೇನೆಂಬ ಶಂಕೆಯುಂಟಾಗಬಹುದು. ಈ ಗುಣಗಳೆಲ್ಲಾ ಲಕ್ಷ್ಮಿಗೂ ಉಂಟು, ಅಂತಹ ಲಕ್ಷ್ಮಿಯು ಉಪಾಯವಾಗಲೇನೂ ಪ್ರತಿಬಂಧಕವಿಲ್ಲವು. ಆದರೆ ಭಗವಂತನೇ ಉಪಾಯವಾದರೆ, ಗುಣಗಳಿಂದೇನು ? ಗುಣಗಳೇ ಉಪಾಯವಾದರೆ ಭಗವಂತನಿಂದೇನು ? ಎಂಬಾಕ್ಷೇಪಣೆಗೆ, ಗುಣಗಳು ಉಪಯುಕ್ತಗಳಾಗಿರುವದರಿಂದ ವಿಶೇಷಣಗಳಾಗಿ, ಅಂತಹ ಗುಣಗಳಿಂದ ಯುಕ್ತನಾದ ಸರ್ವೇಶ್ವರನೇ ಉಪಾಯವೆಂದು ಪ್ರಮಾಣಗಳಿರುವದರಿಂದ ಆಕ್ಷೇಪಣೆಗೆ ಕಾರಣ

**ಇವ್ವಿಶೇಷಣತ್ತಿನುಡೈಯ ಉಪಯೋಗ ಪ್ರಕಾರತ್ತೈ "ವೇರಿ ಮಾರಾದ ಪೂಮೇಲಿರುಪ್ಪಾಳ್ ವಿನೈ ತೀರ್ಕ್ಕುಮೇ" ಎನ್ರುವರ್,**

---

ವಿಲ್ಲವೆಂದರೆ, ಹಾಗೆಯೇ ಲಕ್ಷ್ಮಿಯೂ ಉಪಯುಕ್ತಳಾದುದರಿಂದ ವಿಶೇಷಣವಾಗಿಯೇ ಉಪಾಯಭೂತಳೆಂದೂ ಅನೇಕ ಪ್ರಮಾಣಗಳಿರುವದರಿಂದ ಯಾವದೊಂದು ಆಕ್ಷೇಪಣೆಗೂ ಕಾರಣವಿಲ್ಲವೆಂಬ ಭಾವವು.

ಹಾಗೆ ಹೇಳುವ ಪ್ರಮಾಣಗಳು ಯಾವುವು ಎಂದರೆ, ಶ್ರುತಿ, ಸ್ಮೃತಿ, ಇತಿಹಾಸ ವಾಕ್ಯಗಳುಂಟೆಂದೂ ಸಂಪ್ರದಾಯಕ್ಕೆ ನಮ್ಮಾಳ್ವಾರರೇ ಮೊದಲಾದವರ ಪಾಶುರಗಳುಂಟೆಂದೂ ತಿಳಿಸುತ್ತಾರೆ.—

**ಉಪಾಯೋಪೇಯ ಪರಮಾನ** – ಉಪಾಯವನ್ನು ಪ್ರತಿಪಾದಿಸುವ ದ್ವಯಮಂತ್ರದ ಪೂರ್ವಖಂಡವು, ಉಪೇಯವನ್ನು ಪ್ರತಿಪಾದಿಸುವ ಉತ್ತರಖಂಡವು ಇವುಗಳಿಂದ, **ವಾಕ್ಯದ್ವಯತ್ತಿಲುಮ್** - ಎರಡು ವಾಕ್ಯದಲ್ಲೂ, **ಶ್ರುತಮಾನ**- ಹೇಳಲ್ಪಟ್ಟಿರುವ, **ಇವ್ವಿಶೇಷತ್ತಿನುಡೈಯ** - "ಶ್ರೀಮತ್" ಎಂದು ಲಕ್ಷ್ಮಿಯನ್ನು ಬೋಧಿಸುವ ವಿಶೇಷಣದ, ಎಂಬಭಿಪ್ರಾಯವು, ಎರಡು ಕಡೆಯಲ್ಲೂ ಇರುವ ಶ್ರೀಮಚ್ಛಬ್ದವು ವಿಶೇಷಣವೆಂದು ಸ್ಥಾಪಿಸಿರುವದರಿಂದ ಇಲ್ಲಿ "ಇವ್ವಿಶೇಷಣ" ವೆಂದು ಹೇಳಲ್ಪಟ್ಟಿತು, **ಉಪಯೋಗಪ್ರಕಾರತ್ತೈ** - ಉಪಯೋಗ ವಿಶೇಷವನ್ನು, ನಮ್ಮಾಳ್ವಾರವರು ಕೃಪಯಾ ಉಪದೇಶಿಸಿದರು ಎಂದು ತಿಳಿಸುತ್ತಾರೆ. ಉಪಾಯತ್ವವನ್ನು ಬೋಧಿಸುವದಕ್ಕೆ ಒಂದು ಪಾಶುರವನ್ನೂ ಉಪೇಯತ್ವವನ್ನು ಬೋಧಿಸುವದಕ್ಕೆ ಒಂದು ಪಾಶುರವನ್ನೂ ಅನುಗ್ರಹಿಸಿರುತ್ತಾರೆ ಅವು ಯಾವುವೆಂದರೆ —

(೧) "ಮಾರಿಮಾರಾದ ತಣ್ಣಮ್ಮಲೈ ವೇಙ್ಗಡತಣ್ಣಲೈ ।
**ವಾರಿಮಾರಾದ ಪೈಮ್ಪೂಮ್ಪೊಯ್ಗೈಯಿಲ್ ಶೂಳ್ ಕುರುಕೂರ್ ನಗರ್ ।**
**ಕಾರಿಮಾರ್ಱ ಶಡಗೋಪರ್ಱ ಶೊಲ್ಲಾಯಿರತ್ತಿಪ್ಪತ್ತಾಲ್ ।**
**ವೇರಿಮಾರಾದ ಪೂಮೇಲಿರುಪ್ಪಾಳ್ ವಿನೈತೀರ್ಕ್ಕುಮೇ ॥**

**ಅರ್ಥ**— **ಮಾರಿ** - ಮಳೆಯು, **ಮಾರಾದ** - ತಪ್ಪದೆ ಬರುವದರಿಂದ, **ತಣ್** - ತಂಪಾಗಿಯೂ, **ಅಮ್** - ದರ್ಶನೀಯವಾಗಿಯೂ, ಇರುವ, **ವೇಙ್ಗಡಮ್ ಮಲೈ** - ತಿರುವೇಙ್ಗಡವೆಂದು ಹೆಸರುಳ್ಳ ಬೆಟ್ಟದಲ್ಲಿ ಬಿಜಮಾಡಿಸಿರುವ, **ಅಣ್ಣಲೈ** - ನಿರುಪಾಧಿಕ ಸ್ವಾಮಿಯಾದ ಶ್ರೀನಿವಾಸನನ್ನು, ಕುರಿತು ಇದು ಶೊನ್ನ

---

(೧) ತಿರುವಾಯ್ಮೊಳಿ ೪. ೫. ೧೧.

ಎಂಬುದಕ್ಕೆ ಕರ್ಮವು, **ವಾರಿ ಮಾರಾದ** – ಜಲಸಮೃದ್ಧಿಯು ತಪ್ಪದೆ ಇರುವ **ಪೈ** – ಸುಂದರಗಳಾದ, **ಪೂ** – ಪುಷ್ಪಸಮೃದ್ಧಿಯುಳ್ಳ, **ಪೊಳಿಲ್** – ಕೋಟೆಗಳಿಂದ, **ಶೂೞ್** – ವ್ಯಾಪ್ತವಾದ, **ಕುರುಗೂರ್‌ನಗರಿ** ಆಳ್ವಾರ್ ತಿರುನಗರಿಯು, **ಕಾರಿಮಾರ್ರ್** – ಕಾರಿಯೆಂದು ಪ್ರಸಿದ್ಧರಾದವರ ಪುತ್ರರಾದ, **ಶಡಗೋಪರ್** – ನಮ್ಮಾಳ್ವಾರ್ರವರು, **ಶೊನ್ನ** – ಅನುಗ್ರಹಿಸಿದ, **ಆಯಿರತ್ತು** – ಸಾವಿರ ಪಾಶುರಗಳಲ್ಲಿನ, **ಇಪ್ಪತ್ತಾಲಿ** – ಈ ೧೧ ಪಾಶುರಗಳಿಂದ, **ವೇರಿ** – ಪರಿಮಳವು, ಅದುದರಿಂದ ಮಧುಪ್ರವಾಹವು, **ಮಾರಾದ** – ಕಮ್ಮಿಯಾಗದಿರುವ, **ಪೂಮೇಲಿರುಪ್ಪಾಳ್** – ಕಮಲಪುಷ್ಪದಲ್ಲಿ ನಿತ್ಯವಾಸವನ್ನು ಮಾಡುವ, ಅನುಗ್ರಹಮಯಳಾದ ಶ್ರೀ ಮಹಾಲಕ್ಷ್ಮಿಯು, **ವಿನೈತೀರ್‌ಕ್ಕುಮೇ** – ಭಗವದನುಭವ ವಿರೋಧಿಯಾದ ಸಮಸ್ತ ಪಾಪಗಳನ್ನೂ ಹೋಗಲಾಡಿಸುವಳು, ನಿಶ್ಚಯವು ಹೀಗೆ ಆಶ್ರಿತನ ಅನಿಷ್ಟನಿವೃತ್ತಿಮೂಲಕ ಇಷ್ಟಪ್ರಾಪ್ತಿಯನ್ನು ಹೊಂದಿಸುವಳೆಂದು ಹೇಳಿರುವದರಿಂದ, ಉಪಾಯತ್ವವೂ ಉಂಟೆಂಬುದು ಸಿದ್ಧವು. ಪುರುಷಕಾರರೂಪದಿಂದ ಮಾತ್ರವು ಎಂದು ನಮ್ಮಾಳ್ವಾರವರು ಹೇಳಲಿಲ್ಲವು. "**ಅಸ್ಯಾ ಮಮ ಚ ಶೇಷಂ ಹಿ ವಿಭೂತಿರುಭಯಾತ್ಮಿಕಾ । ಇತಿ ಶ್ರುತಿ ಶಿರಸ್ಸಿದ್ಧಂ ಮಚ್ಛಾಸ್ತ್ರೇಷ್ವಪಿಮಾನದ**" ಎಂದು ಹೇಳಿರುವ ಹಾಗೆ ಎಲ್ಲಾ ವಿಭೂತಿಯು ಭಗವಂತನಿಗೂ ಲಕ್ಷ್ಮಿಗೂ ಸಹ ಶೇಷಭೂತವೆಂಬುದು ಭಗವಚ್ಛಾಸ್ತ್ರ, ಉಪನಿಷತ್ತುಗಳಲ್ಲೂ ಸಿದ್ಧವಾಗಿರುವದರಿಂದ, ಇಬ್ಬರೂ ಸಿದ್ಧೋಪಾಯರೆಂದು ತಿಳಿಯುವದೇ ಶಾಸ್ತ್ರಜ್ಞಾನಕ್ಕೆ ಅನುಸಾರವಾದುದೇ. **ಉಭಯಾಧಿಷ್ಠಾನಂಚೈಕಂ ಶೇಷಿತ್ವಂ** ಎಂದು ಶ್ರೀ ಸೋಮೇಶಯಾಂಡಾರರವರೂ ಹೇಳಿರುವದರಿಂದ ತಮಗೆ ಶೇಷಭೂತರಾದ ಚೇತನರ ಉಪಾಯತ್ವದಲ್ಲಿ ಇಬ್ಬರಿಗೂ ಅಧಿಕಾರ ಉಂಟೆಂಬುದೇ ಸ್ವಾರಸ್ಯವಾದ ಅಭಿಪ್ರಾಯವು. "**ಜಾಯಾಪತ್ಯೋರ್ನವಿಭಾಗೋ ವಿದ್ಯತೇ**" ಎಂಬ ಧರ್ಮಾನುಸಾರವಾಗಿ ಈ ಲೋಕದಲ್ಲೇ ಪತಿ ಪತ್ನಿಯರಿಗೆ ಅವರವರುಗಳಿಗೆ ಉಚಿತವಾದ ವಿಭೂತಿಗಳೂ ವ್ಯಾಪಾರಗಳೂ ಇದ್ದರೂ, ಇಬ್ಬರಿಗೂ ಯಾವುದೊಂದು ವಿಭಾಗವಿಲ್ಲದಿರುವಾಗ, ಇಬ್ಬರೂ ಸರ್ವಜ್ಞರಾಗಿ, (೨) "**ಅಸ್ಯಾದೇವ್ಯಾ ಮನಸ್ತಸ್ಮಿನ್ ತಸ್ಯಚಾಸ್ಯಾಂ ಪ್ರತಿಷ್ಠಿತಂ**" ಎಂದೂ (೩) "**ರಾಮಸ್ಯ ವ್ಯವಸಾಯಜ್ಞಾ**" ಎಂದೂ ಮಹರ್ಷಿಯು ಉಪಪಾದಿಸಿರುವಹಾಗೆ ಪರಸ್ಪರ ಇಂಗಿತವನ್ನರಿತವರಾಗಿರುವಾಗ ಇಬ್ಬರಿಗೂ ಚೇತನೋದ್ಧಾರ ವಿಷಯದಲ್ಲಿ ಅಧಿಕಾರ ಉಂಟೆಂದು ಭಾವಿಸುವದರಲ್ಲಿ ಯಾವದೊಂದು ವಿರೋಧವೂ ಇಲ್ಲವು, ಶಾಸ್ತ್ರಪ್ರಮಾಣ ಬಲ

(೨) ರಾಮಾ. ಸುಂ. ೧೫. ೫೨. (೩) ರಾಮಾ. ಸುಂ. ೧೬. ೪.

ಉಂಟೆಂಬುದಕ್ಕೆ ಅನೇಕ ಪ್ರಮಾಣಗಳನ್ನು ಉದಾಹರಿಸುತ್ತಾರೆ. ಆದರೆ ಕೆಲವು ವಿರೋಧಗಳನ್ನು ಪೂರ್ವಪಕ್ಷರೀತಿಯಲ್ಲಿ ತರಬಹುದು ಹೇಗೆಂದರೆ—

(೧) ಈಶ್ವರದ್ವಿತ್ವದಿಂದ ಪರಸ್ಪರ ವೈಮನಸ್ಯದಿಂದ ವ್ಯಾಘಾತ ಉಂಟಾಗ ಬಹುದು ಎಂಬುದು ಒಂದು ಪೂರ್ವಪಕ್ಷವು ಪರಸ್ಪರ ಇಂಗಿತಗಳನ್ನರಿತವರಾಗಿ ಸರ್ವಜ್ಞರಾಗಿ, ಶುದ್ಧ ಸತ್ವಗುಣಗಳುಳ್ಳವರಾದುದರಿಂದ ಪರಸ್ಪರ ವೈಮನಸ್ಯಕ್ಕೆ ಕಾರಣವೇ ಇಲ್ಲವು ಶ್ರೀರಾಮನಿಗೆ ಸೈನ್ಯವನ್ನು ಲಂಕೆಗೆ ತೆಗೆದುಕೊಂಡು ಹೋಗಿ ದುಷ್ಟ ರಾಕ್ಷಸರನ್ನೆಲ್ಲಾ ಕೊಲ್ಲಬೇಕೆಂಬ ಇಷ್ಟವಿರುವಾಗ, ತಾನು ಎಂದಿಗೂ ರಾವಣನನ್ನು ತನ್ನ ಪಾತಿವ್ರತ್ಯ ತಪೋಬಲದಿಂದ ಭಸ್ಮಮಾಡುವದಿಲ್ಲವೆಂದು "ಅಸಂದೇಶಾತ್ತು ರಾಮಸ್ಯ ತಪಸಶ್ಚಾನುಪಾಲನಾತ್ । ನತ್ವಾಂ ಕುರ್ಮಿ ದಶಗ್ರೀವ ಭಸ್ಮ ಭಸ್ಮಾರ್ಹತೇಜಸಾ" ಎಂಬುದರಿಂದ ತಿಳಿಸಿ, ತನ್ನ ಪತಿಯ ಸಙ್ಕಲ್ಪಾನುಸಾರ "ಶರೈಸ್ತು ಸಂಕುಲಾಂ ಕೃತ್ವಾ ಲಂಕಾಂ ಪರಬಲಾರ್ದನಃ । ಮಾಂ ನಯೇದ್ಯದಿ ಕಾಕುತ್ಸ್ಥಸ್ತತ್ತಸ್ಯ ಸದೃಶಂ ಭವೇತ್" ಲಂಕೆಗೆ ಸೈನ್ಯ ಸಮೇತ ಬಂದು ಮುತ್ತಿಗೆ ಹಾಕಿ ಬಾಣಪ್ರಯೋಗದಿಂದ ಶತ್ರು ಬಲವನ್ನೆಲ್ಲಾ ನಿರ್ಮೂಲಮಾಡಿ ತನ್ನನ್ನು ಕರೆದುಕೊಂಡುಹೋದರೆ, ಆಗೀಗ ಆ ಧೀರೋದಾತ್ತನಾದ ರಾಮನ ಪೌರುಷಕ್ಕೆ ಸಮಾನವಾದುದಾಗುತ್ತದೆಂದು ಆಂಜನೇಯನಲ್ಲಿ ಹೇಳಿ ಕಳುಹಿಸಿದಳು ಆದುದರಿಂದ ಪರಸ್ಪರ ವೈಮನಸ್ಯಕ್ಕೇ ಕಾರಣವೇ ಇಲ್ಲವು

(೨) ಐಕಾಂತ್ಯಕ್ಕೆ ಹಾನಿ ಎಂಬುದು ಎರಡನೆಯ ದೂಷಣವು ಲಕ್ಷ್ಮೀನಾರಾಯಣರು ಇಬ್ಬರಾದುದರಿಂದ ಧ್ಯಾನಿಸುವ ಯೋಗಿಯ ಐಕಾಂತ್ಯಕ್ಕೆ ಭಂಗವೆಂಬುದು ಇದರಭಿಪ್ರಾಯವು ಧ್ಯಾನದಲ್ಲಿ ಐಕಾಂತ್ಯಕ್ಕೇನೂ ಲಕ್ಷ್ಮಿಯ ಸಂಬಂಧವು ಭಂಗವಲ್ಲವು ನಾರಾಯಣನೇ ವಿಶೇಷ್ಯವಾಗಿ ಲಕ್ಷ್ಮಿಯು ಆತನಿಗೆ ವಿಶೇಷಣವಾದ ಪ್ರಯುಕ್ತ, ವಿಶೇಷಣದಿಂದ ಸೇರಿದ ವಿಶೇಷ್ಯವನ್ನು ಧ್ಯಾನಿಸುವದರಿಂದ ಐಕಾಂತ್ಯಕ್ಕೇನೂ ತೊಂದರೆ ಇಲ್ಲವು ಹೀಗೆ ವಿಶೇಷಣವೂ ಬಾಧಕವೆಂದರೆ, ಕಲ್ಯಾಣಗುಣಗಳಾದ ವಿಶೇಷಣಗಳೂ ಬಾಧಕವೆಂದು ಭಾವಿಸಬೇಕಾಗುತ್ತದೆ ಆಗ ಅದ್ವೈತಿಗಳಹಾಗೆ ಪರಬ್ರಹ್ಮವು ನಿರ್ವಿಶೇಷವಾಗಿಯೂ ಇರಬಹುದೆಂದು ಒಪ್ಪಬೇಕಾಗುತ್ತದೆ.

(೩) ಹೀಗೆ ಲಕ್ಷ್ಮಿಗೂ ಉಪಾಯತ್ವ ಮೊದಲಾದ ಸರ್ವಾಧಿಕಾರವುಂಟೆಂದು ಒಪ್ಪಿದರೆ, ನಿಸ್ಸಮಾಭ್ಯಧಿಕಶ್ರುತಿಗೆ ವಿರೋಧವಾಗಿ ಇಬ್ಬರೂ ಸಮರು ಎಂದು ಒಪ್ಪಬೇಕಾಗುತ್ತದೆ. ಲಕ್ಷ್ಮಿಯು ನಾರಾಯಣನಿಗೆ ಶೇಷಭೂತಳಾಗಿದ್ದುಕೊಂಡು ಆತನಿಗೆ ಸಹಧರ್ಮಚಾರಿಣಿಯಾಗಿ, ಆತನೊಂದಿಗೇನೆ ಸಕಲ ವ್ಯಾಪಾರಗಳಲ್ಲೂ ಸಹಾಯಕಳಾಗಿಯೂ ಅನುಮೋದಿಸಿಯೂ, ಲೀಲಾರಸವನ್ನು ಪತಿಯೊಂದಿಗೆ ಅನುಭವಿ

(೨) "ನಿನ್ತಿರುವರುಳುಮ್ ಪಙ್ಗಯತ್ತಾಳ್ ತಿರುವರುಳುಮ್ ಕೊಣ್ಡು, ನಿನ್ ಕೋಯಿಲ್ ಶೀಯ್‌ತ್ತು" ಎನ್ಱವ್ ನಮ್ಮಾಳ್ವಾರ್ ಅರುಳಿ

---

ಸುವಳೆಂದು ಅಙ್ಗೀಕರಿಸುವದರಿಂದ ಈ ಶ್ರುತಿಗೇನೂ ವಿರೋಧವಿಲ್ಲವು ಇತ್ಯಾದಿ

"ಪಣ್ಡೈನಾಳಾಲೇ ನಿನ್ತಿರುವರುಳುಮ್ ಪಙ್ಗಯತ್ತಾಳ್ ತಿರುವರುಳು ।
ಕೊಣ್ಡು, ನಿನ್ಕೋಯಿಲ್ ಶೀಯ್‌ತ್ತುಪ್ಪಲ್ ಪಡಿಕಾಲ್ ಕುಡಿಕುಡಿವ
ಳಿವನ್ದಾಟ್ಚೆಯ್ಯುಮ್ ।
ತೊಣ್ಡರೋರ್ ಕ್ಕರುಳಿಚ್ಚೋತಿವಾಯ್ ತಿರನ್ದು ನಾಮರೈಕ್ಕಣ್ಗಳಾನೋ
ಕ್ಕಾಯ್ ।
ತೆಣ್ಡಿರೈ ಪ್ಪೊರುನಱ್ಱಣ್ಪಣೈ ಶೂಳ್‌ನ್ದ ತ್ತಿರುಪ್ಪುಳಿಙ್ಗುಡಿಕ್ಕಿಡನ್ದಾನೇ ॥"

ಎಂಬುದು ಪೂರಾ ಪಾಶುರವು ಇದರರ್ಥವು.—"ತೆಣ್‌ತಿರೈ - ನಿರ್ಮಲವಾದ ಅಲೆಗಳುಳ್ಳ, ಪೊರುನಲ್ - ತಾಮ್ರಪರ್ಣೀ ನದಿಯು, ತಣ್‌ಪಣೈ - ತಂಪಾದ ಜಲಾಶಯಗಳಿಂದ, ಶೂಳ್‌ನ್ದ - ವ್ಯಾಪ್ತವಾಗಿರುವ, ತೀರವನ್ನು ಹೊಂದಿರುವ, ತುಂಬಿರುವ, ತಿರುಪ್ಪುಳಿಙ್ಗುಡಿ ಕಿಡನ್ದಾನೇ - ತಿರುಪ್ಪುಳಿಙ್ಗುಡಿಯಲ್ಲಿ ಬಿಜಮಾಡಿಸಿರುವ ಸ್ವಾಮಿಯೇ, ನಿನ್ ತಿರುವರುಳುಮ್ - ನಿನ್ನ ಕೃಪಾಕಟಾಕ್ಷವನ್ನೂ, ಅದಕ್ಕೆ ಕಾರಣವಾದ, ಪಙ್ಗಯತ್ತಾಳ್ ತಿರುವರುಳುಮ್ - ನಿನ್ನಪ್ರಿಯವಲ್ಲಭಳಾದ ಕಮಲವಾಸಿನಿಯಾದ ಲಕ್ಷ್ಮಿಯ ಕೃಪಾ ಪ್ರಭಾವವನ್ನೂ, ಪಣ್ಡೈನಾಳಾಲೆ ಕೊಂಡು - ಬಹು ಕಾಲದಿಂದ ಹೊಂದಿ, ನಿನ್ನ ಕೋಯಿಲ್ ಶೀಯ್‌ತ್ತು - ನಿನಗಭಿಮತವಾದ ದಿವ್ಯದೇಶದಲ್ಲಿ ಸಮ್ಮಾರ್ಜನೆಯನ್ನು (ಸಾರಿಸುವದು) ಇದು ಸ್ವರೂಪೋಚಿತವಾದ ಸರ್ವ ಕೈಂಕರ್ಯಗಳಿಗೂ ಉಪಲಕ್ಷಣವು, ಪಲ್‌ಪಡಿಕಾಲ್ - ಬಹು ಜನ್ಮದಿಂದಲೂ, ಕುಡಿಕುಡಿ ವಳಿವನ್ದು - ಕುಲಕ್ರಮವಾಗಿ ಬಂದು ಶಾಸ್ತ್ರನಿಯಮನಾನುಸಾರವಾಗಿ, ಆಳ್ ಶೆಯ್ಯುಮ್ - ದಾಸ್ಯವನ್ನು ಮಾಡುವ, ತೊಣ್ಡರೋರ್‌ಕ್ಕು ಅರುಳಿ - ಆಶ್ರಿತರಾದ ನಿನ್ನ ಭಕ್ತರಾದ ನಮಗೆ ಕೃಪೆಗೈದು, ಶೋತಿವಾಯ್ ತಿರನ್ದು - ನಿನ್ನ ಪ್ರಕಾಶಕರವಾದ ಬಾಯನ್ನು ತೆರೆದು ಎಂದರೆ ನಮ್ಮನ್ನು ಬಂದೆಯಾ ಎಂದು ಕೃಪೆಮಾಡಿ ಬರಮಾಡಿಕೊಂಡು, ಉರ್ ತಾಮರೈ ಕಣ್ಗಳಾಲ್ - ನಿನಗೇನೇ ಅಸಾಧಾರಣವಾದ ಪುಂಡರೀಕಸದೃಶವಾದ ಕಣ್ಣುಗಳಿಂದ, ನೋಕ್ಕಾಯ್ - ವಿಭೀಷಣಾದಿಗಳನ್ನು ಕಟಾಕ್ಷಿಸಿದ ಹಾಗೆ ಕಟಾಕ್ಷಿಸಯ್ಯಾ." ಇಲ್ಲಿ ನಾವು ಮಾಡುವ ಕೈಂಕರ್ಯಗಳು ಲಕ್ಷ್ಮೀ

---

(೨) ತಿರುವಾಯ್ಮೊಳಿ ೯.೨.೧.

ಚ್ಚೆಯ್‌ದಾರ್. (೩) "ಅಲಮೇಷಾ ಪರಿತ್ರಾತುಂ ರಾಕ್ಷಸ್ಯೋ ಮಹತೋ ಭಯಾತ್" ಎನ್ರುಮ್, (೪) ಅಲಮೇಷಾ ಪರಿತ್ರಾತುಂ ರಾಘವಾದ್ರಾಕ್ಷ

ನಾರಾಯಣರಿಬ್ಬರಿಗೂ ಎಂದು ಹೇಳಿರುವದರಿಂದ ಪ್ರಾಪ್ಯದೆಶೆಯಲ್ಲಿ ಕೈಂಕರ್ಯವು ಇಬ್ಬರಿಗೂ ಎಂಬ ಭಾವವು. ಹೀಗೆ ನಮ್ಮಾಳ್ವಾರ್ರವರು ಉಪಾಯ ದೆಶೆಯಲ್ಲೂ ಉಪೇಯ ದೆಶೆಯಲ್ಲೂ ಲಕ್ಷ್ಮೀಯುಕ್ತನಾಗಿಯೇ ಇರುವನೆಂದುಪಪಾದಿಸಿರುವುದರಿಂದ ಎರಡು ಕಡೆಯಲ್ಲೂ ದ್ವಯದಲ್ಲಿ ಶ್ರೀಮಚ್ಛಬ್ದವು ವಿಶೇಷಣವೇ ಎಂಬ ಭಾವವು." ಎನ್ರು ನಮ್ಮಾಳ್ವಾರ್ ಅರುಳಿಚ್ಚೆಯ್‌ದಾರ್ - ಎಂದು ನಮ್ಮಾಳ್ವಾರ್‌ರವರು ಅನುಗ್ರಹಿಸಿರುತ್ತಾರೆ

ಮುಂದೆ ಲಕ್ಷ್ಮಿಯೂ ಉಪಾಯಭೂತಳೆಂಬುದಕ್ಕೆ ಮಹರ್ಷಿಗಳ ಶ್ರೀಸೂಕ್ತಿಗಳನ್ನು ಉದಾಹರಿಸುತ್ತಾರೆ :— ಏಷಾ - ಈ ಜಗನ್ಮಾತೆಯೇ, ರಾಕ್ಷಸ್ಯಃ - ಅವಳ ಸುತ್ತಲೂ ಇರುವ ರಾಕ್ಷಸ ಸ್ತ್ರೀಯರನ್ನು, ಮಹತಃ ಭಯಾತ್-ಅಂತಹ ಲೋಕಮಾತೆಗೆ ಮಾಡಿದ ಮಹಾಪರಾಧಕ್ಕಾಗಿ ಉಂಟಾಗುವ ಶಿಕ್ಷೆಯ ಭಯದಿಂದ, ಪರಿತ್ರಾತುಂ - ಅದರ ಶಙ್ಕಾ ಈಷದಪಿ ಇಲ್ಲದಹಾಗೆ ಸಂರಕ್ಷಿಸಲು, ಅಲಂ - ಸಮರ್ಥಳು ಅಥವಾ ಮಹತೋ ಭಯಾತ್ - ಸಂಸಾರರೂಪವಾದ ಮಹತ್ತಾದ ಭಯದಿಂದ ಕಾಪಾಡಲು ಸಮರ್ಥಳು ಹೀಗಿರುವಾಗ ನಮ್ಮನ್ನು ಪ್ರಾಣಭಯದಿಂದ ಕಾಪಾಡುವುದರಲ್ಲಿ ಸಂದೇಹವೇನಿದೆ ಎಂಬ ಭಾವವು ಇದರ ಪೂರ್ವಾರ್ಧವು :— "ಪ್ರಣಿಪಾತ ಪ್ರಸನ್ನಾಹಿ ಮೈಥಿಲೀ ಜನಕಾತ್ಮಜಾ" ಎಂಬುದು. ಇವಳೂ ಶರಣಾಗತ ರಕ್ಷಕಳು ಎಂಬ ಭಾವವು. ಅಲಮೇಷಾ ಪರಿತ್ರಾತುಂ ಎಂದಿರುವುದರಿಂದ ಉಪಾಯಭೂತವಾಗಿ ಸಂರಕ್ಷಣೆಗೆ ಶ್ರೀರಾಮನೇ ಆಗಬೇಕೆಂಬುದೇನೂ ಇಲ್ಲವು, ಈಕೆಗೂ ಕೂಡ ರಕ್ಷಣ ಶಕ್ತಿಯುಂಟು ಎಂಬ ಭಾವವು ತೋರಿಬರುತ್ತದೆ." ಪುರುಷಕಾರರೂಪದಲ್ಲಿ ಸಮರ್ಥಳು ಎಂದು ಅರ್ಥ ಮಾಡಬಹುದಲ್ಲಾ ಎಂದರೆ, ಹಾಗೆ ಮಹರ್ಷಿಯು ಕಂಠೋಕ್ತವಾಗಿ ಎಲ್ಲೂ ಹೇಳದಿರುವದರಿಂದಲೂ, ಇಲ್ಲಿ ಅಲಂ ಪರಿತ್ರಾತುಂ ಎಂಬ ಪ್ರಯೋಗಗಳಿರುವದರಿಂದಲೂ, ಮಹರ್ಷಿಯ ಅಭಿಪ್ರಾಯವು ಉಪಾಯ ಮೂಲಕವಾಗಿಯೇ ಎಂದು ತೋರಿಬರುತ್ತದೆ. ಪ್ರತಿಕೂಲಾವಸ್ಥೆಯಲ್ಲಿರುವ ತ್ರಿಜಟೆಗೇನೇ ಲಕ್ಷ್ಮಿಯನ್ನಾಶ್ರಯಿಸಿದರೆ ಉಪಾಯಭೂತಳಾಗಿ ತನಗೂ ತನಗೆ ಸೇರಿದವರಿಗೂ ರಕ್ಷಕಳಾಗುವಳೆಂಬ ಪೂರ್ಣ ನಂಬಿಕೆ ಇರುವಾಗ ಅನುಕೂಲಾವಸ್ಥೆಯಲ್ಲಿರುವವರು ಸಂದೇಹ

(೩) ರಾಮಾ. ಸುಂ. ೨೭ ೪೪ (೪) ರಾಮಾ. ಸುಂ. ೫೮ ೯೧

ಸೀಗಣಾಮ್ ಎನ್ರುಮ್, ಶ್ರೀ ವಾಲ್ಮೀಕಿ ಭಗವಾನ್ ಶರಣಾಗತಿ ಸಾರ ಮಾನ ಆದಿಕಾವ್ಯತ್ತಿಲೇ ನಿಬಂಧಿತ್ತಾರ್.

---

ಪಡಲು ಈಷದಪಿ ಕಾರಣವಿರುವದಿಲ್ಲವು ಎನ್ರುಮ್ - ಎಂದೂ, ಏಷಾ - ಈ ಸೀತೆಯು, ರಾಘವಾತ್ - ಸೀತೆಗೆ ಭರ್ತ್ಸನನ ತರ್ಜನಾದಿಗಳನ್ನು ಮಾಡಿದ ದೋಷಗಳಿಗಾಗಿ ಕೋಪವೇನಾದರೂ ಬಂದಿರುವ ಶ್ರೀರಾಮನ ದೆಸೆಯಿಂದ, ಹಿಂದೆ ಮಹತೋಭಯಾತ್ ಎಂದು ಹೇಳಿರುವದನ್ನೇ ಆಂಜನೇಯನ ದಿವ್ಯ ಸೂಕ್ತಿ ಮೂಲಕ ಶ್ರೀರಾಮನಿಂದ ಪ್ರಾಪ್ತವಾಗಬಹುದಾದ ಭಯವೆಂದು ವಿವರಿಸಿ ವ್ಯಾಖ್ಯಾನಮಾಡಿರುವದರಿಂದ, ಇದೇ ಮಹತ್ತಾದ ಭಯವೆಂಬ ಭಾವವು, ಎಲ್ಲರಿಗೂ ದೊಡ್ಡವನು ಶ್ರೀರಾಮನು, ಅವನ ದೆಶೆಯಿಂದ ಭಯವು ಮಹತ್ತಾದ ಭಯವೆಂದಾಗಲಿ ಆಗಬಹುದು. ರಾಕ್ಷಸೀಗಣಂ - ಈ ರಾಕ್ಷಸಿಯರ ಸಮೂಹ ವನ್ನು, ಪರಿತ್ರಾತುಂ - ಸಂರಕ್ಷಿಸಲು, ಅಲಂ - ಸಮರ್ಥಳು ಅಥವಾ ಸಾಕು ಮುಂದಕ್ಕೆ "ಅಭಿಯಾಚಾಮ ವೈದೇಹೀ ಮೇತದ್ಧಿ ಮಮರೋಚತೇ" ಎಂಬುವದು ಉತ್ತರಾರ್ಧವು —ವೈದೇಹಿಯನ್ನು ಪ್ರಾರ್ಥಿಸೋಣ, ಇದೀಗ ಒಳ್ಳೇ ಉಪಾಯವೆಂಬುದು ನನ್ನ ಅಭಿಪ್ರಾಯವೆಂದು ತ್ರಿಜಟೆಯು ತನ್ನ ಸಖಿಯ ರಾದ ರಾಕ್ಷಸಸ್ತ್ರೀಯರಿಗೆ ಹೇಳುತ್ತಾಳೆ. ಹೀಗೆ ಹೇಳಿ ಪ್ರಾರ್ಥಿಸಿದ ತ್ರಿಜಟೆಗೆ ಸೀತೆಯು

"ತತಸ್ಸಾಹ್ರೀಮತೀ ಬಾಲಾ ಭರ್ತುರ್ವಿಜಯ ಹರ್ಷಿತಾ ।
ಅವೋಚದ್ಯದಿ ತತ್ತಥ್ಯಂ ಭವೇಯಂ ಶರಣಂಹಿ ವಃ ॥"

"ಅನಂತರದಲ್ಲಿ ಲಜ್ಜಿತಳಾಗಿ ಬಾಲೆಯಾದ ಸೀತೆಯು ತನ್ನ ಪತಿಯಾದ ಶ್ರೀರಾಮ ನಿಗೆ ಜಯಸೂಚಕವಾದ ಸ್ವಪ್ನವೃತ್ತಾಂತದಿಂದ ಹರ್ಷಿತಳಾಗಿ, ನೀವು ಹೇಳುವ ಮಾತು ಸತ್ಯವಾದುದಾದರೆ ನಿಮಗೆ ರಕ್ಷಕಳಾಗುವೆನು" ಎಂದು ಹೇಳಿದ ಸೀತಾ ವಾಕ್ಯವನ್ನು ಆಂಜನೇಯನು ಶ್ರೀರಾಮನಿಗೆ ಹರ್ಷವನ್ನುಂಟುಮಾಡುವದಕ್ಕಾಗಿ ಹೇಳಿದನಂತರ ಸೀತೆಯು ಉಪಾಯಭೂತಳಾಗಿರುವದು ಶ್ರೀರಾಮನಿಗೂ ತುಂಬಾ ಇಷ್ಟವಾದುದೆಂಬಭಿಪ್ರಾಯವೂ ಸೂಚಿತವು ಆದುದರಿಂದ ಶ್ರೀ ದೇಶಿಕರವರು ಈ ಮೇಲಿನ ರಾಮಾಯಣ ವಾಕ್ಯವನ್ನು ಉದಾಹರಿಸಿರುತ್ತಾರೆ ಎನ್ರುಮ್ - ಎಂಬದಾಗಿಯೂ, ಪೂಜ್ಯರಾದ ಶ್ರೀ ವಾಲ್ಮೀಕಿ ಮಹರ್ಷಿಗಳು, ಶರಣಾಗತಿ ಸಾರ ಮಾನ್ - ಶರಣಾಗತಿಯೇ ಸಾರ ವಿಷಯವಾಗಿ ಪ್ರತಿಪಾದಿಸಲ್ಪಟ್ಟಿರುವ ; ಈ ಗ್ರಂಥದಲ್ಲಿ ಮೊದಲಿಂದ ಹಿಡಿದು ಕೊನೆಯವರೆಗೂ ಶರಣಾಗತಿಯು ನಾನಾ

ವಿಧ ಪುರುಷಾರ್ಥಗಳಿಗಾಗಿ ಮಾಡಿರುವದೇ ಉಪಪಾದಿತವಾಗಿರುತ್ತದೆ. ಇವುಗಳಲ್ಲೆಲ್ಲಾ ಅಬ್ಗ್ಯಯಲ್ಲಿ ವ್ಯತ್ಯಾಸ ಉಂಟು, ಇಂತಹ ಶರಣಾಗತಿಗಳೆಲ್ಲಾ ಉಪದೇಶಿಸಲ್ಪಡುವದರಿಂದ ಶರಣಾಗತಿ ಸಾರಮಾನ ಎಂಬ ಪ್ರಯೋಗವು, ಹೀಗೆ ಶರಣಾಗತಿಯೇ ಸಾರವಾದ ವಿಷಯವಾಗಿರುವ, ಆದಿಕಾವ್ಯತ್ವೇನ ನಿಬಂಧಿತ್ವಾತ್-ಆದಿಕಾವ್ಯವಾದ ಶ್ರೀಮದ್ರಾಮಾಯಣದಲ್ಲಿ, ಶಾಸ್ತ್ರ ವಿಧಿರೂಪದಲ್ಲಿ ಉಪದೇಶಿಸಿರುತ್ತಾರೆ. ಆದರೆ ಈ ಶ್ರೀಮದ್ರಾಮಾಯಣ ವಾಕ್ಯವನ್ನು ನಂಬಬಹುದೋ ? ಆದಿಕಾವ್ಯವೆಂದು ಕಾವ್ಯಗಳಲ್ಲಿ ಸೇರಿರುವದರಿಂದ ಅತಿಶಯೋಕ್ತಿ, ಉತ್ಪ್ರೇಕ್ಷಾದಿಗಳ ಮೂಲಕ ಹೇಳಿದ ಮಾತೋ ಎಂದರೆ "ನತೇ ವಾಗನೃತಾ ಕಾವ್ಯೇ ಕಾಚಿದತ್ರ ಭವಿಷ್ಯತಿ । ಕುರು ರಾಮ ಕಥಾಂ ಪುಣ್ಯಾಂ ಶ್ಲೋಕಬದ್ಧಾಂ ಮನೋರಮಾಂ ॥" (ರಾ. ಬಾ ೨-೩೫) ಶ್ರೀ ವಾಲ್ಮೀಕಿ ಮಹರ್ಷಿಯು, ಕ್ರೌಂಚ ಪಕ್ಷಿಯ ವಧ ಮೂಲಕ ಉಂಟಾದ "ಮಾನಿಷಾದ" ವೆಂಬ ಅಶ್ಲೀಲ ವಾಕ್ಯದಿಂದ ದುಃಖಾಕ್ರಾಂತರಾಗಿರುವಾಗ, ಚತುರ್ಮುಖಬ್ರಹ್ಮನು ಬಂದು ಅದೇ ಅದ್ಭುತವಾದ ಮಙ್ಗಳಶ್ಲೋಕವೆಂದು ತೋರ್ಪಡಿಸಿ, ಅವರ ಶೋಕವನ್ನು ಹೋಗಲಾಡಿಸಿ, ಓ ವಾಲ್ಮೀಕಿಯೇ ನಿನ್ನ ಕಾವ್ಯದಲ್ಲಿ ಶಾಸ್ತ್ರದುಷ್ಟವಾಗಿ ಸುಳ್ಳಾದ ಮಾತು ಯಾವುದೂ ಇರುವದಿಲ್ಲವು. ಎಂದರೆ ಯಾವ ವಿಧವಾದ ದೋಷವೂ ಅದರಲ್ಲಿರುವದಿಲ್ಲವು, ಆದುದರಿಂದ ಪರತತ್ತ್ವ ಯಾಥಾರ್ಥ್ಯವನ್ನು ಪ್ರದರ್ಶಿಸುವ ರಾಮಕಥೆಯನ್ನು ಬರೆಯಲು ನೀನು ಯೋಗ್ಯನಾದುದರಿಂದ, ಕುರು ರಾಮಕಥಾಂ - ಶ್ರೀರಾಮ ಕಥೆಯನ್ನು ರಚಿಸು, ಅದು ಎಂಥಾದ್ದು ಆಗುತ್ತದೆಂದರೆ, ಪುಣ್ಯಾಂ - ಪಾಪಹರವಾದುದಾಗುತ್ತದೆ, ಮತ್ತು ಮನೋರಮಾಂ ಶ್ರುತಿಗೆ ಮನೋಹರವಾಗಿಯೂ ವಿಚಿತ್ರ ಕಥೆಗಳಿಂದ ಮನಸ್ಸಿಗೆ ಆಹ್ಲಾದಕರವಾಗಿ ಪುನಃಪುನಃ ಕೇಳಬೇಕೆಂಬ ಆಶೆಯನ್ನು ಹುಟ್ಟಿಸುವಂಥಾದ್ದಾಗುತ್ತದೆ, ಮತ್ತು ಶ್ಲೋಕಬದ್ಧಾಂ - ನಾಟಕಾದಿಗಳಿಂದ ಉಂಟಾಗುವ ಆನಂದಕ್ಕಿಂತ ಹೆಚ್ಚಾದ ಆನಂದವನ್ನುಂಟುಮಾಡುವ ಹಾಗೆ ನಾನಾ ವಿಧ ವೃತ್ತಗಳಿಂದ ಯುಕ್ತವಾಗಿ ಮನಸ್ಸಿಗೆ ರಂಜಕವಾದುದು, ಇಂತಹ ರಾಮಾಯಣವನ್ನು ರಚಿಸು ಎಂದು ಅನುಗ್ರಹಿಸಿ ಹೋಗಿರುವದರಿಂದ, ಸತ್ಯವಾಗಿ ಶರಣಾಗತಿ ಶಾಸ್ತ್ರವನ್ನುಪಪಾದಿಸುವ ಕಾವ್ಯವೆಂದು ಹೇಳಿದರು. ಇಲ್ಲಿ ನಿಬಂಧಿತ್ವಾನ್ ಎಂದು ಹೇಳಿರುವದರಿಂದ, ಶ್ರೀ ವಾಲ್ಮೀಕಿ ಭಗವಾನರವರು ಹೇಳಿರುವ ವಾಕ್ಯವು, ಶ್ರುತಿಯ ವಿಧಿವಾಕ್ಯದ ಹಾಗೆ ಉಪಾದೇಯವೆಂಬಭಿಪ್ರಾಯದಿಂದ ಹೇಳಿದುದಾಗಿರುತ್ತದೆ. ಹೇಗೆಂದರೆ —ಸತು ಮೇಧಾವಿನೌ ದೃಷ್ಟ್ವಾ ವೇದೇಷು ಪರಿನಿಷ್ಠಿತೌ । ವೇದೋಪಬೃಂಹಣಾರ್ಥಾಯ ತಾವಗ್ರಾಹಯತ ಪ್ರಭುಃ । ಕಾವ್ಯಂ ರಾಮಾಯಣಂ ಕೃತ್ಸ್ನಂ ಸೀತಾಯಾಶ್ಚರಿತಂ ಮಹತ್ ॥" ಲವ

(೫) "ಸಂಸಾರಾರ್ಣವ ತಾರಿಣೀಂ" ಎನ್ರು ಹಿರಣ್ಯಗರ್ಭಕಾಶ್ಯಪಾದಿಗಳುವ್ ಶೊನ್ನಾರ್ಗಳ್.

---

ಕುಶರು ನಾಲ್ಕು ವೇದಗಳ ಸಾಂಗಾಧ್ಯಯನದಿಂದುಂಟಾದ ಆಪಾತ ಪ್ರತಿಪನ್ನ ವೇದಾರ್ಥಗಳುಳ್ಳವರಾದುದರಿಂದ ಸತ್ಪಾತ್ರರಾದ ಶಿಷ್ಯರೆಂದು ಭಾವಿಸಿ, ವೇದಾರ್ಥಗಳ ಉಪಬೃಹ್ಮಣರೂಪದಲ್ಲಿ ರಚಿಸಿರುವ ಆದಿಕಾವ್ಯದ ಉಪದೇಶಕ್ಕೆ ಅರ್ಹರೆಂದು ಭಾವಿಸಿ, ಸ್ವಾಮಿಯಾದ ವಾಲ್ಮೀಕಿ ಭಗವಾನರವರು ಅವರನ್ನು ಅಂಗೀಕರಿಸಿ ತಮ್ಮ ಕಾವ್ಯವನ್ನುಪದೇಶಿಸಿದರು, ಅದೆಂಥಾದ್ದೆಂದರೆ, ರಾಮಾಯಣಂ - ಮನಸ್ಸು ರಮಿಸುವ ಹಾಗೆ ಮಾಡುವ ಶ್ರೀರಾಮನ ಚರಿತ್ರವು, ಅಥವಾ ಸರ್ವರೂ ಈ ಕಾವ್ಯದ ಅರ್ಥಗ್ರಹಣ ಮಾಡಿ ಆನಂದಿಸುವಂತಹ ಚರಿತ್ರವು, ಮತ್ತು ಸಂಪೂರ್ಣವಾಗಿಯೂ, ಸೀತಾಸ್ವಯಂವರ ಮೊದಲುಗೊಂಡು ರಾವಣಸಂಹಾರ, ಅಯೋಧ್ಯೆಯಲ್ಲಿ ಪಟ್ಟಾಭಿಷೇಕದವರೆಗೂ ತದನಂತರವೂ ಸಹ ಸೀತಾಚರಿತ್ರವೇ ಆದುದರಿಂದ ಮಹತ್ತಾದ ಕಾವ್ಯವೆಂದೆನಿಸಿದುದು, ಇಂತಹ ವೇದೋಪಬೃಹ್ಮಣವಾಗಿ ವೇದಾರ್ಥಗಳನ್ನು ವ್ಯಕ್ತಪಡಿಸುವದರಿಂದ ನಿಬಂಧಿತ್ತಾರ್ ಎಂಬ ಪ್ರಯೋಗವು

(೫) "ಸಂಸಾರಾರ್ಣವ ತಾರಿಣೀಂ" ಸಂಸಾರವೆಂಬ ಸಮುದ್ರವನ್ನು ದಾಟಿಸುವವಳಾದ ಲಕ್ಷ್ಮಿಯನ್ನು ಎನ್ರುವ್ - ಎಂಬದಾಗಿ ಹಿರಣ್ಯಗರ್ಭಕಾಶ್ಯಪ ಮೊದಲಾದವರೂ ಶೊನ್ನಾರ್ಗಳ್ - ಹೇಳಿರುತ್ತಾರೆ, ಪ್ರಯೋಗಿಸಿರುತ್ತಾರೆ, ಹಿರಣ್ಯಗರ್ಭಾದಿ ಸಂಹಿತೆಗಳಲ್ಲಿ ಹೇಳಲ್ಪಟ್ಟದೆ ಎಂಬರ್ಥವು "ಸರ್ವಕಾಮಪ್ರದಾಂ ರಮ್ಯಾಂ ಸಂಸಾರಾರ್ಣವ ತಾರಿಣೀಂ । ಕ್ಷಿಪ್ರಪ್ರಸಾದಿನೀಂ ದೇವೀಂ ಶರಣ್ಯಾಮನುಚಿಂತಯೇತ್" ಎಂಬುದು ಪೂರಾ ಶ್ಲೋಕವು. ಇದರರ್ಥವು ವ್ಯಕ್ತವು ಸರ್ವಕಾಮಪ್ರದಾಂ ಎಂದೂ ಸಂಸಾರಾರ್ಣವತಾರಿಣೀಂ ಎಂದೂ, ಸಾಕ್ಷಾತ್ತಾಗಿ ಉಪಾಯತ್ವವನ್ನೇ ಹೇಳಿ, ಪುರುಷಕಾರತ್ವ ಮಾತ್ರವೆಂದು ಹೇಳದೇ ಇರುವದರಿಂದ ಉಪಾಯತ್ವದಲ್ಲಿ ಅನ್ವಯವುಂಟೆಂಬುವದು ಸಿದ್ಧವು. ಕಾಶ್ಯಪರು ಏನು ಹೇಳುತ್ತಾರೆಂದರೆ —"ಬಹ್ಮಾದ್ಯಾಶ್ಚ ಸುರಾ ಸ್ಸರ್ವೇ ಮುನಯಶ್ಚ ತಪೋಧನಾಃ । ಖಿಧಂಶೇ ತ್ವತ್ಪದಚ್ಛಾಯಾ ಮಾಶ್ರಿತ್ಯ ಕಮಲೇಶ್ವರಿ ।" ಚತುರ್ಮುಖ ಬ್ರಹ್ಮರುದ್ರೇಂದ್ರರೇ ಮೊದಲಾದ ಸಮಸ್ತ ದೇವತೆಗಳೂ ಮುನಿ

---

(೫) ಹಿರಣ್ಯಗರ್ಭ ಸಂಹಿತೆ.

(೧) "ವಾಚಃ ಪರಂ ಪ್ರಾರ್ಥಯಿತಾ ಪ್ರಪದ್ಯೇನ್ನಿಯತಶ್ಶ್ರಿಯಮ್" ಎನ್ನು ಶ್ರೀ ಶೌನಕ ಭಗವಾನ್ ವಿಧಿತ್ತಾನ್. (೨) ಆತ್ಮವಿದ್ಯಾ ಚದೇವಿತ್ವಂ

---

ಗಳೂ ತಪೋಧನರೂ ಎಲ್ಲರೂ, ಓ ಲಕ್ಷ್ಮಿಯೇ, ನಿನ್ನ ಪಾದಕಮಲಗಳ ನೆರಳಿನಲ್ಲಿ ಸರ್ವ ಶ್ರೇಯಸ್ಸನ್ನೂ ಹೊಂದಿರುತ್ತಾರೆಂದು ಹೇಳಲ್ಪಟ್ಟಿರುತ್ತದೆ.

(೧) **ವಾಚಃಪರಂ** – ವಾಚಾಮಗೋಚರ ಮಹಿಮೆಯುಳ್ಳ ನಾರಾಯಣ ನನ್ನು, **ಪ್ರಾರ್ಥಯಿತಾ** – ಹೊಂದಬೇಕೆಂದು ಅಪೇಕ್ಷಿಸುವ ಪುರುಷನು, **ಶ್ರಿಯಂ** – ಶ್ರೀ ಮಹಾಲಕ್ಷ್ಮಿಯನ್ನು, **ನಿಯತಃ** – ನಿಯಮವಿಶಿಷ್ಟನಾಗಿ, ಅಥವಾ ತಪ್ಪದಿರುವವನಾಗಿ ನಿಯಮೇನ, **ಪ್ರಪದ್ಯೇತ್** – ಶರಣು ಹೊಂದತಕ್ಕದ್ದು. "ಮುಮುಕ್ಷುರ್ವೈ ಶರಣಮಹಂ ಪ್ರಪದ್ಯೇ" ಎಂಬುದು ಹೇಗೆ ವಿಧಿವಾಕ್ಯವೋ, ಹಾಗೆಯೇ ಇಲ್ಲಿಯೂ **ಪ್ರಪದ್ಯೇತ್** ಎಂಬುದು ವಿಧಿವಾಕ್ಯವಾದುದರಿಂದ ಮುಂದೆ, **ಎನ್ನು ಶ್ರೀ ಶೌನಕ ಭಗವಾನ್ ವಿಧಿತ್ತಾನ್** – ಎಂದು ಪೂಜ್ಯರಾದ ಶ್ರೀ ಶೌನಕ ಮಹರ್ಷಿಯು ತಮ್ಮ ಸಂಹಿತೆಯಲ್ಲಿ ವಿಧಿಸಿರುತ್ತಾರೆಂದು ಹೇಳಿರುತ್ತಾರೆ. ಇಲ್ಲಿ ಕೈವಲ್ಯಾರ್ಥಿಯಾದ ಜಿಜ್ಞಾಸುವು ವಾಚಃ ಪರಂ ಪ್ರಾರ್ಥಯಿತಾ ಎಂಬುವರಿಂದ ಹೇಳಲ್ಪಡಲಿಲ್ಲವು, ಸಾಕ್ಷಾತ್ ಮೋಕ್ಷಾರ್ಥಿಯೇ ಹೇಳಲ್ಪಟ್ಟಿರುವದರಿಂದ, ಲಕ್ಷ್ಮಿಗೆ ಉಪಾಯತ್ವವೂ ಮೋಕ್ಷಪ್ರದತ್ವವೂ ಉಂಟು.

(೨) ಮುಂದೆ ಲಕ್ಷ್ಮಿಯು ಹೇಗೆ ಸಕಲ ಐಹಿಕಾಮುಷ್ಮಿಕ ಸುಖಗಳಿಗೆ ಕಾರಣಭೂತಳಾಗಿ, ಸಕಲ ವಿದ್ಯಾಮಯಳಾಗಿ, ಉಪಾಯಭೂತಳಾಗಿ, ಮೋಕ್ಷ ಪರ್ಯಂತವಾದ ಸಕಲಾಭೀಷ್ಟಗಳನ್ನು ಕೊಡುವವಳೆಂಬುದಕ್ಕೆ ವರಪ್ರಸಾದದಿಂದ ವಿಶೇಷ ಜ್ಞಾನನಿಧಿಗಳಾದ ಶ್ರೀ ಪರಾಶರ ಬ್ರಹ್ಮರ್ಷಿಯ ವಾಕ್ಯವನ್ನುದಾಹರಿಸು ತ್ತಾರೆ:— "ಯಜ್ಞವಿದ್ಯಾ ಮಹಾವಿದ್ಯಾ ಗುಹ್ಯವಿದ್ಯಾ ಚ ಶೋಭನೇ" ಎಂಬುದು ಪೂರ್ವಾರ್ಧವು. ಯಜ್ಞವಿದ್ಯಾ ಎಂದರೆ ಧರ್ಮವಿಚಾರಮಾಂಸಾ ವಿದ್ಯೆ ಯಾಯಿತು, ಮಹಾವಿದ್ಯಾ ಎಂಬುದಕ್ಕೆ ಶ್ರೀ ವಿಷ್ಣುಚಿತ್ತೀಯರು ಇಂದ್ರಜಾಲಾದಿ ಕುಹಕವಿದ್ಯೆ ಎಂದು ಅರ್ಥ ಬರೆದಿರುತ್ತಾರೆ, ಶ್ರೀ ಧರೀಯರು ವಿಶ್ವರೂಪಾದ್ಯುಪಾ ಸನಾ ಎಂದು ಬರೆದಿರುತ್ತಾರೆ. ಯದ್ಯಪಿ ಇಂದ್ರಜಾಲಾದಿ ವಿದ್ಯೆಯೂ ಲಕ್ಷ್ಮಿಯ ವಿಭೂತಿಯಾದರೂ ಸ್ತೋತ್ರ ಮಾಡುವ ಸಂದರ್ಭದಲ್ಲಿ ಕೆಟ್ಟದ್ದನ್ನು ಹೇಳುವುದು ಸರಿಯಲ್ಲವು, ಸರ್ವಗತತ್ವವನ್ನು ಹೇಳುವದಕ್ಕಾಗಿ ಅಸಹ್ಯಕರವಾದ ಸ್ಥಳದಲ್ಲಿರು ವಿಕೆಯನ್ನು ಹೇಳಬಹುದೋ? ಹಾಗೆಯೇ ಇಲ್ಲಿಯೂ ಎಂದು ತಿಳಿಯುವುದು.

---

(೧) ಶ್ರೀ ಶೌನಕ ಸಂಹಿತೆ. (೨) ವಿ.ಪು. ೧.೯.೧೨೦

**ವಿಮುಕ್ತಿ ಫಲದಾಯಿನೀ" ಎನ್ನು ಪುಲಸ್ತ್ಯ ವಸಿಷ್ಠವರ ಪ್ರಸಾದ ಲಬ್ಧ ಪರದೇವತಾ ಪಾರಮಾರ್ಥ್ಯಜ್ಞಾನಮುದ್ಯೆಯು ಶ್ರೀ ಪರಾಶರಬ್ರಹ್ಮರ್ಷಿ**

---

ವಿಶ್ವರೂಪೋಪಾಸನವೂ ಆತ್ಮವಿದ್ಯೆಯಲ್ಲೇ ಬರುವದರಿಂದ ಪೌನರುಕ್ತಿಯಾಗುತ್ತದೆ. ಆದುದರಿಂದ ಮಹಾವಿದ್ಯೆಯು ಗೀತೆಯಲ್ಲಿರುವ ಜಿಜ್ಞಾಸುವಿನ ವಿದ್ಯೆಯು, ಆತ್ಮಾವಲೋಕನಕ್ಕೆ ಸಾಧಕವಾದ ವಿದ್ಯೆಯು, ಪ್ರಕೃತಿ ವಿಯುಕ್ತ ಆತ್ಮೋಪಾಸನೆಯು. ಹೀಗೆ ಅರ್ಥ ಮಾಡುವದರಿಂದ ಗೀತೆಯಲ್ಲಿ ಹೇಳಿರುವ ನಾಲ್ಕು ವಿಧ ಸುಕೃತಿಗಳ ವಿದ್ಯೆಗೂ ಅಭಿಮಾನ ದೇವತೆಯು ಲಕ್ಷ್ಮೀ ಎಂದಾಗುತ್ತದೆ. ಆರ್ತಾರ್ಥಿಗೆ ಬೇಕಾದುದು ಯಜ್ಞವಿದ್ಯೆಯು, ಜಿಜ್ಞಾಸುವಿಗೆ ಬೇಕಾದುದು ಮಹಾವಿದ್ಯೆಯು ಆರ್ತನಿಗೆ ಗುಹ್ಯವಿದ್ಯೆಯು ಎಂದರೆ ಅಷ್ಟಾಕ್ಷರ, ಷಡಕ್ಷರ, ದ್ವಾದಶಾಕ್ಷರ ಮಂತ್ರ ವಿದ್ಯೆಯು, ಮೋಕ್ಷಾರ್ಥಿಗೆ ಆತ್ಮವಿದ್ಯೆಯು ಎಂದರೆ ಪರಮಾತ್ಮನನ್ನು ಸಾಕ್ಷಾತ್ಕರಿಸುವ ಬ್ರಹ್ಮವಿದ್ಯೆಯು, ಇವುಗಳಿಗೆಲ್ಲಾ ಅಭಿಮಾನದೇವತೆಯು, ಇಂತಹ ವಿದ್ಯೆಗಳೆಲ್ಲಾ ಆಕೆಯ ವಿಭೂತಿಯಾದುದರಿಂದ, **ವಿಮುಕ್ತಿ ಫಲದಾಯಿನೀ** - ವಿಶೇಷವಾದ ಮುಕ್ತಿಫಲವನ್ನೂ ಕೊಡುವವಳು ಮಹಾಲಕ್ಷ್ಮಿಯು ಎಂಬ ಭಾವವು; ಯಾವಾಗ ಮುಕ್ತಿಫಲವನ್ನೇ ಕೊಡಲು ಸಮರ್ಥಳೋ, ಐಶ್ವರ್ಯ ಕೈವಲ್ಯಗಳನ್ನು ಕೊಡುವ ಶಕ್ತಿಯನ್ನೂ ಹೊಂದಿರುವಳೆಂಬುದು ಕೈಮುತಿಕನ್ಯಾಯ ಸಿದ್ಧವು. ಇದು "ಐಶ್ವರ್ಯಮಕ್ಷರಗತಿಂ ಪರಮಂ ಪದಂವಾ" ಎಂಬ ಶ್ರೀ ಗುಣರತ್ನಕೋಶ ಶ್ಲೋಕದಲ್ಲಿ ಉಪಪಾದಿತವು ಆದುದರಿಂದ **ವಿಮುಕ್ತಿ ಫಲದಾಯಿನೀ** ಎಂಬುದು ಇತರ ಐಶ್ವರ್ಯಕೈವಲ್ಯಾದಿ ಪುರುಷಾರ್ಥಗಳಿಗೂ ಉಪಲಕ್ಷಣವು ಆದರೆ ಕೆಲವರು ಲಕ್ಷ್ಮಿಗೆ ಮೋಕ್ಷಪ್ರದತ್ವವನ್ನಂಗೀಕರಿಸಲಿಷ್ಟವಿಲ್ಲದೆ ಆತ್ಮವಿದ್ಯೆಯ ವೈಲಕ್ಷಣ್ಯವನ್ನು ಹೇಳುವದಕ್ಕಾಗಿ ಅದಕ್ಕೆ ವಿಶೇಷಣವಾಗಿ ವಿಮುಕ್ತಿಫಲದಾಯಿನೀ ಎಂಬುದನ್ನು ಅನ್ವಯಿಸುತ್ತಾರೆ ಹಾಗೆ ಹೇಳಿದರೂ ಯಾವಾಗ ಲಕ್ಷ್ಮಿಗೆ ಆತ್ಮವಿದ್ಯಾದಿಗಳು ವಿಭೂತಿಗಳಾದವೋ, ಯಾವಾಗ ಆತ್ಮವಿದ್ಯೆಯನ್ನು ಕರುಣಿಸಿದಳೋ, ತತ್ಫಲಕ್ಕೂ ಆಕೆಯೇ ಕಾರಣಭೂತಳಾದಳೆಂದು ಅಂಗೀಕರಿಸಲೇಬೇಕೆಂದು ಮುಂದಿನ ವಾಕ್ಯದಿಂದ ತಿಳಿಸುತ್ತಾರೆ; **ಎನ್ನು**–ಎಂಬದಾಗಿ, **ಪುಲಸ್ತ್ಯ ವಸಿಷ್ಠವರಪ್ರಸಾದ ಲಬ್ಧ** - ಪುಲಸ್ತ್ಯರು ಚತುರ್ಮುಖ ಬ್ರಹ್ಮನ ಪುತ್ರರು, ವಸಿಷ್ಠರು ಶ್ರೀ ಪರಾಶರರ ಪಿತಾಮಹರು, ಇವರಿಬ್ಬರ, **ಪ್ರಸಾದ ಲಬ್ಧ** - ಕೃಪೆಯಿಂದ ಹೊಂದಿದ, **ಪರದೇವತಾ ಪಾರಮಾರ್ಥ್ಯ ಜ್ಞಾನಮುದ್ಯೆಯು** - ಪರತತ್ವದ ಯಾಥಾತ್ಮ್ಯರೂಪ ಜ್ಞಾನವನ್ನು ಹೊಂದಿದ, **ಶ್ರೀ ಪರಾಶರ ಬ್ರಹ್ಮರ್ಷಿಯು,**

**ಅರುಳಿಚ್ಚೆಯ್‌ದಾನ್. "ವಿಮುಕ್ತಿ ಫಲದಾಯಿನೀ" ಎಙ್ಗಿರವಿದು ಆತ್ಮವಿದ್ಯಾ ವಿಶೇಷಣ ಮಾನಾಲುಮ್, ತತ್ಸಾಮಾನಾಧಿಕರಣ್ಯತ್ತಾಲ್ ಅದು ಇವಳುಡೈಯ ವಿಭೂತಿಯಾಯಿತ್ತು.**

**ಶ್ರಿಯಃಪತಿ ತಾನುಮ್, (೮) "ಯಾಮಾಲಂಬ್ಯ ಸುಖೇನೇಮಂ ದುಸ್ತರಂ ತ್ರಿಗುಣೋದಧಿಮ್ । ನಿಸ್ತರಂತ್ಯ ಚಿರೇಣೈವ ವ್ಯಕ್ತಧ್ಯಾನ**

---

**ಅರುಳಿಚ್ಚೆಯ್‌ದಾರ್** - ಅನುಗ್ರಹಿಸಿ ಹೇಳಿದರು. ಪುಲಸ್ತ್ಯ ವಸಿಷ್ಠರಿಬ್ಬರೂ ಇವರಿಗೆ ವರವನ್ನು ಅನುಗ್ರಹಿಸಿದ ಪೂರ್ವವೃತ್ತಾಂತಕ್ಕೆ ಹಿಂದೆ ೭೪ನೆಯ ಪುಟವನ್ನು ಪರಾಂಬರಿಸಿ, **ವಿಮುಕ್ತಿ ಫಲದಾಯಿನೀ. ಎಙ್ಗಿರವಿದು**-ಎಂಬುವ ಈ ಪದವು, ಆತ್ಮವಿದ್ಯೆಯ, **ವಿಶೇಷಣ ಮಾನಾಲುಮ್** – ವಿಶೇಷಣವೆಂದು ಅಂಗೀಕರಿಸಿದರೂ, **ತತ್ಸಾಮಾನಾಧಿಕರಣ್ಯತ್ತಾಲೇ** - ಈ ಎಲ್ಲಾ ವಿದ್ಯೆಗಳೂ ಲಕ್ಷ್ಮಿಗೆ ಸಾಮಾನಾಧಿಕರಣ್ಯಭಾವದಿಂದ ಹೇಳಲ್ಪಟ್ಟಿರುವವರಿಂದ, **ಅದು** - ಆ ವಿದ್ಯೆಯೂ, **ಇವಳುಡೈಯ** - ಈ ಲಕ್ಷ್ಮಿಯ, **ವಿಭೂತಿಯಾಯಿತ್ತು** – ನಿಯಾಮ್ಯವರ್ಗಕ್ಕೆ ಸೇರಿದುದಾಯಿತು ಈ ವಿದ್ಯೆಗಳೆಲ್ಲಾ ಆಕೆಗೆ ಶೇಷಭೂತವಾಗಿ ಆಕೆಗೆ ಅಧೀನವಾದವು ಈ ವಿದ್ಯೆಗಳೆಲ್ಲಾ ಉಂಟಾಗಬೇಕಾದರೆ ಲಕ್ಷ್ಮಿಯ ಅನುಗ್ರಹವಿಲ್ಲದೇ ಇಲ್ಲವು. ಯಾವಾಗ ವಿದ್ಯಾನುಗ್ರಹ ಉಂಟಾಯಿತೋ, ತತ್ತ್ಫಲವೂ ಉಂಟಾಗುತ್ತದೆಂದು ಹೇಳಲು ಅಭ್ಯಂತರವೇನೂ ಇಲ್ಲವು. ಯಾವಾಗ ಕಾರಣವು ಇವಳ ವಶವೋ, ಕಾರ್ಯವೂ ಅವಳ ವಶವೇ ಎಂಬ ತಾತ್ಪರ್ಯವು. ಆದರೆ ವಿಮುಕ್ತಿ ಫಲದಾಯಿನೀ ಎಂಬ ದಾತೃತ್ವವನ್ನು ಚೇತನಳಾದ ಲಕ್ಷ್ಮಿಯಲ್ಲಿ ಅನ್ವಯಿಸುವದು ಸ್ವಾರಸ್ಯವೇ ವಿನಾ, ಆತ್ಮವಿದ್ಯೆಗೆ ಸಂಬಂಧಿಸುವ ಹಾಗೆ ಅರ್ಥ ಹೇಳುವದು ಅಷ್ಟು ಸ್ವಾರಸ್ಯವಲ್ಲವು

ಮುಂದೆ ಶ್ರಿಯಃಪತಿಯ ವಾಕ್ಯವೇ ಪ್ರಮಾಣವಾಗಿ ಶ್ರೀ ಸಾತ್ವತದಲ್ಲಿ ಲಕ್ಷ್ಮಿಗೆ ಉಪಾಯತ್ವವನ್ನು ಸಮರ್ಥಿಸುತ್ತದೆ ಎಂದು ಹೇಳುತ್ತಾರೆ. **ಶ್ರಿಯಃಪತಿ ತಾನುಮ್** – ಶ್ರಿಯಃಪತಿಯೇ ಸಾಕ್ಷಾತ್ತಾಗಿ, **"ಯಾಂ** - ಯಾವ ಪ್ರಸಿದ್ಧಳಾದ ಲಕ್ಷ್ಮಿಯನ್ನು, **ಆಲಂಬ್ಯ** - ಅವಲಂಬಿಸಿ, ಎಂದರೆ ಆಕೆಯ ಸನ್ನಿಧಿಯಲ್ಲಿ ಶರಣಾಗತಿಯನ್ನನುಷ್ಠಿಸಿ, **ವ್ಯಕ್ತಧ್ಯಾನ ಪರಾಯಣಾಃ** - ವ್ಯಕ್ತವಾದ ಸರ್ವೇಶ್ವರನ ದಿವ್ಯಮಂಗಳ ವಿಗ್ರಹದ ಧ್ಯಾನದಲ್ಲಿ ನಿರತರಾದವರು, **ಸುಖೇನ** - ತುಂಬಾ ಸುಲಭವಾಗಿ, ಏನೊಂದೂ ಕಷ್ಟವಿಲ್ಲದೆ, **ಇಮಂ ದುಸ್ತರಂ** - ಈ ದಾಟಲಸಾಧ್ಯ

---

(೮) **ಶ್ರೀ ಸಾತ್ವತ ಸಂಹಿತೆ ೧೨. ೮೪.**

**ಪರಾಯಣಾಃ” ಎನ್ರು ಶ್ರೀ ಸಾತ್ವತತ್ತಿಲೇ ಶ್ರಿಯಃ (ಶ್ರಿಲ) ಪತಿರೂಪ ಧ್ಯಾನತ್ತಿಲೇ ಯರುಳಿಚ್ಚೆಯ್‌ದಾನ. ತತ್ಪರಙ್ಗಳಾನ ಶಾಸ್ತ್ರಙ್ಗಳ್ ನಿರ್ಕ್ಕ, ಇವ್ಮಧ್ಯಸ್ಥಶಾಸ್ತ್ರಙ್ಗಳೆತಿಪ್ರಬಲಙ್ಗಳ್.**

---

ವಾದ, **ತ್ರಿಗುಣೋದಧಿಂ** - ಸತ್ವರಜಸ್ತಮೋಗುಣಗಳಿಂದ ಸೇರಿದ ಪ್ರಕೃತಿ ಎಂಬ ಸಮುದ್ರವನ್ನು ಎಂದರೆ ಸಂಸಾರವನ್ನು, **ಅಚಿರೇಣೈವ** - ಇನ್ನೊಂದು ಸಾಧನವಪೇಕ್ಷೆಯಿಲ್ಲದೆ ಕ್ಷಿಪ್ರವಾಗಿಯೇ, **ನಿಸ್ತರಂತಿ** - ದಾಟುತ್ತಾರೆ.” ಎಂದರೆ ಲಕ್ಷ್ಮಿಯೊಂದಿಗೆ ತನ್ನನ್ನು ಆಶ್ರಯಿಸಿದರೇನೇ ಸುಲಭವಾಗಿ ದಾಟಬಹುದೇ ವಿನಾ, ಅನ್ಯಥಾ ಇಲ್ಲವೆಂದು ಶ್ರೀ ಸಾತ್ವಿತ ಸಂಹಿತೆಯಲ್ಲಿ, **ಶ್ರಿಯಃಪತಿರೂಪ ಧ್ಯಾನತ್ತಿಲೇ**-ಲಕ್ಷ್ಮೀನಾರಾಯಣರಿಬ್ಬರೂ ಸೇರಿ ಏಕತತ್ವವಾದುದರಿಂದ ಅಂತಹ ಶ್ರೀಪತಿಯನ್ನು ಧ್ಯಾನಿಸುವ ಪ್ರಕರಣದಲ್ಲಿ, **ಅರುಳಿಚ್ಚೆಯ್‌ದಾನ್** – ಕೃಪೆಯಾ ಅಪ್ಪಣೆ ಕೊಡಿಸಿರುತ್ತಾನೆ, ಇದಕ್ಕೆ **ಶ್ರಿಯಃಪತಿ ತಾನುಮ್** ಎಂಬುದು ಕರ್ತೃಪದವು. “**ಶ್ರೀಪತಿ**” ಎಂಬ ಸಮಾಸಯುಕ್ತ ಪಾಠದಲ್ಲಿ ಇಬ್ಬರೂ ಸೇರಿ ಪರತತ್ವವೆಂಬ ಭಾವವು ವ್ಯಕ್ತವು.

ಆದರೆ ಲಕ್ಷ್ಮೀತಂತ್ರಾದಿ ಶಾಸ್ತ್ರಗಳು ಲಕ್ಷ್ಮಿಗೆ **ಉಪಾಯತ್ವ ಉಪೇಯತ್ವ** ಜಗತ್ಕಾರಣತ್ವಾದಿಗಳನ್ನೂ ಮತ್ತು ಸರ್ವಾಂತರ್ಯಾಮಿತ್ವ ಇವೇ ಮೊದಲಾದವುಗಳನ್ನೂ ಉಪಪಾದಿಸುತ್ತಿರುವಾಗ ಅಂತಹ ಪ್ರಮಾಣಗಳನ್ನು ಬಿಟ್ಟು, ಶ್ರೀ ವಾಲ್ಮೀಕಿ ಮಹರ್ಷಿ, ಹಿರಣ್ಯಗರ್ಭ, ಕಾಶ್ಯಪ, ಪರಾಶರಾದಿಗಳ ದಿವ್ಯಸೂಕ್ತಿಗಳನ್ನೂ, ಶ್ರೀ ಸಾತ್ವತೋಕ್ತಿಯನ್ನೂ ಏಕೆ ಮುಖ್ಯವಾಗಿ ಉದಾಹರಿಸಿದುದು ? ಎಂದರೆ ಅದಕ್ಕೆ ಕಾರಣ ಹೇಳುತ್ತಾರೆ ಲಕ್ಷ್ಮೀ ಪ್ರಭಾವ ಪ್ರಶಂಸೆಗಾಗಿಯೇ ಏರ್ಪಟ್ಟ ಪ್ರಮಾಣಗಳು ಅತಿಶಯೋಕ್ತಿಯುಕ್ತವೆಂದು ಕೆಲವರು ಅಭಿಪ್ರಾಯಪಡಬಹುದು. ಆದುದರಿಂದ ಅಂತಹ ಪ್ರಮಾಣಗಳನ್ನು ಬಿಟ್ಟು ಇತರ ಜ್ಞಾನನಿಧಿಗಳ ದಿವ್ಯಸೂಕ್ತಿಗಳಲ್ಲಿ ಯಾವುದೊಂದು ಪಕ್ಷಪಾತದ ಆರೋಪಣೆಗೆ ಅವಕಾಶವಿಲ್ಲದ ಪ್ರಯುಕ್ತ, ಅವುಗಳು ಈ ಸಂದರ್ಭದಲ್ಲಿ ಪ್ರಮಾಣಗಳೆಂದು ಉಪದೇಶಿಸುತ್ತಾರೆ. **ತತ್ಪರಙ್ಗಳಾನ** - ಲಕ್ಷ್ಮೀ ಸಂಬಂಧವಾದ, **ಶಾಸ್ತ್ರಙ್ಗಳ್**-ಎಂದರೆ ಲಕ್ಷ್ಮಿಗೆ ಮಾಹಾತ್ಮ್ಯಯನ್ನುಪಪಾದಿಸುವ ಶಾಸ್ತ್ರಗಳು, ಅವುಗಳು ಯಾವುವೆಂದರೆ ಲಕ್ಷ್ಮೀತಂತ್ರ, ಲಕ್ಷ್ಮಿಯ ಅಷ್ಟೋತ್ತರ ಸಹಸ್ರನಾಮಗಳು, ಲಕ್ಷ್ಮಿಯ ಪ್ರಭಾವವನ್ನು ಹೇಳುವ ಪುರಾಣಭಾಗಗಳು, **ನಿರ್ಕ್ಕ**- ಇಂತವುಗಳೆಲ್ಲಾ ಇದ್ದರೂ ಎಂದರೆ ಇವುಗಳೂ ಕೂಡ ನಮಗೆ ಪ್ರಮಾಣವಾದರೂ, **ಈ ಮಧ್ಯಸ್ಥ ಶಾಸ್ತ್ರಙ್ಗಳ್**-ಈ ಲಕ್ಷ್ಮಿಯ ಮಾಹಾತ್ಮ್ಯಯನ್ನೇ

## ಶ್ರಿಯಃ ಉಪಾಯತ್ವೇ ಆಚಾರ್ಯದಿವ್ಯ ಸೂಕ್ತಯಃ

ಆಳವನ್ದಾರುವ್, (೧) "ಜಗತ್ಸಮಸ್ತಂ ಯದಪಾಙ್ಗಸಂಶ್ರಯಂ" ಎನ್ರುಮ್ (೨) ಶ್ರೀಯೋನಪ್ಯರವಿಂದ ಲೋಚನ ಮನಃಕಾಂತಾ ಪ್ರಸಾ

---

ಉಪಪಾದಿಸಬೇಕೆಂಬ ಸಂಕಲ್ಪವೇನೂ ಇಲ್ಲದೆ, ಮಧ್ಯಸ್ಥವಾಗಿ ಲಕ್ಷ್ಮಿಯ ಪ್ರಕರಣ ಬಂದಾಗ ಮಾತ್ರ ಯಾಥಾರ್ಥ್ಯವನ್ನು ಬೋಧಿಸುವ ಶಾಸ್ತ್ರಗಳಾದ ಶ್ರೀಪಾದ್ಮಪಾರಾಯಣ, ಹಿರಣ್ಯಗರ್ಭಸಂಹಿತೆ, ಶೌನಕಸಂಹಿತೆ, ವಿಷ್ಣುಪುರಾಣ, ಸಾತ್ವತ ಸಂಹಿತೆ ಮೊದಲಾದವುಗಳು, ಅತಿ ಪ್ರಬಲಙ್ಗಳ್ - ಪ್ರತಿಕಕ್ಷಿಗಳು ಪಕ್ಷಪಾತವನ್ನು ಆರೋಪಿಸಲು ಸಾಧ್ಯವಲ್ಲದುದರಿಂದ ತುಂಬಾ ಪ್ರಬಲವಾದ ಪ್ರಮಾಣಗಳು ತತ್ಪರ ಶಾಸ್ತ್ರಗಳೂ ಲಕ್ಷ್ಮಿಗೆ ಉಪಾಯತ್ವವನ್ನು ಬೋಧಿಸುತ್ತವೆ. "ಲಕ್ಷ್ಮ್ಯಾ ಸಹ ಹೃಷೀಕೇಶೋ ದೇವ್ಯಾ ಕಾರುಣ್ಯರೂಪಯಾ । ರಕ್ಷಕಸ್ಸರ್ವಸಿದ್ಧಾನ್ತೇ ವೇದಾನ್ತೇಷು ಚ ಗೀಯತೇ ॥" ಎಂಬುದು ಉಪಾಯತ್ವವನ್ನು ಬೋಧಿಸುವ ಲಕ್ಷ್ಮೀತಂತ್ರ ಪ್ರಮಾಣವು ಅಷ್ಟೋತ್ತರ ಸಹಸ್ರನಾಮಾದಿಗಳಲ್ಲಿ ಉಪಾಯತ್ವವನ್ನು ಬೋಧಿಸುವ ಅನೇಕ ನಾಮಗಳಿವೆ ಹಾಗೆಯೇ ಭಗವಚ್ಛಾಸ್ತ್ರದಲ್ಲಿ ಲಕ್ಷ್ಮೀ ಮಾಹಾತ್ಮ್ಯಯನ್ನು ಹೇಳುವ ಪ್ರಕರಣದಲ್ಲೂ ಪ್ರಮಾಣಗಳುಂಟು (೫೫೫ನೆಯ ಪುಟವನ್ನೂ ೨೧೨ನೆಯ ಪುಟವನ್ನೂ ನೋಡಿ)

ಆಯಾಯ ವಸ್ತುಗಳಿಗೆ ಅನುರೂಪವಾದ ಪ್ರಯೋಜನವನ್ನು "ಪ್ರಮಾಣ ಸಂಪ್ರದಾಯಙ್ಗಳಾಲೇ ಕಣ್ಡುಕೊಳ್ವದು" ಎಂದು ಹಿಂದೆ ಹೇಳಿ, ಪ್ರಮಾಣಗಳನ್ನು ಉದಾಹರಿಸಿ, ಇನ್ನು ಮುಂದೆ ಸಂಪ್ರದಾಯಕ್ಕೆ ಆಚಾರ್ಯರುಗಳ ದಿವ್ಯ ಸೂಕ್ತಿಗಳನ್ನು ಉದಾಹರಿಸುತ್ತಾರೆ

### ಲಕ್ಷ್ಮಿಗೆ ಉಪಾಯತ್ವವುಂಟೆಂಬುದಕ್ಕೆ ಆಚಾರ್ಯರುಗಳ ದಿವ್ಯಸೂಕ್ತಿಗಳು.

ಆಳವಂದಾರುವ್ - ಶ್ರೀ ಯಾಮುನೇಯರೂ, "ಜಗತ್ಸಮಸ್ತಂ - ಸಮಸ್ತ ಜಗತ್ತೂ, ಯದಪಾಙ್ಗಸಂಶ್ರಯಂ - ಯಾವ ಲಕ್ಷ್ಮಿಯ ಕೃಪಾ ಕಟಾಕ್ಷವನ್ನು ಆಶ್ರಯಿಸಿರುತ್ತದೋ," ಎನ್ರುವ್ - ಎಂದು, ಅರುಳಿಚ್ಚೆಯ್ದಾರ್ - ಅನುಗ್ರಹಿಸಿರುತ್ತಾರೆಂದು ಮುಂದೆ ಇದೆ ಈ ಶ್ಲೋಕವು ಯಾವುದೆಂದರೆ :—

---

(೧) ಸ್ತೋತ್ರರತ್ನ ೩೭. (೨) ಚತುಶ್ಲೋಕಿ ೩.

**ಚಕರ್ಥ ಯಸ್ಯಾ ಭವನಂ ಭುಜಾಂತರಂ**
**ತವಪ್ರಿಯಂ ಧಾಮ ಯದೀಯ ಜನ್ಮಭೂಃ ।**
**ಜಗತ್ಸಮಸ್ತಂ ಯದಪಾಙ್ಗಸಂಶ್ರಯಂ**
**ಯದರ್ಥಮಂಭೋಧಿ ರಮಂಥ್ಯ ಬಂಧಿಚ ॥**

ಇದರರ್ಥವು—**ತವ** - ನಿನ್ನ ಎಂದರೆ ನಾರಾಯಣನ, **ಭುಜಾಂತರಂ**-ಭುಜಗಳ ಮಧ್ಯಪ್ರದೇಶವಾದ ವಕ್ಷಸ್ಥಳವನ್ನು, **ಯಸ್ಯಾಃ**-ಯಾವ ಮಹಾಲಕ್ಷ್ಮಿಗೆ, **ಭವನಂ**-ವಾಸಸ್ಥಾನವಾಗಿ, **ಚಕರ್ಥ**-ಮಾಡಿವೆಯೋ, ತವ ಎಂಬುದು ಮಧ್ಯದಲ್ಲಿರುವುದರಿಂದ ಕಾಕಾಕ್ಷಿನ್ಯಾಯಪ್ರಕಾರ ಎರಡುಕಡೆಗೂ ಅನ್ವಯವು,ತವ-ನಿನ್ನ, **ಪ್ರಿಯಂ ಧಾಮ**-ಪ್ರಿಯವಾದ ಸ್ಥಾನವಾದ ಕ್ಷೀರಸಮುದ್ರವು, **ಯದೀಯ ಜನ್ಮಭೂಃ**-ಯಾವ ಲಕ್ಷ್ಮಿಗೆ ಜನ್ಮಸ್ಥಾನವೋ, **ಸಮಸ್ತಂ ಜಗತ್**-ಸಮಸ್ತ ಲೋಕವೂ, **ಯದಪಾಂಗ ಸಂಶ್ರಯಂ**-ಯಾವ ಉದಾರಳಾದ ಲಕ್ಷ್ಮಿಯ ಕಟಾಕ್ಷವನ್ನೇ ಆಶ್ರಯವಾಗಿ ಉಳ್ಳದೋ, **ಯದರ್ಥಂ**-ಯಾವ ಲಕ್ಷ್ಮಿಗೋಸ್ಕರವಾಗಿ, **ಅಂಭೋಧಿಃ**-ಕ್ಷೀರಸಮುದ್ರವು, **ಅಮಂಥಿ** - ಮಥನ ಮಾಡಲ್ಪಟ್ಟಿತೋ, ಸಮುದ್ರ ಮಥನ ಕಾಲದಲ್ಲಿ ಹುಟ್ಟಿದವಳು, **ಅಬಂಧಿಚ** - ಮತ್ತು ಸಮುದ್ರದಲ್ಲಿ ಸೇತುವೆಯು ಕಟ್ಟಲ್ಪಟ್ಟಿತೋ, ರಾಮಾವತಾರದಲ್ಲಿ ಸೇತುಬಂಧನವು ಹೇಳಲ್ಪಟ್ಟಿತು, ಅಂತಹ ಲಕ್ಷ್ಮಿಯೊಂದಿಗೆ ಎಂದು, ಇನ್ನೆಯ ಶ್ಲೋಕದಲ್ಲಿ **ತಯಾ ಸಹಾಸೀನಂ** ಎಂಬದಾಗಿ ಮುಂದೆ ಇರುತ್ತದೆ ಇಲ್ಲಿ ಜಗತ್ತೆಲ್ಲಾ ಯಾವ ಲಕ್ಷ್ಮಿಯ ಅಪಾಂಗ ಸಂಶ್ರಯವೆಂದು ಹೇಳಿ, ಸರ್ವ ಚೇತನರ ಅನಿಷ್ಟನಿವೃತ್ತಿ ಇಷ್ಟಪ್ರಾಪ್ತಿಯೂ ಸಹ ಲಕ್ಷ್ಮೀಕಟಾಕ್ಷಾನುಸಾರವೆಂದು ಹೇಳಿರುವದರಿಂದ ಉಪಾಯತ್ವವನ್ನು ಹೇಳಿದಂತಾಯಿತು. ಲಕ್ಷ್ಮೀಕಟಾಕ್ಷವಿಲ್ಲದಿರುವಾಗ ಏನು ದುರವಸ್ಥೆಯುಂಟಾಗುತ್ತದೆಂಬುದಕ್ಕೆ ಇಂದ್ರಸ್ತುತಿಯಲ್ಲಿ "**ತ್ವಯಾದೇವಿ ಪರಿತ್ಯಕ್ತಂ ಸಕಲಂ ಭುವನತ್ರಯಂ । ವಿನಷ್ಟ ಪ್ರಾಯಮಭವತ್ತ್ವ ಯೇದಾನೀಂ ಸಮೇಧಿತಂ ॥**" ಎಂಬದು ಪ್ರಮಾಣವಾಗಿ, ಸರ್ವವೂ ನಷ್ಟಪ್ರಾಯವಾಗುತ್ತದೆಂದು ಹೇಳಲ್ಪಟ್ಟಿರುತ್ತದೆ. ಮುಂದೆ "**ತ್ವಯಾವಲೋಕಿತಾಸ್ಸದ್ಯ ಶೀಲಾದ್ಯೈಸ್ಸಕಲೈರ್ಗುಣೈಃ । ಧನೈಶ್ವರ್ಯೈಶ್ಚ ಯುಜ್ಯನ್ತೇ ಪುರುಷಾ ನಿರ್ಗುಣಾ ಅಪಿ । ಸಶ್ಲಾಘ್ಯಸ್ಸಗುಣೀ ಧನ್ಯ ಸ್ಸಕುಲೀನ ಸ್ಸಬುದ್ಧಿಮಾನ್ ॥**" ನಿನ್ನ ಕಟಾಕ್ಷ ಹೊಂದಿದ್ದರೆ ಓ ಲಕ್ಷ್ಮಿಯೇ, ಸಕಲ ಕಲ್ಯಾಣಗುಣಗಳಿಂದಲೂ ಧನೈಶ್ವರ್ಯಗಳಿಂದಲೂ ಕೂಡಿದವರಾಗುತ್ತಾರೆ, ಅಷ್ಟು ಮಾತ್ರವೇ ಅಲ್ಲವು, ಏನೊಂದೂ ಶ್ಲಾಘ್ಯತೆಯಿಲ್ಲದಿದ್ದರೂ ಅವನೇ ಶ್ಲಾಘ್ಯನೆನಿಸುವನು, ಗುಣಹೀನನು ಗುಣವಂತನಾಗುವನು, ಧನ್ಯನಾಗುವನು, ಅಕುಲೀನನು ಕುಲೀನನಾಗುವನು, ಬುದ್ಧಿಯಿಲ್ಲ

**ದಾದೃತೇ ಸಂಸೃತ್ಯಕ್ಷರ ವೈಷ್ಣವಾಧ್ವಸು ನೃಣಾಂ ಸಂಭಾವ್ಯತೇ ಕರ್ಹಿಚಿತ್" ಎನ್ರುಮ್ ಅರುಳಿಚ್ಚೆಯ್‌ದಾರ್.**

---

ದವನು ಬುದ್ಧಿವರ್ಾ ಎಂದು ಹೇಳಲ್ಪಡುವನು" ಎಂದು ವಿಷ್ಣುಪುರಾಣವಲ್ಲಿ ಹೇಳಲ್ಪಟ್ಟಿರುತ್ತದೆ ಹಾಗೆಯೇ ಕಾಶ್ಯಪ ದಿವ್ಯಸೂಕ್ತಿಯು ಬ್ರಹ್ಮರುದ್ರೇಂದ್ರಾದಿ ಸರ್ವ ದೇವತೆಗಳ ಶ್ರೇಯಸ್ಸಿಗೂ ಲಕ್ಷ್ಮಿಯು ಕಾರಣವೆಂದು ಹೇಳುತ್ತದೆ. (೨೧೧೭ನೆಯ ಪುಟ ನೋಡಿ) ಹೀಗೆ ಉಪಾಯತ್ವ ಉಂಟೆಂಬುದನ್ನು ಈ ಮೇಲಿನ ವಾಕ್ಯದಲ್ಲಿ ಅನ್ವಯ ಮುಖೇನ ಹೇಳಿ, ಆ ಅಭಿಪ್ರಾಯವನ್ನೇ ಮುಂದಿನ ವಾಕ್ಯದಲ್ಲಿ ವ್ಯತಿರೇಕಮುಖೇನ ಶ್ರೀ ಯಾಮುನೇಯರು ತಾವು ಬರೆದಿರುವ ಚತುಶ್ಶ್ಲೋಕಿಯಲ್ಲೂ ಉಪಪಾದಿಸಿರುತ್ತಾರೆಂದು ಹೇಳುತ್ತಾರೆ (೨) "ಅರವಿಂದಲೋಚನ-ಕಮಲಸದೃಶವಾದ ಕಣ್ಣುಳ್ಳ ಸರ್ವೇಶ್ವರನ, ಮನಃ-ಮನಸ್ಸಿಗೆ, ಜ್ಞಾನಕ್ಕೆ, ಕಾಂತಾ - ಅತಿ ಮನೋಹರಳಾದ ಲಕ್ಷ್ಮಿಯ, ಪ್ರಸಾದಾದೃತೇ - ಅನುಗ್ರಹವಿಲ್ಲದೆ, ಸಂಸೃತಿ - ಸಂಸಾರ, ಇದರಿಂದ ಐಹಿಕ ಸ್ವರ್ಗಲೋಕಾದಿ ಭೋಗಗಳು ಹೇಳಲ್ಪಟ್ಟವು, ಅಕ್ಷರ – ಕೈವಲ್ಯ, ವೈಷ್ಣವಾಧ್ವಸು – ಮೋಕ್ಷ, ಇವುಗಳ ಮಾರ್ಗಗಳಲ್ಲಿ ಕರ್ಹಿಚಿತ್ - ಎಂದಿಗೂ, ಯಾವಾಗಲೂ, ಶ್ರೇಯಃ-ಶ್ರೇಯಸ್ಸು, ನಸಂಭಾವ್ಯತೇ - ಉಂಟಾಗುವದಿಲ್ಲವು, ಹಿ - ಇದು ಸಿದ್ಧವು ಎಂದರೆ ಶ್ರುತಿ ಸ್ಮೃತಿ ಪುರಾಣೇತಿಹಾಸಗಳಿಂದ ಸಿದ್ಧವು ಎಂಬ ಭಾವವು." ಇದರಿಂದ ಲಕ್ಷ್ಮಿಗೆ ಐಹಿಕ ಭೋಗಗಳನ್ನೂ, ಸ್ವರ್ಗಾದಿ ಸುಖಗಳನ್ನೂ, ಕೈವಲ್ಯಪ್ರಾಪ್ತಿಯನ್ನೂ ಮೋಕ್ಷಾನುಭವವನ್ನೂ ಹೊಂದಿಸುವ ಶಕ್ತಿಯುಂಟೆಂದು ಹೇಳಿದಂತಾಯಿತು. ಇದರಿಂದ ಲಕ್ಷ್ಮಿಗೆ ಉಪಾಯತ್ವವೂ ಮೋಕ್ಷಪ್ರದತ್ವವೂ ಉಂಟೆಂದು ಹೇಳಲ್ಪಟ್ಟಿತು. ಇದನ್ನೇ ಮನಸ್ಸಿನಲ್ಲಿಟ್ಟು ಶ್ರೀ ಪರಾಶರಭಟ್ಟರು, "ಐಶ್ವರ್ಯಮಕ್ಷರಗತಿಂ ಪರಮಂಪದಂವಾ ಕಸ್ಮೈಚಿದಂಜಲಿಭರಂ ವಹತೇವಿತೀರ್ಯ" ಎಂಬ ಶ್ರೀ ಗುಣರತ್ನಕೋಶ ೩೮ನೆಯ ಶ್ಲೋಕದಲ್ಲಿ ಉಪಪಾದಿಸಿ, "ದೇವಜುಷ್ಟಾಮುದಾರಾಂ" ಎಂಬ ಶ್ರುತ್ಯರ್ಥವನ್ನು ವಿಶದೀಕರಿಸಿರುತ್ತಾರೆ. ಉಪಾಯತ್ವವೂ ಮೋಕ್ಷಪ್ರದತ್ವವೂ ಇಲ್ಲದಿದ್ದರೆ ಆಕೆಯು ಉದಾರಳು ಹೇಗೆ? ಶ್ರುತಿಯೂ ಅತಿಶಯೋಕ್ತಿಯನ್ನು ಅಪೇಕ್ಷಿಸಿದಂತಾಗುತ್ತದೆ

ಈ ವಾಕ್ಯಕ್ಕೆ ಬಹು ವಿಸ್ತರವಾದ ಉಪಪಾದನೆಯನ್ನು ದಾಸನು ಬರೆದಿರುವ ಚತುಶ್ಶ್ಲೋಕಿಯ ಆಚಾರ್ಯಹೃದಯಾನ್ವೇಷಿಣೀ ಎಂಬ ವ್ಯಾಖ್ಯಾನದಲ್ಲಿ ಕಾಣಬಹುದು. ೫೨ ರಿಂದ ೭೦ನೆಯ ಪುಟಗಳವರೆಗೆ ಪರಾಂಬರಿಸಿ. ಆಕೆಗೆ ಮೋಕ್ಷ

ಪ್ರದತ್ವವೂ ಉಂಟೆಂಬುದಕ್ಕೆ ಹಿಂದೆ ಉದಾಹರಿಸಿರುವ ವಿಷ್ಣುಪುರಾಣ, ಹಿರಣ್ಯಗರ್ಭ ಸ್ಮೃತಿ, ಕಾಶ್ಯಪ ಸ್ಮೃತಿ, ಶೌನಕ ಸಂಹಿತಾ ವಾಕ್ಯಗಳಿವೆ, ಆದ್ದರಿಂದ ಮೋಕ್ಷಪ್ರದತ್ವವುಂಟೋ ಉಪಾಯತ್ವವೂ ಉಂಟೆಂದೇ ಭಾವಿಸತಕ್ಕದ್ದು

ಆದರೆ ಸ್ವಾಮಿಯವರು ಪ್ರಮಾಣವಾಗಿ ಉದಾಹರಿಸಿರುವದು ಶ್ರುತಿಯಲ್ಲದೆ ಇತರ ಪ್ರಮಾಣಗಳೇ ಆಗಿವೆ, ಇದರಿಂದ ಶ್ರುತಿಯು ಆಧಾರವಿಲ್ಲವೆಂದು ಭಾವಿಸತಕ್ಕದ್ದಲ್ಲವು. ಈ ಗ್ರಂಥವು ಶ್ರುತ್ಯಧಿಕಾರವಿಲ್ಲದವರಿಗೂ ಉಪಯುಕ್ತವಾಗಿರಲೆಂಬ ಉದಾರ ಮನಸ್ಸಿನಿಂದ ಬರೆದಿರುವದರಿಂದ ಶ್ರುತಿ ಪ್ರಮಾಣಗಳನ್ನು ಉದಾಹರಿಸಲಿಲ್ಲವು ಉಪಾಯತ್ವವನ್ನು ಸಮರ್ಥಿಸುವ ಶ್ರುತಿಪ್ರಮಾಣಗಳ ಯಾವುವೆಂದರೆ:—

೧. "ಆನೀತವಾದಗ್ಂ ಸ್ವಧಯೋತದೇಕಂ" ಈ ಶ್ರುತಿಯ ವಿವರಣೆಗೆ ದಾಸನು ಬರೆದಿರುವ ಶ್ರೀ ಸ್ತುತಿಯ ವ್ಯಾಖ್ಯಾನವಾದ ಆಚಾರ್ಯಹೃದಯಾನ್ವೇಷಿಣಿಯ ೫೭ನೆಯ ಪುಟವನ್ನು ಪರಾಂಬರಿಸಿ

೨ "ಶ್ರಿಯಂ ಲೋಕೇ ದೇವಜುಷ್ಟಾ ಮುದಾರಾಂ" ಉಪಾಯತ್ವ ರಕ್ಷಕತ್ವಗಳಿಲ್ಲದೆ ಹೋದರೆ, ಉದಾರತ್ವವು ಕೂಡ ಸದಿಲ್ಲವು.

೩. "ಸಾನೋ ಲೋಕಮಮೃತಂ ದಧಾತು" ಉಪಾಯತ್ವವಿಲ್ಲದಿದ್ದರೆ ಇಲ್ಲಿ ಹೇಳಿರುವ ಹಾಗೆ ದಿವ್ಯ ವೈಕುಂಠವನ್ನು ಹೇಗೆ ಕೊಡಲು ಶಕ್ತಳು

೪. "ಈಶಾನಾದೇವೀ ಭುವನಸ್ಯಾಧಿಪತ್ನೀ" ಇದರಿಂದ ಸರ್ವನಿಯಾಮಕತ್ವವೂ ಲಕ್ಷ್ಮಿಗೆ ಉಂಟೆಂಬುದು ಹೇಳಲ್ಪಟ್ಟಿತು

೫. "ಶ್ರಿಯಂ ವಸಾನಾ ಅಮೃತತ್ವಮಾಯನ್" ಲಕ್ಷ್ಮಿಯನ್ನು ಆಶ್ರಯಿಸುವದರಿಂದ ಮೋಕ್ಷವುಂಟೆಂಬುವದು ಇದರಿಂದ ವ್ಯಕ್ತವು.

೬. "ಈಶ್ವರೀಗ್ಂ ಸರ್ವಭೂತಾನಾಂ" ಇಲ್ಲಿಯೂ ಲಕ್ಷ್ಮಿಯು ಜಗನ್ನಿಯಾಮಕಳೆಂದು ಹೇಳಲ್ಪಟ್ಟಿತು.

೭. ಶ್ರದ್ಧಯಾದೇವೋ ದೇವತ್ವಮಶ್ನುತೇ" ಲಕ್ಷ್ಮಿಯೊಂದಿಗೇನೇ ಸರ್ವೇಶ್ವರನಿಗೆ ಈ ವಿಭೂತಿಯಲ್ಲಿ ಲೀಲಾರಸಾನುಭವವೆಂದು ಹೇಳಿರುವದರಿಂದ ಉಪಾಯತ್ವ ರಕ್ಷಕಾದಿಗಳಲ್ಲಿಯೂ ಅನ್ವಯ ಉಂಟೆಂಬುದು ಸಿದ್ಧವು.

ಸ್ಮೃತಿ ಪ್ರಮಾಣಗಳು ಕೆಲವು ಮೇಲೆ ಶ್ರೀ ದೇಶಿಕರವರೇ ಉದಾಹರಿಸಿರುತ್ತಾರೆ.—

೮. ಮಂಕಣ ಸಂಹಿತೆಯಲ್ಲಿ

"ಪದ್ಮೇಸ್ಥಿತಾ ಪದ್ಮವರ್ಣಾ ಪದ್ಮನಾಭಪ್ರಿಯಾ ಶುಭಾ ।
ಅನುಗ್ರಹಪರಾಮೃದ್ಧಿ ಮನಘಾಂ ಹರಿವಲ್ಲಭಾಂ ॥ "

೯ ಮತ್ತು ಅದೇ ಸಂಹಿತೆಯಲ್ಲಿ,

"ಸಾಮರ್ಗ್ಯಜುರ್ಮಯೀಂ ದೇವೀಂ ವೇದಗರ್ಭಾಂ ಮನಸ್ವಿನೀಂ"
"ಲೋಕೇಶೇಷು ವಿಭೂತೀನಾಂ ಕಾರಣಂ ಯನ್ನಿರೀಕ್ಷಣಂ ॥"

೧೦. ಯಥಾಹ ಕಾಶ್ಯಪಃ

ಬ್ರಹ್ಮಾದ್ಯಾಶ್ಚ ಸುರಾಸ್ಸರ್ವೇ ಮುನಯಶ್ಚ ತಪೋಧನಾಃ ।
ವಿಧಂತೇ ತ್ವತ್ಪದಚ್ಛಾಯಾ ಮಾಶ್ರಿತ್ಯ ಕಮಲೇಶ್ವರಿ"

ಓ ಲಕ್ಷ್ಮಿಯೇ ಬ್ರಹ್ಮರುದ್ರೇಂದ್ರಾದಿ ಸಮಸ್ತ ದೇವತೆಗಳೂ, ಮುನಿಗಳೂ ತಪೋಧನರೂ ಎಲ್ಲರೂ ನಿನ್ನ ಪಾದಚ್ಛಾಯೆಯನ್ನಾಶ್ರಯಿಸಿ ಶ್ರೇಯಸ್ಸನ್ನು ಹೊಂದಿರುತ್ತಾರೆ.

೧೧. ಬ್ರಾಹ್ಮಪುರಾಣೇ —

"ಪದ್ಮಯೋನಿರಿದಂ ಪ್ರಾಪ್ಯ ಪಠನ್ ಸ್ತೋತ್ರಂ ತತಃ ಶ್ರಿಯಾಃ ।
ದಿವ್ಯಂಚಾಷ್ಟಗುಣೈಶ್ವರ್ಯಂ ತತ್ಪ್ರಸಾದಾಚ್ಚ ಲಬ್ಧವಾನ್ ॥"

ಲಕ್ಷ್ಮೀಕಟಾಕ್ಷದಿಂದ ಚತುರ್ಮುಖ ಬ್ರಹ್ಮನೂ ತನ್ನ ಶ್ರೇಯಸ್ಸನ್ನೆಲ್ಲಾ ಹೊಂದಿದನೆಂದು ಹೇಳಲ್ಪಟ್ಟಿರುತ್ತದೆ. ಹಾಗೆಯೇ ಅದೇ ಪುರಾಣದಲ್ಲಿ,

೧೨. "ಸಕೃದ್ವಿಭಾತಾ ಸರ್ವಾರ್ತಿ ಸಮುದ್ರ ಪರಿಶೋಷಿಣೀ"

೧೩. "ಭವಭಂಗಾಪಹಾರಿಣೀ" ೧೪. ಪರನಿರ್ವಾಣದಾಯಿನೀ"

೧೫. "ಜ್ಯೋತಿಷ್ಕೃತ್ಯಮೃತಾನಹಾ" ಇಂತಹ ನಾಮಗಳಿಂದ ಲಕ್ಷ್ಮಿಯು ಸ್ತುತಿಸಲ್ಪಟ್ಟಿರುತ್ತಾಳೆ. ೧೬ ಶೌನಕಸಂಹಿತೆ ೧೭. ಶ್ರೀ ವಿಷ್ಣುಪುರಾಣ

೧೮ ಶ್ರೀಮದ್ರಾಮಾಯಣ ವಾಕ್ಯಗಳನ್ನು ಮೂಲದಲ್ಲೇ ಉದಾಹರಿಸಿರುತ್ತಾರೆ. ಈ ಮೇಲಿನ ಪ್ರಮಾಣಗಳನ್ನೆಲ್ಲಾ ಶ್ರೀ ದೇಶಿಕರವರೇ ಚತುಶ್ಶ್ಲೋಕಿ ವ್ಯಾಖ್ಯಾನದಲ್ಲಿ ಉದಾಹರಿಸಿರುತ್ತಾರೆ

ಹೀಗೆ ಸರ್ವೇಶ್ವರನ ಇಂಗಿತವನ್ನರಿತ ಸರ್ವಜ್ಞಳಾದುದರಿಂದ, ಅವರ ಮನಸ್ಸನ್ನರಿತು ತಾನೇ ಉಪಾಯಭೂತಳೂ ರಕ್ಷಕಳೂ ಅಹುದು. ಪರಮಾತ್ಮನು ಮೋಕ್ಷವನ್ನು ಕೊಡುವ ಸಂದರ್ಭದಲ್ಲೂ ಈಕೆಗೆ ತಿಳಿಯದೇ ನಡೆಯುವುದಿಲ್ಲವಾದುದರಿಂದ ಘಟಕರೂಪ ಪುರುಷಕಾರತ್ವವೂ ಉಂಟೆಂಬುದೂ ಸರ್ವಸಮ್ಮತವಾದ ವಿಷಯವೇ ಪರಿಪೂರ್ಣಾನುಭವವನ್ನು ಕಡೆಗೆ ದಯಪಾಲಿಸುವದು ಪರಮಾತ್ಮನಿಗೇನೇ ಎಂದಾಗಲೀ ಅಥವಾ ಲಕ್ಷ್ಮೀಯುಕ್ತನಾದ ನಾರಾಯಣನಿಗೇ ಎಂದಾಗಲೀ ಪ್ರಮಾಣಾನುಸಾರ ನಿರ್ಧರಿಸಿಕೊಳ್ಳಬಹುದು ಆದರೆ ಲಕ್ಷ್ಮಿಗೆ ಉಪಾಯತ್ವವನ್ನು ಹೇಳುವುದರಲ್ಲಿ ಈ ಮೇಲಿನ ಪ್ರಮಾಣಗಳಿಂದ ಯಾವುದೊಂದು ವಿರೋಧವೂ ತೋರಬರುವುದಿಲ್ಲವು.

**ಶ್ರೀ ಭಾಷ್ಯಕಾರರುಮ್ ಶ್ರೀ ವೈಕುಂಠ ಗದ್ಯತ್ತಿಲೇ "ಶೇಷಶೇಷಾಶನಾದಿ ಸರ್ವಂ ಪರಿಜನಂ ಭಗವತಸ್ತತ್ತದವಸ್ಥೋಚಿತ ಪರಿಚರ್ಯಾಯಾಮಾಜ್ಞಾಪಯಂತ್ಯಾ" ಎನ್ರು ಭಗವತ್ಕೈಂಕರ್ಯರೂಪ ಪರಮಪುರುಷಾರ್ಥಮ್ ಇವಳ್ ನಿಯೋಗತ್ತಾಲೇ ಪಡಿಯೇ ನಡತ್ತವೇಣುಂ ಎನ್ರುರುಳಿಚ್ಚೆಯ್ದಾರ್.**

---

ಮುಂದೆ ಶ್ರೀ ಭಾಷ್ಯಕಾರವರ ದಿವ್ಯಸೂಕ್ತಿಯನ್ನು ಉದಾಹರಿಸುತ್ತಾರೆ.—

ಶ್ರೀ ಭಾಷ್ಯಕಾರರೂ ಕೂಡ ತಾವು ಬರೆದ ಶ್ರೀ ವೈಕುಂಠಗದ್ಯದಲ್ಲಿ, "**ಶೇಷ**- ಆದಿಶೇಷನು, **ಶೇಷಾಶನಾದಿ** - ವಿಷ್ವಕ್ಸೇನರು, ಇವರೇ ಮೊದಲಾದ, **ಸರ್ವಂ ಪರಿಜನಂ** - ಸಮಸ್ತ ಪರಿವಾರದ ಜನವನ್ನೂ, ಇದರಿಂದ ಮುಕ್ತರೂ ಹೇಳಲ್ಪಟ್ಟರು; ಅಥವಾ ಆದಿಶೇಷರು ವಿಷ್ವಕ್ಸೇನರೇ ಮೊದಲಾದ ಸಮಸ್ತ ಪರಿವಾರವೂ ಎಂದು ಹೇಳಿರುವದರಿಂದ ನಿತ್ಯಸೂರಿಗಳನ್ನು ಲಕ್ಷ್ಮಿಯು ಆಯಾಯ ಕೈಂಕರ್ಯಗಳಲ್ಲಿ ನಿಯಮಿಸುವಳು ಎಂದು ಹೇಳಿದರೆ ಕೈಮುತಿಕನ್ಯಾಯದಿಂದ ಮುಕ್ತರನ್ನೂ ಸಹ ಹಾಗೆಯೇ ಆಜ್ಞಾಪಿಸುವಳು ಎಂಬುದು ಸಿದ್ಧವು; **ಭಗವತಃ** - ಹೇಯಪ್ರತ್ಯನೀಕನಾಗಿ ಕಲ್ಯಾಣಗುಣಾಕರನಾದ ನಾರಾಯಣನ **ತತ್ತತ್**-ಆಯಾಯಾ, **ಅವಸ್ಥೋಚಿತ** - ಸಂದರ್ಭಗಳಿಗೆ ಯೋಗ್ಯವಾದ, **ಪರಿಚರ್ಯಾಯಾಂ** - ಕೈಂಕರ್ಯದಲ್ಲಿ, **ಆಜ್ಞಾಪಯಂತ್ಯಾ** - ಆಜ್ಞಾಪಿಸುವ, **ಶ್ರಿಯಾ ಸಹಾಸೀನಂ** - ಲಕ್ಷ್ಮಿಯೊಂದಿಗೆ ಬಿಜಮಾಡಿಸಿರುವ ಎಂದು ಮುಂದೆ ಇದೆ. ಯಾವಾಗ ಲಕ್ಷ್ಮಿಗೆ ನಿತ್ಯರನ್ನೇ ಆಜ್ಞಾಪಿಸುವ ಸ್ವಾತಂತ್ರ್ಯವುಂಟೋ ಮುಕ್ತರಿಗೂ ಉಂಟೆಂಬುದು ಕೈಮುತಿಕ ನ್ಯಾಯಸಿದ್ಧವು ದಿವ್ಯ ವೈಕುಂಠದಲ್ಲೇ ಹೀಗೆ ಆಜ್ಞಾಪಿಸುವ ಶಕ್ತಿಯಿದ್ದುದಾದರೆ ಲೀಲಾವಿಭೂತಿಯಲ್ಲಿ ತಾನೇ ಏಕೆ ಇಂತಹ ನಿಯಮನಾದಿಗಳು ಇಲ್ಲವೆಂದು ಹೇಳಲಾಗುತ್ತದೆ? ಆದುದರಿಂದ ಲೀಲಾವಿಭೂತಿಯ ಚೇತನರುಗಳಿಗೆ ಲಕ್ಷ್ಮಿಯೂ ಉಪಾಯತ್ವದಲ್ಲಿ ಸೇರಿದವಳು ಎಂಬ ಭಾವವು ಈ ಅಭಿಪ್ರಾಯದಿಂದಲೇ ಶ್ರೀ ದೇಶಿಕರವರು ಈ ವೈಕುಂಠಗದ್ಯ ವಾಕ್ಯವನ್ನು ಉದಾಹರಿಸಿರುವದೂ ಅಲ್ಲದೆ ಈ ಅಭಿಪ್ರಾಯವು ಶ್ರೀ ಭಾಷ್ಯಕಾರರಿಗೂ ಸಮ್ಮತವೆಂಬ ಭಾವವು; **ಎನ್ರು** - ಎಂಬದಾಗಿ, ಭಗವತ್ಕೈಂಕರ್ಯರೂಪವಾದ, **ಪರಮ ಪುರುಷಾರ್ಥವು** - ಮುಕ್ತೈಶ್ವರ್ಯರೂಪವಾದ ಶ್ರೇಷ್ಠವಾದ ಪ್ರಯೋಜನವು, **ಇವಳ್**- ಈ ಶ್ರೀ ಮಹಾಲಕ್ಷ್ಮಿಯು, **ನಿಯೋಗತ್ತಾಲೇ ಪಡಿಯೇ**-ಅಜ್ಞೆಯ ಹಾಗೆಯೇ, **ನಡತ್ತವೇಣುಮ್** - ನಡೆಸಬೇಕು, **ಎನ್ರು** - ಎಂಬದಾಗಿ, **ಅರುಳಿಚ್ಚೆಯ್**

ದಾರ್ - ಕೃಪೆಯಿಂ ಅನುಗ್ರಹಿಸಿದರು. ಇದಕ್ಕೆ ಕರ್ತೃಪದವು ಭಾಷ್ಯಕಾರರ್ ಎಂದು ವ್ಯಾಖ್ಯಾದಿಯಲ್ಲಿ ಇದೆ. ಆದರೆ ಈ ವಾಕ್ಯದಲ್ಲಿ ಲಕ್ಷ್ಮಿಗೆ ಉಪಾಯತ್ವ ವನ್ನು ಹೇಳಲು ಇಷ್ಟವಿಲ್ಲದವರು, **ಪರಿಚರ್ಯಾಯಾಂ ಆಜ್ಞಾಪಯಂತ್ಯಾ** ಎಂದರೆ ಸರ್ವೇಶ್ವರನಿಂದ ಅಜ್ಞಪ್ತವಾದ ಕೈಂಕರ್ಯಗಳಲ್ಲೇ ಮಾಡತಕ್ಕದ್ದೆಂಬು ವದನ್ನು ಜ್ಞಾಪಕಕ್ಕೆ ಕೊಡುವದಕ್ಕಾಗಿ ಇವಳ ಆಜ್ಞೆಯೇ ವಿನಾ ಇವಳೇ ಸ್ವತಂತ್ರಿಸಿ ನಿಯಮಿಸಿದಳೆಂಬಭಿಪ್ರಾಯವಲ್ಲವೆಂದು ಅರ್ಥ ಹೇಳಬಹುದು. ಇದು ಸರಿಯಾದ ಅಭಿಪ್ರಾಯವಲ್ಲವು; ಏಕೆಂದರೆ ತತ್ತದವಸ್ಥೋಚಿತ ಎಂದು ಇರುವದ ರಿಂದ ಆಯಾಯಾ ಸಂದರ್ಭಗಳಿಗೆ ಯೋಗ್ಯವಾದ ಕೈಙ್ಕರ್ಯಗಳನ್ನು ಈಕೆಯೇ ವಿಧಿಸುವಳೆಂದು ಹೇಳಿರುವದರಿಂದ, ಈಕೆಯೇ ಪತಿಯು ಇಙ್ಗಿತವನ್ನು ತಿಳಿದವ ಳಾದುದರಿಂದ ಸ್ವತಂತ್ರಿಸಿ ತನ್ನ ಆಜ್ಞೆಯ ಮೂಲಕ ಅವರಿಗೆ ಕೈಂಕರ್ಯದಲ್ಲಿ ಆಶೆಯುನ್ನುಂಟುಮಾಡುವಳೆಂದು ಹೇಳಿದಂತಾಯಿತು. ಆದುದರಿಂದಲೇ ಇವಳ್ ನಿಯೋಗತ್ತಿರ್ಪಡಿಯೇ ಎಂಬ ಪ್ರಯೋಗವು

ಸರ್ವೇಶ್ವರನಿಗೂ ಉಪಾಯತ್ವವನ್ನೂ, ಲಕ್ಷ್ಮಿಗೂ ಉಪಾಯತ್ವವನ್ನೂ ಹೇಳಿ ದರೆ, ಪರಸ್ಪರ ವಿರೋಧವೃತ್ತಿ, ಅದರಿಂದ ವೈಮನಸ್ಯ ಮುಂತಾದ ಅನರ್ಥಗಳಿಗೆ ಕಾರಣವಾಗುವದಿಲ್ಲವೇ? ಇಬ್ಬರ ಯಾಜಮಾನ್ಯವು ಹೀಗೆ ಅನರ್ಥಕ್ಕೆ ಕಾರಣ ವಾಗಿ ಪರಿಣಮಿಸುವದಿಲ್ಲವೇ? ಎಂದರೆ ಲೋಕದಲ್ಲಿ ಒಂದು ಗೃಹದಲ್ಲಿ ಪಿತಾ ಮಾತಾ ಇಬ್ಬರ ಅಧಿಕಾರಕ್ಕೂ ಒಬ್ಬ ಬಾಲನು ಸಿಕ್ಕಿ, ಏನೊಂದೂ ತೊಂದರೆ ಇಲ್ಲದೆ ಸಂಪೂರ್ಣ ಐಕಮತ್ಯವು ದಂಪತಿಗಳಿಗಿದ್ದು ಬಾಲನು ಒಳ್ಳೇ ಶ್ರೇಯಸ್ಸನ್ನು ಹೊಂದಿರುವದನ್ನು ನಾವೇ ಬಹಳವಾಗಿ ಕಂಡಿರುವೆವು ಹೀಗಿರುವಾಗ ಇಬ್ಬರೂ ಸರ್ವಜ್ಞರಾಗಿ, ಹೇಯಗುಣ ಸಂಪರ್ಕವೇ ಇಲ್ಲದವರಾಗಿ, ಇಬ್ಬರೂ ಪರಸ್ಪರ ನಿರತಿಶಯ ಪ್ರೀತಿವಿಶಿಷ್ಟರಾಗಿ, ಯಾವಾಗಲೂ ಒಟ್ಟಿಗೇ ಇರುವವರಾಗಿ, ಇರು ವಾಗ ಪರಸ್ಪರ ವೈಮನಸ್ಯಕ್ಕೆ ಅವಕಾಶವೆಲ್ಲಿಯದು? ವೈಮನಸ್ಯ, ಜಗಳ, ಮುಂತಾದವೆಲ್ಲಾ ಪರಸ್ಪರ ಮನಸ್ಸುಗಳನ್ನು ತಿಳಿಯಲವಕಾಶವಿಲ್ಲದೆ ರಜೋಗುಣ ತಮೋಗುಣ ಭೂಯಿಷ್ಠರಾದ ಮನುಷ್ಯರಲ್ಲುಂಟೇ ವಿನಾ, "**ತುಲ್ಯಶೀಲವಯೋ ವೃತ್ತ**" (ರಾಮಾ. ಸುಂದರ) ರಾದ ಲೋಕ ದಂಪತಿಗಳಲ್ಲಿ ಎಂದಿಗೂ ವೈಮನಸ್ಯ ವಿಲ್ಲವು ಇದನ್ನೇ ಮಹಾಪ್ರಾಜ್ಞನಾದ ಆಂಜನೇಯನು ಕಂಡು ಆಶ್ಚರ್ಯಪಡುತ್ತಾನೆ. "**ಅಸ್ಯಾದೇವ್ಯಾ ಮನಸ್ತಸ್ಮಿನ್ ತಸ್ಯಚಾಸ್ಯಾಂ ಪ್ರತಿಷ್ಠಿತಂ**" ಆಹ! ಈ ಸೀತೆ ಯ ಮನಸ್ಸು ಯಾವಾಗಲೂ ಶ್ರೀರಾಮಚಂದ್ರನಲ್ಲೂ, ಶ್ರೀರಾಮಚಂದ್ರನ ಮನಸ್ಸು ಈಕೆಯಲ್ಲೂ, ಪ್ರತಿಷ್ಠಿತವಾಗಿರುವದು" ಎಂದು ಪ್ರಶಂಸಿಸಿರುತ್ತಾನೆ. "**ಅಸಂದೇಶಾತ್ತು ರಾಮಸ್ಯ**" (ರಾ. ಸುಂ ೨೨. ೨೦) ಎಂದೂ "**ಅಹಂ ತಸ್ಯ ಪ್ರಭಾ**

ಕೂರತ್ತಾಳ್ವಾನುವರ್-(೧) "ಸ್ವಸ್ತಿಶ್ರೀರ್ದಿಶತಾ ದಶೇಷ ಜಗತಾಂ ಸರ್ಗೋಪಸರ್ಗಸ್ಥಿತೀಸ್ಸ್ವರ್ಗಂ ದುರ್ಗತಿ ಮಾಪವರ್ಗಿಕ ಪದಂ ಸರ್ವಂಚ ಕುರ್ವನ್ ಹರಿಃ। ಯಸ್ಯಾ ವೀಕ್ಷ್ಯ ಮುಖಂ ತದಿಙ್ಗಿತ ಪರಾಧೀನೋವಿಧತ್ತೇಽಖಿಲಂ ಕ್ರೀಡೇಯಂ ಖಲು ನಾನ್ಯಥಾಸ್ಯ ರಸದಾ ಸ್ಯಾದೈಕರಸ್ಯಾ

---

ತ್ತಯಾ" (ರಾ. ಸುಂ. ೩೭.೧೫) ಎಂದೂ ಹೇಳಿಕೊಂಡಿರುವಹಾಗೆ ಪತಿಯ ಮನಸ್ಸನ್ನರಿತ ಸರ್ವಜ್ಞಳಿಗೆ ವೈಮನಸ್ಯ ಉಂಟಾಗಲು ಕಾರಣವೇ ಇಲ್ಲವು ಆದುದರಿಂದ ಇಬ್ಬರಿಗೂ ಉಪಾಯತ್ವ ಉಂಟೆಂದು ಹೇಳುವದರಿಂದ, ಐಕರಸ್ಯಕ್ಕೇನೂ ಹಾನಿ ಇಲ್ಲವೆಂದು ಹೇಳಲು ಹೊರಟು, ಶ್ರೀ ಭಾಷ್ಯಕಾರರ ಪ್ರಿಯ ಶಿಷ್ಯರಾದ ಕೂರತ್ತಾಳ್ವಾರವರ ದಿವ್ಯ ಸೂಕ್ತಿಯ ಪ್ರಮಾಣವನ್ನು ಪ್ರದರ್ಶಿಸುತ್ತಾರೆ :—

"ಅಶೇಷ ಜಗತಾಂ-ಸಮಸ್ತ ಜಗತ್ತಿನ, ಸರ್ಗೋಪಸರ್ಗ ಸ್ಥಿತೀಃ, ಸರ್ಗ-ಸೃಷ್ಟಿ, ಉಪಸರ್ಗ – ಪ್ರಳಯ, ಸ್ಥಿತಿ - ರಕ್ಷಣೆಯು, ಇವುಗಳನ್ನೂ, ಸ್ವರ್ಗಂ - ಸ್ವರ್ಗವನ್ನೂ, ದುರ್ಗತಿಂ - ನರಕವನ್ನೂ, ಆಪವರ್ಗಿಕ ಪದಂ-ಮೋಕ್ಷವನ್ನೂ, ಸರ್ವಂಚ–ಹೀಗೆ ಸಮಸ್ತವನ್ನೂ, ಶ್ರೀ ಹರಿಯು, ಯಸ್ಯ - ಯಾವ ಅನುಗ್ರಹ ಮಯಳಾದ ತನ್ನ ಪ್ರಿಯವಲ್ಲಭಳ, ಮುಖಂ-ಮುಖವನ್ನು, ವೀಕ್ಷ್ಯ - ನೋಡಿ, ತದಿಙ್ಗಿತ ಪರಾಧೀನಃ - ಆ ಪ್ರಿಯಪತ್ನಿಯ ಇಷ್ಟಕ್ಕೆ ಅಧೀನನಾಗಿ, ಅಖಿಲಂ - ಮೇಲೆ ಹೇಳಿದ ಎಲ್ಲವನ್ನೂ, ವಿಧತ್ತೇ - ಮಾಡುವನೋ, ಅಂತಹ, ಶ್ರೀಃ - ಲಕ್ಷ್ಮಿಯು, ಸ್ವಸ್ತಿ - ಮಂಗಳವನ್ನು, ದಿಶತಾತ್ - ಕೊಡಲಿ, ಪ್ರಿಯವಲ್ಲಭಳ ಇಷ್ಟವನ್ನರಿತು, ಅದಕ್ಕೆ ವಶನಾಗಿ ಸೃಷ್ಟಿಸ್ಥಿತಿಲಯಗಳನ್ನು ಮಾಡುತ್ತಾನೆಂದು ಹೇಳಿದರು. ಅದನ್ನೇ ಪುನಃ ಸಮರ್ಥಿಸಿ ಹೇಳುತ್ತಾರೆ. ಅನ್ಯಥಾ - ಹಾಗಿಲ್ಲದೇ ಹೋದರೆ, ಅಯಂ ಕ್ರೀಡಾ – ಈ ಲೀಲಾವಿಭೂತಿಯಲ್ಲಿನ ಲೀಲೆಯು, ತಯಾ - ಆ "ತುಲ್ಯ ಶೀಲ ವಯೋವೃತ್ತ" ಗಳುಳ್ಳ ಲಕ್ಷ್ಮಿಯಿಂದ, ಐಕರಸ್ಯಾತ್ – ಸಮವಾದ ಆನಂದವನ್ನು ಹೊಂದಿರುವುದರಿಂದ, ರಸದಾ - ಆನಂದವನ್ನು ಕೊಡುವಂಥಾದ್ದು, ನಸ್ಯಾತ್ ಖಲು-ಆಗಲಾರದಷ್ಟೇ. "ಸ ಏಕಾಕೀ ನರಮೇತ" ಎಂದು ಹೇಳಿರುವ ಹಾಗೆ, ಸರ್ವೇಶ್ವರನಿಗೆ "ಸ್ವರೂಪ ರೂಪಗುಣ ವಿಭವೈಶ್ವರ್ಯಾದಿ"ಗಳಲ್ಲೆಲ್ಲಾ ಅಭಿಮತವಾಗಿರುವ ಪ್ರಿಯವಲ್ಲಭೆಯೊಂದಿಗೆ ಇಲ್ಲದೆ ಈ ಲೀಲಾವಿಭೂತಿಯ ಸೃಷ್ಟಿ ಸ್ಥಿತಿ ಲಯರೂಪ ಕ್ರೀಡೆಯು ಆತನಿಗೆ ಎಂದಿಗಾದರೂ ರುಚಿಸೀತೇ? ಆದುದರಿಂದ ಶ್ರುತಿ ಸ್ಮೃತೀತಿಹಾಸ

---

(೧) ಶ್ರೀಸ್ತವ, ಪ್ರಥಮ ಶ್ಲೋಕ.

ತ್ರಯಾ," ಎನ್ನು ಸಙ್ಗ್ರಹಿತ್ತ ವರ್ಥಕತ್ತಿ "ದೇವಿತ್ವನ್ಮಹಿಮಾವಧಿ ರ್ನ ಹರಿಣಾ ನಾಪಿ ತ್ವಯಾ ಜ್ಞಾಯತೇ" ಎನ್ನು ಕುದಙ್ಗ ವಿಸ್ತರಿಕ್ಕಾರ್.

---

ಪುರಾಣ ಪ್ರಮಾಣಗಳೆಲ್ಲಾ ಆಕೆಗೆ ಜಿದದ್ವ್ಯಾಪಾರಗಳಲ್ಲಿ ಅನ್ವಯ ಉಂಟೆಂದು ಉದ್ಘೋಷಿಸುತ್ತವೆ. ಹೀಗಿರುವಾಗ ಈ ಅಲ್ಪಜೀವಾತ್ಮನಿಗೆ ಉಪಾಯತ್ವದಲ್ಲಿ ಆಕೆಗೆ ತನ್ನ ಪತಿಯೊಂದಿಗೆ ಅನ್ವಯವಿಲ್ಲವೆಂದು ಹೇಳಲು ಹೇಗೆ ಸಾಧ್ಯವು? ನಮ್ಮ ಮತೋದ್ಧಾರಕರ ಸರ್ವಾಭಿಪ್ರಾಯವನ್ನೂ ಚನ್ನಾಗಿ ಅರಿತ ಕೂರಾತ್ತಾಳ್ವಾರವರ ವಾಕ್ಯದಲ್ಲಿ ನಮಗೆ ಪೂರ್ಣವಿಶ್ವಾಸವಿರಬೇಕೆಂದು ಅವರ ವಾಕ್ಯವನ್ನು ಇಲ್ಲಿ ಉದಾಹರಿಸಿರುತ್ತಾರೆ; ಎನ್ನು ಸಙ್ಗ್ರಹಿತ್ತರ್ಥಕತ್ತಿ - ಎಂದು ಸಂಗ್ರಹವಾಗಿ ಹೇಳಿದಭಿಪ್ರಾಯವನ್ನೇ, ದೇವಿತ್ವನ್ಮಹಿಮಾವಧಿ" ಎನ್ನು ಕುದಙ್ಗ - ಎಂಬ ಶ್ಲೋಕದಿಂದಾರಂಭಿಸಿ ಶ್ರೀಸ್ತವವೆಂಬ ಹೆಸರಿನಿಂದ, ವಿಸ್ತರಿಕ್ಕಾರ್ - ವಿಸ್ತರಿಸಿ ಹೇಳಿದರು. ಹೇ ದೇವಿ- ಈ ವಿಭೂತಿಯ ಲೀಲಾರಸವನ್ನನುಭವಿಸುವ ಓ ಲಕ್ಷ್ಮಿಯೇ, ತ್ವನ್ಮಹಿಮಾವಧಿಃ - ನಿನ್ನ ಮಹಿಮೆಯ ಎಲ್ಲೆಯು, ಹರಿಣಾ ನ ಜ್ಞಾಯತೇ - ಶ್ರೀಹರಿಗೂ ತಿಳಿಯದು, ನಾಪಿತ್ವಯಾ ಜ್ಞಾಯತೇ – ನಿನಗೂ ಸಹ ತಿಳಿಯದು; ಮುಂದಿನ ಮೂರು ಪಾದಗಳು :—

ಯದ್ಯಪ್ಯೇವ ಮಥಾಪಿ ನ್ಯೆವ ಯುವಯೋಃ ಸ್ಸರ್ವಜ್ಞತಾ ಹೀಯತೇ ॥
ಯನ್ನಾಸ್ತ್ಯೇವ ತದಜ್ಞತಾ ಮನುಗುಣಾಂ ಸರ್ವಜ್ಞತಾಯಾ ವಿದು ।
ರ್ವ್ಯೋಮಾಂಭೋಜ ಮಿದನ್ತಯಾ ಕಿಲ ವಿದನ್ ಭ್ರಾನ್ತೋಯ
ಮಿತ್ಯುಚ್ಯತೇ ॥

ಹೀಗೆ ಲಕ್ಷ್ಮಿಯಾದ ನಿನ್ನ ಮಹಿಮೆಯ ಎಲ್ಲೆಯು ಶ್ರೀ ಹರಿಗೂ ನಿನಗೂ ತಿಳಿಯದು ಎಂದರೇನಾದರೂ ನಿಮ್ಮಗಳ ಸರ್ವಜ್ಞತೆಗೆ ಕುಂದಕವೋ ಎಂದರೆ ಹಾಗೇನೂ ಇಲ್ಲವೆಂದು, ನೈವಯುವಯೋಃ ಸ್ಸರ್ವಜ್ಞತಾ ಹೀಯತೇ ಎಂದು ಹೇಳುತ್ತಾರೆ; ನಿಮ್ಮಗಳ ಸರ್ವಜ್ಞತೆಯೇನೂ ಇದರಿಂದ ನಷ್ಟವಾಗಲಿಲ್ಲವು, ಅದು ಹೇಗೆಂದರೆ :— ಯನ್ನಾಸ್ತ್ಯೇವ - ಯಾವದು ಇಲ್ಲವೋ, ತದಜ್ಞತಾಂ - ಅದರ ತಿಳುವಳಿಕೆ ಇಲ್ಲದಿರುವದನ್ನೇ, ಸರ್ವಜ್ಞತೆಗೆ ಅನುಗುಣವಾದುದನ್ನಾಗಿಯೇ ಭಾವಿಸಿದರು. ಇಲ್ಲದೇ ಇರುವದನ್ನು, ತಿಳಿಯದಿರುವಂಥಾದ್ದೆಂದು, ಹೇಳುವದೇ, ಸರ್ವಜ್ಞತೆಯು. ಹಾಗಲ್ಲದೆ, ಇಲ್ಲದೇ ಇರುವದೂ ನನಗೆ ತಿಳಿಯುವದು ಎಂದು ಹೇಳಿದರೆ, ಅಂತವನನ್ನು ಹುಚ್ಚನೆಂದೇ ಭಾವಿಸತಕ್ಕದ್ದೆಂದು ಒಂದು ನಿದರ್ಶನಪೂರ್ವಕ ತಿಳಿಸುತ್ತಾರೆ. ವ್ಯೋಮಾಂಭೋಜ ಮಿದಂತಯಾ ಕಿಲ ವಿದನ್ - ಗಗನ

**ಭಟ್ಟರುಮ್** (೧) "**ಐಶ್ವರ್ಯ ಮಕ್ಷರಗತಿಂ ಪರಮಂ ಪದಂವಾ ಕಸ್ಮೈಚಿದಂಜಲಿ ಭರಂ ವಹತೇ ವಿತೀರ್ಯ । ಅಸ್ಮೈ ನ ಕಿಂಚಿದುಚಿತಂ ಕೃತ**

---

ಕುಸುಮವು ಇಲ್ಲದಿರುವಂಥಾದ್ದು, ಅದು ಇಂಥಾದ್ದೆಂದು ಹೇಳುವವನು ಭ್ರಾಂತನು, ಹುಚ್ಚನೆಂದು ಹೇಳಲ್ಪಡುತ್ತದೆ ಹಾಗೆಯೇ ಲಕ್ಷ್ಮಿಯ ಮಹಿಮೆಯ ಎಲ್ಲೆಯು, ಇಲ್ಲದಿರುವಂಥಾದ್ದು; ಅದು ಉಂಟು, ಇಂಥಾದ್ದು, ಎಂದು ಹೇಳುವವನು ಉನ್ಮತ್ತನೆಂಬ ತಾತ್ಪರ್ಯವು. ಈ ಅಭಿಪ್ರಾಯವನ್ನನುಸರಿಸಿಯೇ ಶ್ರೀ ಪರಾಶರ ಭಟ್ಟರೂ ಕೂಡ "**ಉಲ್ಲಾಸ ಪಲ್ಲವಿತ ಪಾಲಿತ ಸಪ್ತಲೋಕೀ ನಿರ್ವಾಹ ಕೋರಕಿತ ನೇಮ ಕಟಾಕ್ಷ ಲೀಲಾಮ್**" ಎಂದು ಲಕ್ಷ್ಮಿಯನ್ನು ಕೊಂಡಾಡಿರುತ್ತಾರೆ. ಹೀಗೆ ಪೂರ್ವಪಕ್ಷ ಸಿದ್ಧಾಂತ ಎರಡು ಪಂಗಡದವರಿಂದಲೂ ಮಾನನೀಯರಾದ ಶ್ರೀ ಪರಾಶರ ಭಟ್ಟರವರ ದಿವ್ಯಸೂಕ್ತಿಯನ್ನು ಉದಾಹರಿಸುತ್ತಾರೆ ಶ್ರೀ ಪರಾಶರಭಟ್ಟರು. ಶ್ರೀ ಯತಿವರ್ಯರ ಮುಖ್ಯ ಶಿಷ್ಯರಾದ ಶ್ರೀ ಕೂರತ್ತಾಳ್ವಾರವರ ಮಕ್ಕಳು, ಲಕ್ಷ್ಮೀವರಪ್ರಸಾದದಿಂದ ಹುಟ್ಟಿದ ಮಹಾಪ್ರಾಜ್ಞರು. ಅಂತವರ ವಾಕ್ಯನಲ್ಲಿ ಪರಮ ಗೌರವವನ್ನು ಉಭಯ ಪಂಗಡದವರೂ ಇಟ್ಟಿರುವದು ಹೆಚ್ಚಲ್ಲವು. ಆದುದರಿಂದ ಅಂತಹ ಮಹನೀಯರ ವಾಕ್ಯವು ಆಪ್ತ ವಾಕ್ಯವಾಗಿ ಅದರಲ್ಲಿ ತುಂಬಾ ವಿಶ್ವಾಸವಿಡತಕ್ಕದ್ದೆಂಬಭಿಪ್ರಾಯದಿಂದ **ಭಟ್ಟರುಮ್** ಎಂದು **ಅಪಿ** ಶಬ್ದವನ್ನುಪಯೋಗಿಸಿರುತ್ತಾರೆ. "**ವಸಿಷ್ಠೋಽಪಿ ಮಹಾ ತೇಜಾಃ**" (ರಾಮಾ. ಬಾಲ) ಎಂದು ಹೇಳಿರುವಲ್ಲಿರುವ **ಅಪಿ** ಶಬ್ದದ ಹಾಗೆ **ಭಟ್ಟರುಮ್** ಎಂಬ ಪ್ರಯೋಗವು. ಪೂರ್ವಪಕ್ಷ ಮಾಡುವವರ ಕಡೆಯವರಾಗಿ ಪರಮಗೌರವಾರ್ಹರಾಗಿರುವವರ ದಿವ್ಯಸೂಕ್ತಿಯಿಂದಲೇ ಪೂರ್ವಪಕ್ಷಕ್ಕೆ ಸಮಾಧಾನ ಹೇಳಿದರೆ ಆ ಸಮಾಧಾನವು ಅತ್ಯಂತೋಪಾದೇಯವೆಂಬ ಭಾವವು "**ಐಶ್ವರ್ಯಂ** - ಇಹಲೋಕದ ಐಶ್ವರ್ಯವನ್ನೂ, ಇತರ ಲೋಕಗಳಾದ ಇಂದ್ರಾದಿ ಲೋಕಗಳ ಐಶ್ವರ್ಯವನ್ನೂ, **ಅಕ್ಷರಗತಿಂ** - ಕೈವಲ್ಯವನ್ನೂ, **ಪರಮಂಪದಂ** - ದಿವ್ಯ ವೈಕುಂಠವನ್ನೂ, **ವಾ** - ಎಂಬುದರಿಂದ ಇವುಗಳೆಲ್ಲವನ್ನೂ (ಸಮುಚ್ಚಯಾರ್ಥವು), **ಅಂಜಲಿಭರಂ** - ಅಂಜಲಿರೂಪ ಭರವನ್ನು, **ವಹತೇ** - ವಹಿಸಿರುವ, **ಕಸ್ಮೈಚಿತ್** - ಜಾತಿ ಕುಲ ಗುಣ ವೃತ್ತಗಳ ಉತ್ಕರ್ಷಾಪಕರ್ಷಗಳನ್ನು ನೋಡದೇ ಯಾರಿಗಾಗಲಿ ಒಬ್ಬನಿಗೆ, **ವಿತೀರ್ಯ** - ಕೊಟ್ಟುಬಿಟ್ಟು, **ಅಸ್ಮೈ** - ಈ ಪ್ರಪನ್ನನಿಗೆ **ಉಚಿತಂ** - ಕೇಳಿದ್ದಲ್ಲದೆ ಉಚಿತವಾಗಿ, **ಕಿಂಚಿತ್** - ಏನೊಂದೂ, **ನ ಕೃತಂ** -

---

(೧) ಶ್ರೀಗುಣ. ೫೮.

ಮಿತ್ಯಥಾಂಬ ತ್ವಂ ಲಜ್ಜಸೇ ಕಥಯ ಕೋಯ ಮುದಾರ ಭಾವಃ" ಎನ್ರು ಶ್ರುತಿ ಯಿಲುದಾರ ಶಬ್ದತ್ತುಕ್ಕು ವ್ಯಾಖ್ಯಾನಮ್ ಪಣ್ಣುನಾರ್.

---

ಮಾಡಲ್ಪಡಲಿಲ್ಲವು. ಏಕೆಂದರೆ, ಮೋಕ್ಷವನ್ನು ಕೊಟ್ಟ ನಂತರ ಅದಕ್ಕಿಂತಲೂ ಹೆಚ್ಚಾದದು ಇನ್ನು ಯಾವುದೂ ಕೊಡಲು ಯೋಗ್ಯವಾದುದಿಲ್ಲದುದರಿಂದ ಮಾಡ ಲಿಲ್ಲವೆಂಬ ಭಾವವು, ಇತಿ - ಎಂಬದಾಗಿ, ಅಥ – ಅನಂತರದಲ್ಲಿ, ಹೇ ಅಂಬ - ಓ ಲೋಕಮಾತೆಯೇ, ತ್ವಂ ಲಜ್ಜಸೇ - ನೀನದಕ್ಕಾಗಿ ನಾಚಿಕೆಪಡುತ್ತೀಯೋ, ಶ್ರೀ ರಂಗನಾಯಕಿಯ ದಿವ್ಯಮಂಗಳ ವಿಗ್ರಹದ ಶಿರಸ್ಸು ಸ್ವಲ್ಪ ಬಾಗಿರುವುದರಿಂದ, ಪ್ರಪನ್ನನು ಮೋಕ್ಷವನ್ನು ಕೇಳಿದುದರಿಂದ ಅದನ್ನು ಕೊಟ್ಟುಬಿಟ್ಟು ಉಚಿತವಾಗಿ ಕೊಡಲು ಅದಕ್ಕೆ ಮೇಲಾದುದು ಯಾವುದೂ ಇಲ್ಲವೆಂದೇನಾದರೂ ತಲೆ ಬಾಗಿ ಲಜ್ಜಿಸುತ್ತೀಯೋ ಎಂದು ಉತ್ಪ್ರೇಕ್ಷೆಯು, ಅಯಂ ಉದಾರಭಾವಃ- ಈ ಉದಾರ ಭಾವವು, ಆಹ, ಕಃ - ಎಂತಹುದು, ಕಥಯ - ಹೇಳು," ಎನ್ರು - ಎಂಬ ದಾಗಿ, ಶ್ರುತಿಯಿಲ್ - " ದೇವಜುಷ್ಟಾ ಮುದಾರಾಂ" ಎಂಬ ಶ್ರೀಸೂಕ್ತದಲ್ಲಿ ರುವ, ಉದಾರ ಶಬ್ದಕ್ಕೆ ವ್ಯಾಖ್ಯಾನ ಮಾಡಿದರು. ಲೋಕದಂಪತಿಗಳಿಬ್ಬರೂ ಯಾವಾಗಲೂ ಒಟ್ಟಿಗೆ ಇರುವುದರಿಂದ, ಯಾವಾಗ ಉಪಾಯತ್ವೇನ ಶರಣಾಗತಿ ಮಾಡಲ್ಪಡುತ್ತದೋ, ಆಗ ಇಬ್ಬರೂ ಉಪಾಯಭೂತರೆಂಬಭಿಪ್ರಾಯವೇ ವಿನಾ ಅನ್ಯಥಾ ಅಲ್ಲವು ಇಬ್ಬರನ್ನೂ ಸೇರಿಸಿಯೇ ಯಾವಾಗಲೂ ಶರಣಾಗತಿಯು ಆದರೆ ಶ್ರೀ ಭಾಷ್ಯಕಾರರು ಪ್ರತ್ಯೇಕವಾಗಿ ಮೊದಲು ಲಕ್ಷ್ಮಿಯಲ್ಲೂ, ಅನಂತರ ನಾರಾಯಣನಲ್ಲೂ ಶರಣಾಗತಿ ಮಾಡಿದರಲ್ಲಾ ಎಂದರೆ, ಇದರಲ್ಲೇನೂ ವಿರೋಧ ವಿಲ್ಲವು ದಂಪತಿಗಳಿಬ್ಬರೂ ಒಟ್ಟಿಗೆ ಕೂತಿದ್ದರೆ, ಆಶೀರ್ವಾದಕ್ಕೆ ಅರ್ಹನಾಗಿರು ವವನು ಪ್ರತ್ಯೇಕ ಪ್ರತ್ಯೇಕವಾಗಿ ಅವರಿಬ್ಬರಿಗೂ ನಮಸ್ಕರಿಸಬಹುದು. ಒಟ್ಟಿಗೆ ಇಬ್ಬರನ್ನೂ ಉದ್ದೇಶಿಸಿ ನಮಸ್ಕರಿಸಿದರೂ ನಮಸ್ಕರಿಸಬಹುದು. ಆದರೆ ಯತಿ ವರ್ಯರು ಶ್ರೀ ಶರಣಾಗತಿಯನ್ನು ಮಾಡಿದುದು ಪುರುಷಕಾರ ಭಾವನೆಯಿಂದಲೇ ಅಥವಾ ಉಪಾಯವೆಂಬ ಭಾವನೆಯಿಂದಲೇ ಎಂದರೆ, ಎರಡು ಭಾವನೆಯಿಂದಲೇ ಎಂದು ಹೇಳುವೆವು. ಪರತತ್ವವೇ ಶ್ರಿಯಃಪತಿಯಾದುದರಿಂದ ಸಾಧ್ಯೋಪಾಯ ವಾಗಿ ಭರನ್ಯಸನವು ಇಬ್ಬರಲ್ಲೂ ಆದುದರಿಂದ, ಇಬ್ಬರಲ್ಲೂ ಉಪಾಯತ್ವವು. ಅನು ಗ್ರಹಮಯಳಾಗಿ ಅನುಗ್ರಹಿಸುವ ವ್ಯಾಪಾರವನ್ನು ಲಕ್ಷ್ಮಿಯೂ, ಶಾಸನ ಮಾಡುವ ವ್ಯಾಪಾರವನ್ನು ನಾರಾಯಣನೂ, ವಿಭಾಗಿಸಿ ಇಟ್ಟುಕೊಂಡಿರುವದರಿಂದ, ಪ್ರಬಲ ಪಾಪಗಳಿಗಾಗಿ ಶಾಸಿತಾವಿನ ವ್ಯಾಪಾರವು ಮುಂದುವರೆದರೆ, ಆಗ ಪುರುಷಕಾರ ರೂಪ

ದಲ್ಲಿ ದಂಡನಿವೃತ್ತಿಗೂ, ಲಕ್ಷ್ಮಿಯಲ್ಲಿ ಶರಣಾಗತಿ ಮಾಡಲ್ಪಟ್ಟಿತೆಂದು ಭಾವಿಸಬಹುದು. ಬರೀ ಪುರುಷಕಾರವೇ ಆದರೆ ಕೈಯಲ್ಲಿ ಕಾಸಿಲ್ಲದವನ ಉದಾರಯೆಯು ಹಾಗೆ ಆಗ ಉದಾರಭಾವವು ಎಲ್ಲಿಯದು? ಶ್ರುತಿಯೂ ಕೂಡ ಅತಿಶಯೋಕ್ತಿಯನ್ನು ಹೇಳಿತೆಂಬ ನಿಂದೆಗೆ ಆಗ ಗುರಿಯಾಗುತ್ತದೆ. ಉಪಾಯತ್ವವು ಲಕ್ಷ್ಮಿಗೆ ಇಲ್ಲವೆಂದು ಹೇಳುವವರ ಪಂಗಡಕ್ಕೆ ಸೇರಿದವರು ಪರಾಶರಭಟ್ಟರಾದುದರಿಂದ, ಅವರಭಿಪ್ರಾಯವು "ವಸಿಷ್ಠೋಪಿ ಮಹಾ ತೇಜಾಃ" ಎಂದು ಹೇಳಿರುವ ಹಾಗೆ ಪ್ರಬಲತರವಾದುದೆಂದು ಉದಾಹರಿಸಿರುತ್ತಾರೆ ಏನೋ ಅತಿಶಯೋಕ್ತಿಗಾಗಿ ಹೀಗೆ ಉದಾರ ಶಬ್ದಕ್ಕೆ ವ್ಯಾಖ್ಯಾನ ಮಾಡಿರಬಹುದೆಂದರೆ, ಹಾಗಲ್ಲವೆಂದು ತಿಳಿಸುವದಕ್ಕಾಗಿ ಪರಾಶರಭಟ್ಟರ ಇನ್ನೊಂದು ದಿವ್ಯಸೂಕ್ತಿಯನ್ನು ಸಾರದೀಪಿಕಾ ವ್ಯಾಖ್ಯಾತೃವು ಉದಾಹರಿಸುತ್ತಾರೆ:—"ಸ್ವಯಂವಸ್ತ್ಯಾ ಕುರ್ವನ್ ಜನಮಿಮ ಮಕಸ್ಮಾತ್ಸರಸಿಜ ಪ್ರಕಾರೌ ಪದ್ಮಾಯಾಸ್ತವಚ ಚರಣೌನ ಶ್ಶರಣಯನ್" ಎಂದು ನಮ್ಮಾಳ್ವಾರ್ ಪಾಶುರಕ್ಕೆ ಅರ್ಥವೆಂದು ತಾವು ಅನ ಗ್ರಹಿಸಿರುವ ಲಕ್ಷ್ಮೀ ಕಲ್ಯಾಣ ಸ್ತೋತ್ರದಲ್ಲಿ ಉಪದೇಶಿಸಿರುತ್ತಾರೆ ಇದರರ್ಥವೇನೆಂದರೆ:—ಇಮಂಜನಂ-ಈ ಜನವನ್ನು, ಸ್ವಯಂ-ತಾನಾಗಿಯೇ ವಸ್ತ್ಯಾಕುರ್ವನ್-ಅವರಿಗೆ ಜ್ಞಾನ ಬುದ್ಧಿಯೋಗ ಸತ್ತಾದಿಗಳನ್ನಿತ್ತು ಅವರನ್ನು "ಪೂರಳಾಕ್ಕಿ" ಎಂದು ಹೇಳಿರುವ ಹಾಗೆ ವಸ್ತುವಾಗಿ ಮಾಡಿ, ಅಕಸ್ಮಾತ್ತಾಗಿ ಒಂದು ವ್ಯಾಜ ಮೂಲಕ, ಸರಸಿಜಪ್ರಕಾರೌ - ಕಮಲ ಸದೃಶಗಳಾದ, ಪದ್ಮಾಯಾಃ - ಲಕ್ಷ್ಮಿಯ, ಮತ್ತು ತವಚ - ನಿನ್ನ ಸಹ, ಪಾದೌ - ಚರಣಗಳನ್ನು, ನಃ - ನಮಗೆ ಶರಣಯನ್ - ಶರಣವಾಗಿ ಪ್ರದರ್ಶಿಸಿ" ಎಂಬರ್ಥವು. ಇಲ್ಲಿ ಸ್ವಯಂ - ಎಂಬುದರಿಂದ ಯಮೇವೈಷ ವೃಣುತೇ ತೇನ ಲಭ್ಯಃ ಎಂಬ ಶ್ರುತ್ಯರ್ಥವು ಹೇಳಲ್ಪಟ್ಟಿತು. ದ್ವಯದಲ್ಲಿಯೂಯೂ ಹೀಗೆಯೇ ಇಬ್ಬರೂ ಭರನ್ಯಾಸಕ್ಕೆ ಉದ್ದೇಶ್ಯರೆಂದೂ, ಅಲ್ಲಿ ಇಬ್ಬರಿದ್ದರೂ ಚರಣೌ ಎಂದು ಹೇಗೆ ದ್ವಿವಚನವೋ, ಹಾಗೆಯೇ ಇಲ್ಲಿಯೂ ದ್ವಿವಚನವೇ ಉಪಯೋಗಿಸಲ್ಪಟ್ಟಿರುತ್ತದೆ. ಲಕ್ಷ್ಮಿಯು ವಿಶೇಷಣವಾದ ಪ್ರಯುಕ್ತ ಬಹು ವಚನ ಬೇಕಿಲ್ಲವು. ಮುಂದೆ ಆ ಮಂಡಲಿಯಲ್ಲೇ ಅಗ್ರಗಣ್ಯರಾದ ಪೆರಿಯಜೀಯರವರಭಿಪ್ರಾಯವೂ ತಮ್ಮ ಅಭಿಪ್ರಾಯಗಳಿಗೆ ವಿರೋಧವಾದುವಲ್ಲವೆಂದು ತಿಳಿಸುತ್ತಾರೆ. ಲಕ್ಷ್ಮಿಗೂ ಉಪಾಯತ್ವ ಮೋಕ್ಷಪ್ರದತ್ವ ಉಂಟೆಂದರೆ ಲಕ್ಷ್ಮಿಗೆ ಸ್ವಾತಂತ್ರ್ಯವು ಏರ್ಪಡಲಿಲ್ಲವೋ, ಪತಿಶೇಷಳಲ್ಲವೋ ಎಂದರೆ ಈ ಪೆರಿಯಜೀಯರೇ ಅಂತಹ ಸಂದೇಹಗಳುಂಟಾಗದಹಾಗೆ ಅವರಿಬ್ಬರೂ "ಅಸ್ಯಾದೇವ್ಯಾ ಮನಸ್ತಸ್ಮಿನ್ ತಸ್ಯ ಚಾಸ್ಯಾಂ ಪ್ರತಿಷ್ಠಿತಂ" ಎಂದು ಮಹರ್ಷಿಯು ಬಹು ಸ್ವಾರಸ್ಯದಿಂದುಪಪಾದಿಸಿರುವ ಹಾಗೆ ಪರಸ್ಪರೈಕಮತ್ಯದಿಂದಲೂ ಪತಿಗಧೀನಳಾಗಿಯೂ ನಡೆಯುವಳೆಂದು

**ಶ್ರೀ ಸೂಕ್ತಿಭಾಷ್ಯತ್ತಿಲೇ ಪೆರಿಯ ಜೀಯರುಮ್ ಅಪೇಕ್ಷಿತಾರ್ಥಙ್ಗಳೆಲ್ಲಾಮುಪಪಾದಿತ್ತಾರ್. ಇಪ್ಪಡಿ ಶ್ರುತಿ ಸ್ಮೃತಿ ಸಂಪ್ರದಾಯುನ್ ನಿರ್ಕ್ಕಿರ ನಿಲೈಗಳೈಕ್ಕೊ (ಕ್ಕ) ಣ್ಡು ಶ್ರೀಮಚ್ಛಬ್ದತ್ತಿಲ್ ಶೊನ್ನ ವಿಶೇಷಣತ್ತುಕ್ಕು ವಿಗ್ರಹಾದಿಗಳುಕ್ಕುಪ್ಪೋಲೆ ವಸ್ತ್ವನುರೂಪಮಾನ ಉಪಯೋಗ ವಿಶೇಷಙ್ಗಳೈ ಸಹೃದಯರ್ ಅರಿನ್ದುಕೊಳ್ವದು.**

---

ಹೇಳುವದರಿಂದ ಅವರ ಶ್ರೀ ಸೂಕ್ತಿಭಾಷ್ಯಮೂಲಕವಾಗಿ ಅಪೇಕ್ಷಿತಗಳಾದ ಅಭಿಪ್ರಾಯಗಳನ್ನೆಲ್ಲಾ ಅರಿಯಬಹುದೆಂದು ಹೇಳುತ್ತಾರೆ.—ಶ್ರೀ ಸೂಕ್ತಿ ಭಾಷ್ಯದಲ್ಲಿ, **ಪೆರಿಯ ಜೀಯರುಮ್** - ಪೆರಿಯಜೀಯರೂ ಸಹ, **ಅಪೇಕ್ಷಿತಾರ್ಥಙ್ಗಳೆಲ್ಲಾಮ್** - ನಾವು ಸರಿಯಾಗಿ ತಿಳಿಯಬೇಕಾದ ಅಭಿಪ್ರಾಯಗಳೆಲ್ಲವನ್ನೂ ಉಪಪಾದಿಸಿದರು.

ಇಷ್ಟು ದೂರ ಸಪ್ರಮಾಣವಾಗಿ ಸಾಧಿಸಿದ ವಿಷಯವನ್ನು ನಿಗಮನಮಾಡಿ ಹೇಳುವದು ಆವಶ್ಯಕವಾದುದರಿಂದ ಒಂದು ವಾಕ್ಯ ಮೂಲಕ ಸಂಗ್ರಹಿಸುತ್ತಾರೆ:— ದ್ವಯಃಪೂರ್ವಖಂಡದ ಶ್ರೀಮಚ್ಛಬ್ದವು ವಿಶೇಷಣವೇ ಉಪಲಕ್ಷಣವೇ ಎಂಬ ವಿಷಯದಲ್ಲಿ ಮಾಡಿದ ಜಿಜ್ಞಾಸೆಯ ಮೂಲಕವಾಗಿಯೂ, ಶ್ರುತಿ ಸ್ಮೃತಿ ಪುರಾಣೇತಿಹಾಸ ಆಳ್ವಾರಾಚಾರ್ಯ ಸಂಪ್ರದಾಯಾದಿ ಆಪ್ತ ವಾಕ್ಯಗಳ ಮೂಲಕವಾಗಿಯೂ, ಶ್ರೀಮಚ್ಛಬ್ದವು ವಿಶೇಷಣವೇ ವಿನಾ ಉಪಲಕ್ಷಣವಲ್ಲವೆಂದು ಸ್ಥಾಪಿಸಿ ಮುಗಿಸುತ್ತಾರೆ. **ಇಪ್ಪಡಿ**- ಈ ಮೇಲೆ ಉಪಪಾದಿಸಿದ ರೀತಿಯಲ್ಲಿ, **ಶ್ರುತಿ, ಸ್ಮೃತಿ ಸಂಪ್ರದಾಯುಮ್**-ಆಳ್ವಾರಾಚಾರ್ಯರುಗಳ ದಿವ್ಯ ಸೂಕ್ತಿಮತ್ತು ಅನುಷ್ಠಾನವೂ, ಇವುಗಳು, **ನಿರ್ಕ್ಕಿರ ನಿಲೈಗಳೈಕ್ಕೊಣ್ಡು**-ಇರುವ ಯಥಾವತ್ತಾದ ಸ್ಥಿತಿಯನ್ನು ಪರ್ಯಾಲೋಚಿಸಿ, **ಶ್ರೀಮಚ್ಛಬ್ದತ್ತಿಲ್ ಶೊನ್ನ ವಿಶೇಷಣತ್ತುಕ್ಕು** - ದ್ವಯ ಪೂರ್ವಖಂಡದ ಶ್ರೀಮತ್ ಎಂಬ ಶಬ್ದಮೂಲಕ ಹೇಳಲ್ಪಟ್ಟ ವಿಶೇಷಣಕ್ಕೆ, ಆ ವಿಶೇಷಣವು ಯಾವುದು ಎಂದರೆ ಲಕ್ಷ್ಮಿಯೊಂದಿಗೆ ಸೇರಿದ ಭಾವವು, **ವಿಗ್ರಹಾದಿಗಳಕ್ಕುಪ್ಪೋಲೆ** - ಸರ್ವೇಶ್ವರನ ದಿವ್ಯ ಮಙ್ಗಳ ವಿಗ್ರಹ, ಆದಿಪದದಿಂದ ಆತನ ಪ್ರಪನ್ನಾನುಗ್ರಹಕ್ಕೆ ಉಪಯುಕ್ತವಾದ ಕಲ್ಯಾಣಗುಣಗಳೇ ಮೊದಲಾದವು ಸಙ್ಗ್ರಹಿಸಲ್ಪಟ್ಟವು, ಇವುಗಳೆಲ್ಲಾ ನೀವು ಹೇಗೆ ವಿಶೇಷಣಗಳೆಂದು ಒಪ್ಪಿಕೊಳ್ಳುವಿರೋ ಹಾಗೆಯೇ, **ವಸ್ತ್ವನುರೂಪಮಾನ** - ಇಲ್ಲಿ ವಸ್ತುವು ಲಕ್ಷ್ಮೀ ವಿಷಯವು, ಆದುದರಿಂದ ಲಕ್ಷ್ಮಿಗೆ ಅನುರೂಪವಾದ, **ಉಪಯೋಗ ವಿಶೇಷಙ್ಗಳ್** - ಉಪಯೋಗ ವಿಶೇಷಗಳನ್ನು, ಉಪಾಯವಾಗಿರಲು ಆಕೆಗೆ ಮಾಹಾತ್ಮ್ಯ ಇಲ್ಲವೇ

**ಭರಸ್ವೀಕಾರ ರಹಿತಂ ರಕ್ಷಾ ಸಙ್ಕಲ್ಪ ವರ್ಜಿತಂ ।**
**ಗುಣಾದಿಕ ಮಿಹೇಷ್ಟಂ ಹಿ ಶರಣ್ಯಸ್ಯ ವಿಶೇಷಣಂ ॥೨೩॥**

ಎಂಬುದನ್ನು ಚನ್ನಾಗಿ ವಿಮರ್ಶಿಸಿ, ಅವಳ ಮಾಹಾತ್ಮ್ಯಗೆ ಉಪಾಯವಾಗಿರುವ ಪ್ರಯೋಜನವು, ಸರಿಯಾದುದೆಂದು, **ಸಹೃದಯರು** - ಪ್ರೀತಿಯುಳ್ಳವರು, ಎಂದರೆ ಪ್ರತಿ ಕಕ್ಷಿಯವರು, ಹೇಳುವದಕ್ಕೆ ವಿರುದ್ಧವಾಗಿ ಹೇಳಬೇಕೆಂಬ ಅಪ್ರೀತಿ ಇಲ್ಲದೆ ಶಾಸ್ತ್ರಸಂಪ್ರದಾಯಾದಿಗಳನುಗುಣವಾಗಿ ನಡೆಯುವರಲ್ಲಿ ವಿಶ್ವಾಸವಿಟ್ಟರುವವರು, **ಅರಿನ್ದು ಕೊಳ್ವದು** - ತಿಳಿದುಕೊಳ್ಳತಕ್ಕದ್ದು. ಈರ್ಷ್ಯಾಸೂಯೆಗಳನ್ನು ಬಿಟ್ಟು ಶಾಸ್ತ್ರ ಸಂಪ್ರದಾಯಗಳನ್ನು ವಿಮರ್ಶಿಸಿ ತಿಳಿಯುವವರಿಗೆ ಶ್ರೀಮಚ್ಛಬ್ದವನ್ನು ವಿಶೇಷಣವೆಂದು ಭಾವಿಸುವದು ಯುಕ್ತವೇ, ಉಪಲಕ್ಷಣವಾಗಿ ಭಾವಿಸುವದು ಯುಕ್ತವೇ, ಎಂಬ ವಿಷಯವು ತಮ್ಮ ಮನಸ್ಸಿಗೇನೇ ವೇದ್ಯವಾಗುತ್ತದೆಂಬ ಭಾವವು.

ಸಮರ್ಥಿಸಿದ ಅರ್ಥಗಳ ಸ್ಥಿರೀಕರಣಕ್ಕಾಗಿ ನಾಲ್ಕು ಕಾರಿಕೆಗಳನ್ನನುಗ್ರಹಿಸುತ್ತಾರೆ- ಈ ಪ್ರಥಮ ಶ್ಲೋಕದಿಂದ ಹಿಂದೆ ವಿವರಿಸಿದ ದೂಷಣವನ್ನೇ ಹೇಳುತ್ತಾರೆ:—**ಭರಸ್ವೀಕಾರರಹಿತಂ** - ಮಾಡಿದ ಭರನ್ಯಾಸವನ್ನು ಅಚೇತನವಾದುದರಿಂದ ಸ್ವೀಕರಿಸುವ ಶಕ್ತಿಯಿಲ್ಲದುದು, **ರಕ್ಷಾ ಸಙ್ಕಲ್ಪ ವರ್ಜಿತಂ** - ಭರನ್ಯಾಸ ಮಾಡಿದುದಕ್ಕೆ ಪ್ರತಿಫಲವಾಗಿ ರಕ್ಷಿಸುತ್ತೇನೆಂಬ ಸಙ್ಕಲ್ಪವಿಲ್ಲದುದು, ಇಂತಹ **ಗುಣಾದಿಕಂ** - ಸರ್ವೇಶ್ವರನ ಕಲ್ಯಾಣಗುಣಗಳೇ ಮೊದಲಾದವು, ಇಲ್ಲಿ ಆದಿಶಬ್ದದಿಂದ ದಿವ್ಯಮಙ್ಗಳ ವಿಗ್ರಹವೂ ಹೇಳಲ್ಪಟ್ಟಿತು, ನ್ಯಾಸವಿದ್ಯೆಗೆ ಉಪಯೋಗವಾಗಿರುವದರಿಂದ ಆ ನ್ಯಾಸವಿದ್ಯಾಪ್ರಮಾಣ ಸಿದ್ಧವಾದುದಾಗಿ, **ಶರಣ್ಯಸ್ಯ ವಿಶೇಷಣಂ** - ಸರ್ವ ಶರಣ್ಯನಾದ ಭಗವಂತನಿಗೆ ವಿಶೇಷಣವೆಂಬುದು, **ಇಷ್ಟಂ ಹಿ** - ಎಲ್ಲರಿಗೂ ಇಷ್ಟವಾದುದಷ್ಟೇ ಸರ್ವೇಶ್ವರನ ಕಲ್ಯಾಣಗುಣಗಳು ಅಚೇತನಗಳು; ಹಾಗೆ ಅಚೇತನವಾದುದರಿಂದ ಒಂದು ವೇಳೆ ಭರನ್ಯಾಸ ಮಾಡಿದರೆ, ಲಕ್ಷ್ಮಿಯು ಹಾಗೆ ಭರಸ್ವೀಕಾರ ಮಾಡಲೂ ಶಕ್ತಿಯಿಲ್ಲವು, ರಕ್ಷಿಸುತ್ತೇನೆಂದು ಸಙ್ಕಲ್ಪಿಸಲೂ ಲಾರದು. ಆದರೂ ಸ್ವಾಮಿಯ ಭರಸ್ವೀಕಾರ ರಕ್ಷಾಸಙ್ಕಲ್ಪಗಳಿಗೆ ಬಹಳ ಉಪಯುಕ್ತಗಳಾದವಾದುದರಿಂದ ಕಲ್ಯಾಣಗುಣ ದಿವ್ಯಮಙ್ಗಳ ವಿಗ್ರಹಗಳನ್ನು ವಿಶೇಷಣಗಳೆಂದು ಭಾವಿಸುವದು ನಿಮಗೆ ತುಂಬಾ ಇಷ್ಟವು. ಆದರೆ ಲಕ್ಷ್ಮಿಯು ಚೇತನವಾಗಿ ಭರಸ್ವೀಕಾರ ಮಾಡುವ ಯೋಗ್ಯತೆಯೂ, ರಕ್ಷಾಸಙ್ಕಲ್ಪಯುಕ್ತಳಾಗಲು ಯೋಗ್ಯತೆಯೂ, ಸಹ ಇದ್ದರೂ ವಿಶೇಷಣವೆಂದು ಹೇಳಲು ಏಕೆ ನಿಮಗೆ

ಇಷ್ಟವಿಲ್ಲವು ? ಎಂಬ ಭಾವವು ಭರನ್ಯಾಸಕಾರವೆಂದರೆ "ಹೇಗಾದರೂ ಮಾಡಿ ನೀವು ನನಗೆ ಉಪಾಯವಾಗಿ ಉದ್ಧಾರಮಾಡಬೇಕು" ಎಂಬ ಪ್ರಾರ್ಥನೆಯಲ್ಲಿ, "ಭವೇಯಂ ಶರಣಂ ಹಿವಃ" (ರಾಮಾ ಸುಂದರ ಕಾಂಡ) "ನಿಮಗೆ ನಾನು ಉಪಾಯವಾಗುವೆನು" ಎಂಬ ಲಕ್ಷ್ಮಿಯ ಅಭಯಪ್ರದರೂಪ ಪ್ರತ್ಯುತ್ತರವು. ಗುಣಾದಿಗಳೇ ವಿಶೇಷಣವಾದರೆ, ಲಕ್ಷ್ಮಿಯು (೧) ಚೇತನವು, (೨) ಭರನ್ಯಾಸಕಾರ ಮಾಡಲು ಅರ್ಹಳು ; (೩) ರಕ್ಷಾ ಸಙ್ಕಲ್ಪ ಮಾಡತಕ್ಕವಳು; ಹೀಗಿರುವದರಿಂದ ಕೈಮುತಿಕ ನ್ಯಾಯಪ್ರಕಾರ ಆಕೆಯೂ ವಿಶೇಷಣವೇ ಎಂಬುದರಲ್ಲಿ ಸಂದೇಹ ವಿಲ್ಲವೆಂಬ ತಾತ್ಪರ್ಯವು. ಭಗವಂತನ ಈ ಕಲ್ಯಾಣಗುಣಗಳು ಹೇಗೆ ಉಪಯುಕ್ತ ಗಳಾದವು ಎಂದರೆ :—ಭಗವಂತನ (೧) ಜ್ಞಾನವು ತನ್ನ ಆಶ್ರಿತರ ಗುಣದೋಷಗ ಳನ್ನೂ ಆಶ್ರಿತ ಅನಾಶ್ರಿತರೆಂದೂ ವಿವೇಚನೆ ಮಾಡುವದಕ್ಕೂ ಉಪಯುಕ್ತವು. ಹಾಗೆಯೇ (೨) ಶಕ್ತಿಯು, ಆಶ್ರಿತರ ದೋಷಗಳನ್ನು ಹೋಗಲಾಡಿಸುವದರಲ್ಲೂ, (೩) ಕರುಣೆಯು, ಆಶ್ರಿತನ ದುಃಖಗಳಿಂದ ಬಿಡಿಸುವದರಲ್ಲೂ, (೪) ಕ್ಷಮಾ, ಅಪ ರಾಧ ಸಹನೆಯಲ್ಲೂ, (೫) ಸೌಶೀಲ್ಯವು, ತಾನು ಸರ್ವ ಶ್ರೇಷ್ಠನೆಂದು ಆಶ್ರಿತನಿಗೆ ವಿಮುಖನಾಗದೇ ಸುಮುಖನಾಗುವದಕ್ಕೂ (೬) ವಾತ್ಸಲ್ಯವು, ದೋಷಗಳನ್ನು ಪರಿಗಣಿಸದೇ ಇರುವದಕ್ಕೂ (೭) ಸ್ವಾಮಿತ್ವವು, ತನ್ನ ದಾಸನನ್ನು ಹೇಗಾದರೂ ಮಾಡಿ ರಕ್ಷಿಸಿಯೇ ಬಿಡಬೇಕೆಂಬ ಸಙ್ಕಲ್ಪಕ್ಕೂ, ಹೀಗೆ ಉಪಯುಕ್ತವಾದವುಗಳು ಹಾಗೆಯೇ ದಿವ್ಯಮಙ್ಗಳ ವಿಗ್ರಹಕ್ಕೂ (೧) ಭಕ್ತಜನಾಕರ್ಷಣ (೨) ಮನಸ್ಸಂ ಸಂಪ್ರೀಣನ (೩) ಕೈಙ್ಕರ್ಯಪರಿಗ್ರಹಣ (೪) ಏಕಾಂತಿಕ ಭಕ್ತಿಜನನವೇ ಮೊದ ಲಾದ ಉಪಯೋಗಗಳುಂಟು

ಹೀಗೆ ವಿಶೇಷಣತ್ವವನ್ನು ಲಕ್ಷ್ಮಿಗೆ ಉಪಪಾದಿಸಿ, ಹಾಗೆ ವಿಶೇಷಣವೆಂದು ಹೇಳದರೆ ನಿಮಗೆ ವಿಪ್ರತಿಪತ್ತಿ, ವಿರೋಧನೇನೆಂದು ಈ ಎರಡನೆಯ ಶ್ಲೋಕದಲ್ಲಿ ಹೇಳುತ್ತಾರೆ, ಲಕ್ಷ್ಮಿಯು ಸರ್ವೇಶ್ವರನಿಗೆ ಸಹಧರ್ಮಚರೀ, ಯಾವಾಗಲೂ ಆತ ನೊಂದಿಗೆ ಇದ್ದು ಆತನ ಎಲ್ಲಾ ದಿವ್ಯ ಚೇಷ್ಟಿತಗಳಲ್ಲೂ ಸಹಾಯಭೂತಳು ಈ ಲೀಲಾವಿಭೂತಿಯಲ್ಲಿ ಇಬ್ಬರೂ ಸೇರಿ ಸರ್ವವ್ಯಾಪಾರಗಳನ್ನೂ ನಡೆಸಿ ಆನಂದಿಸು ವವರು; ಹೀಗಿರುವಾಗ ಲಕ್ಷ್ಮಿಯು ವಿಶೇಷಣವೆಂದು ಹೇಳಲು ನಿಮಗೆ ತೊಂದರೆ ಏನು ? ಎಂದು ಕೇಳುತ್ತಾರೆ.—

ಸರ್ವ ಕರ್ಮಸು - ಜಗತ್ತಿನ ಸೃಷ್ಟಿಸ್ಥಿತಿ ಲಯಾದಿ ಸಮಸ್ತ ಲೀಲಾ ಕರ್ಮ ಗಳಲ್ಲೂ, ಮೋಕ್ಷೋಪಾಯವಾದ ವಿದ್ಯೆಯಿಂದ ವೇದ್ಯನಾಗುವದೂ ಸರ್ವಫಲಗ ಳನ್ನು ಕೊಡುವದೂ ಹೀಗೆ ಎಲ್ಲಾ ಕರ್ಮಗಳಲ್ಲೂ, ಏಕರಸ್ಯ ಜುಷೋಃ- ಇಬ್ಬರಿಗೂ ಒಂದೇ ವಿಧವಾದ ಭೋಗ, ಆನಂದಗಳುಳ್ಳ, ಶೇಷಿದಂಪತ್ಯೋಃ - "ದ್ವಾಪ

**ಐಕರಸ್ಯ ಜುಷೋಶ್ಯೇಷಿ ದಂಪತ್ಯೋಸ್ಸರ್ವಕರ್ಮಸು**
**ವಿಶೇಷಣ ವಿಶೇಷ್ಯತ್ವಂ ಶ್ರುತಂ ಕಸ್ಮಾನ್ನರೋಚತೇ ॥೨೪॥**

**ಸದ್ಯೈಕಶೇಷಿ**" ಎಂದು ಹೇಳಿರುವ ಹಾಗೆ ಲೋಕಕ್ಕೆಲ್ಲಾ ಶೇಷಿಗಳಾಗಿರುವ ಲೋಕದಂಪತಿಗಳಿಗೆ, **ವಿಶೇಷಣ ವಿಶೇಷ್ಯತ್ವಂ** ಸರ್ವೇಶ್ವರನು ವಿಶೇಷ್ಯವು, ಲಕ್ಷ್ಮಿಯು ಆತನಿಗೆ ವಿಶೇಷಣವು ಎಂಬ ಭಾವವು, **ಶ್ರುತಂ** - ದ್ವಯದ ಶ್ರೀವ್ಯಚ್ಛಬ್ದದಲ್ಲಿ ನಾವು ಹಿಂದೆ ಉಪಪಾದಿಸಿದ ರೀತಿಯಲ್ಲಿ ವ್ಯಕ್ತವಾಗಿ ಹೇಳಲ್ಪಟ್ಟದ್ದರೂ ಅಥವಾ ಶ್ರುತಿಯಿಂದ ವ್ಯಕ್ತವಾಗಿದ್ದರೂ, ಅದು **ಕಸ್ಮಾತ್** - ಏನು ಕಾರಣದಿಂದ, **ನರೋಚತೇ** – ಇಷ್ಟವಾಗುವದಿಲ್ಲವು ? ಇಷ್ಟವಿದ್ದಹಾಗೆ ಒಪ್ಪಿಕೊಳ್ಳುವೆವು ಎಂದು ಹೇಳಲು ಸಾಧ್ಯವಿಲ್ಲವು, ಏಕೆಂದರೆ, **ಶ್ರುತಂ** - ದ್ವಯಮಂತ್ರದಲ್ಲಿ ಪ್ರಮಾಣರೂಪೇಣ ಹೇಳಲ್ಪಟ್ಟಿರುತ್ತದೆ ; ಮತುಪ್ ಪ್ರತ್ಯಯವು ವಿಶೇಷಣವೆಂದು ಉಪ್ಪ್ಯಾಪಿಸುತ್ತಿರುವಾಗ, ನಿಮಗೆ ವಿಶೇಷಣವೆಂದು ಒಪ್ಪಿಗೆ ಇಲ್ಲದುದು ತುಂಬಾ ಆಶ್ಚರ್ಯವು **ಕಸ್ಮಾನ್ನರೋಚತೇ ?** ಯಾವ ಕಾರಣದಿಂದವೆಂದು ಆಲೋಚಿಸಿದರೂ ತೋರಿಬರುವದಿಲ್ಲವು. ಏನು, (೧) ಪ್ರಮಾಣವಿಲ್ಲದುದರಿಂದಲೇ (೨) ಅಥವಾ ಉಪಾಯೈಕ್ಯಕ್ಕೆ ವಿರೋಧವೆಂಬುದರಿಂದಲೇ (೩) ಅಥವಾ ಲಕ್ಷ್ಮಿಯು ಉಪಯೋಗವಿಲ್ಲದುದರಿಂದಲೇ ಎಂದು ವಿಕಲ್ಪಿಸಿದರೂ, ಇವು ಯಾವ ಕಾರಣಗಳಿಂದಲೂ ವಿಶೇಷಣವಲ್ಲವೆಂದು ತೋರಿಬರುವದಿಲ್ಲವು, ಆದುದರಿಂದ ಇನ್ನು ಯಾವ ಕಾರಣದಿಂದ ನಿಮಗಿದು ಇಷ್ಟವಲ್ಲವೆಂದು ಕೇಳುತ್ತಾರೆ. ಮೊದಲನೆಯ ಕಾರಣದಿಂದಲ್ಲವು, ಏಕೆಂದರೆ, "**ಸಾನೋ ಲೋಕಮಮೃತಂ ದದಾತು**" ಆಕೆಯು ನಮಗೆ ದಿವ್ಯ ವೈಕುಂಠಲೋಕವನ್ನು ಕೊಡಲಿ ಎಂದೂ, "**ಶ್ರಿಯಂ ವಸಾನಾ ಅಮೃತತ್ವಮಾಯನ್**" ಲಕ್ಷ್ಮಿಯನ್ನಾಶ್ರಯಿಸಿದವರು ನಿರತಿಶಯ ಸುಖವನ್ನು ಮೋಕ್ಷವನ್ನು ಹೊಂದಿದರು ಎಂದೂ, "**ಯಾಮಾಲಂಬ್ಯ ಸುಖೇನೈವ ದುಸ್ತರಂ ತ್ರಿಗುಣೋದಧಿಂ । ನಿಸ್ತರಂತ್ಯಚಿರೇಣೈವ ವ್ಯಕ್ತಂ ಧ್ಯಾನ ಪರಾಯಣಾಃ**" ಲಕ್ಷ್ಮಿಯನ್ನಾಶ್ರಯಿಸುವದರಿಂದ ಸುಖವಾಗಿ ಈ ಸಂಸಾರಸಾಗರವನ್ನು ದಾಟುವರು ಎಂದೂ, "**ಅಮೃತಾವಹಾ**" ಮೋಕ್ಷದಾಯಕಳೆಂದೂ, "ವಿಮುಕ್ತಿ ಫಲದಾಯಿನೀ" ಎಂದೂ, "**ಭೋಗದಾ ಮುಕ್ತಿದಾಯಿನೀ**" "**ಸ್ವಧಯಾತದೇಕಂ**" ಇತ್ಯಾದ್ಯನೇಕ ಪ್ರಮಾಣಗಳಿರುತ್ತವೆ ಎರಡನೆಯ ಕಾರಣವೂ ಅಲ್ಲವು; ಲಕ್ಷ್ಮಿಯು ವಿಶೇಷಣವಾದರೆ ಉಪಾಯೈಕ್ಯಕ್ಕೆ ತೊಂದರೆ ಬಂದರೆ, ಸರ್ವೇಶ್ವರನ ಕಲ್ಯಾಣಗುಣಗಳೂ ಆ ಕಾರಣದಿಂದ ವಿಶೇಷಣವಲ್ಲವೆಂದು ಹೇಳಬೇಕಾಗುತ್ತದೆ. **ಮೂರನೆಯದೂ ಅಲ್ಲವು, ಏಕೆಂದರೆ,**

**ಪ್ರತರ್ದನಾದಿ ವಿದ್ಯಾಸು ವೇದ್ಯೇಪಿ ಪರಮಾತ್ಮನಿ ।**
**ಅಚೇತನ ವದಿಚ್ಛಾಮ ಶ್ಚೇತನಂಚ ವಿಶೇಷಣಮ್ ॥೨೫॥**

ಲಕ್ಷ್ಮಿಯ ಉಪಯೋಗವು ಆ ಮೇಲಿನ ಪ್ರಮಾಣಗಳಿಂದಲೇ ವ್ಯಕ್ತವು. ಆದುದರಿಂದ ನಮ್ಮ ಬುದ್ಧಿಗೆ ತೋಚಿದಹಾಗೆ ಯಾವ ಕಾರಣವೂ ತೋರಬರುವದಿಲ್ಲವು, ಹೀಗಿರುವಾಗ ನಿಮಗೇಕೆ ಇಷ್ಟವಿಲ್ಲವೋ ತಿಳಿಯದು ಎಂಬ ತಾತ್ಪರ್ಯವು

ಲಕ್ಷ್ಮಿಯನ್ನೂ ಗುಣಗಳಹಾಗೆಯೇ ವಿಶೇಷಣವೆಂದೇ ಒಪ್ಪಿಕೊಳ್ಳಬಹುದು. ಆದರೆ ಚೇತನಗಳು ವಿಶೇಷಣವೆಂಬ ಎಲ್ಲಿಯೂ ಕಾಣಲಿಲ್ಲವು ಎಂದು ಪ್ರತಿಕಕ್ಷಿಯಿಂದ ಆಕ್ಷೇಪ ಬಂದೀತೆಂದು ಭಾವಿಸಿ, ಚೇತನವೂ ವಿಶೇಷಣವಾಗಿರುವದಕ್ಕೆ ದೃಷ್ಟಾಂತವನ್ನನುಗ್ರಹಿಸುತ್ತಾರೆ :—**ಪ್ರತರ್ದನಾದಿ ವಿದ್ಯಾಸು** – ಕೌಷೀತಕೀ ಬ್ರಾಹ್ಮಣದಲ್ಲಿ ಹೇಳಿರುವ ಪ್ರತರ್ದನ ವಿದ್ಯೆಯೇ ಮೊದಲಾದವುಗಳಲ್ಲಿ, ಇಲ್ಲಿ ಆದಿ ಪದದಿಂದ ರುದ್ರಾಂತರ್ಯಾಮಿಯಾದ ಪರಮಾತ್ಮೋಪಾಸನವೇ ಮೊದಲಾದವು ಹೇಳಲ್ಪಟ್ಟವು, **ಪರಮಾತ್ಮನಿ** - ಪರಮಾತ್ಮನೇ, **ವೇದ್ಯೇಪಿ** - ವಿಶೇಷ್ಯವಾಗಿ ಉಪಾಸ್ಯನಾಗಿದ್ದರೂ, **ಅಚೇತನವತ್** - ಅಚೇತನವಾದ ಪ್ರಾಣದ ಹಾಗೆ, (ಅಂತರಾದಿತ್ಯ ವಿದ್ಯೆಗಳಲ್ಲಿ ಹೇಗೋ ಹಾಗೆಯೂ) **ಯಥಾ ವಿಶೇಷಣಂ** - ಹೇಗೆ ವಿಶೇಷಣವೋ ಹಾಗೆ, **ಚೇತನಂ ಚ** - ಚೇತನನಾದ ಇಂದ್ರನೂ ಕೂಡ ವಿಶೇಷಣವು ಹೀಗಿರುವಲ್ಲಿ ಚೇತನಳಾದ ಲಕ್ಷ್ಮಿಯೂ ಕೂಡ ವಿಶೇಷಣವೆಂದು ಹೇಳುವದರಲ್ಲಿ ಬಾಧಕವೇನು ? ಎಂಬ ತಾತ್ಪರ್ಯವು. ಈ ಶ್ಲೋಕಾಭಿಪ್ರಾಯವು ಏನೆಂದರೆ —ಪ್ರತರ್ದನರೆಂಬುವರು ಇಂದ್ರನಲ್ಲಿಗೆ ಹೋಗಿ ತನಗೆ ಅತ್ಯಂತ ಹಿತವಾದುದು ಯಾವುದು ಎಂದು ಪ್ರಾರ್ಥಿಸಲಾಗಿ ಅದಕ್ಕೆ ಇಂದ್ರನು "**ಸಹೋವಾಚ ಪ್ರಾಣೋಽಸ್ಮಿ ಪ್ರಜ್ಞಾತ್ಮಾ ತಂ ಮಾ ಮಾಯುರಮೃತ ಮಿತ್ಯುಪಾಸ್ವ**" ನಾನೇ ಪ್ರಾಣ ಶಬ್ದವಾಚ್ಯನು, ನಾನೇ ಅಮೃತವೆಂದು ಉಪಾಸನೆ ಮಾಡು, ಎಂದು ಹೇಳಿದನು ಇಲ್ಲಿ ಪ್ರಾಣಶಬ್ದವಾಚ್ಯನು ಇಂದ್ರನಲ್ಲವು, ತಚ್ಛರೀರಕ ಪರಮಾತ್ಮನು, ಏಕೆಂದರೆ ಮುಂದೆ "**ಸ ಏಷ ಪ್ರಾಣ ಏವ ಪ್ರಜ್ಞಾತ್ಮಾನನ್ದೋಽಜರಃ**" ಎಂದು ಹೇಳಿರುವದರಿಂದ ಈ ಇಂದ್ರನಿಗೆ ಆನಂದತ್ವ, ಅಜರತ್ವ ಅಮೃತತ್ವಾದಿಗಳು ಇಲ್ಲದುದರಿಂದ ಪರಮಾತ್ಮನೇ ಈ ಪ್ರಾಣಶಬ್ದವಾಚ್ಯನೆಂದು ಹೇಳಲ್ಪಟ್ಟಿರುತ್ತದೆ ಇಲ್ಲಿ ಅಚೇತನವಾದ ಪ್ರಾಣವಿಶಿಷ್ಟನಾದ ಪರಮಾತ್ಮನು ಉಪಾಸ್ಯನೆಂದರೆ ಅಚಿತ್ತಾದ ಪ್ರಾಣವು ವಿಶೇಷಣವಾಯಿತು, ಚೇತನನಾದ ಇಂದ್ರ ವಿಶಿಷ್ಟನಾದ ಪರಮಾತ್ಮನು ಉಪಾಸ್ಯನಾದರೆ ಇಂದ್ರನು ವಿಶೇಷಣವಾಯಿತು,

ಇತ್ಥಂ ಪ್ರಪತ್ತಿ ವಿದ್ಯಾಯಾಂ ತತ್ತನ್ಮಂತ್ರಾನುಸಾರತಃ ।
ವಿಭುಃ ಪತ್ನ್ಯಾ ಗುಣಾದ್ಯೈಶ್ಚ ವಿಶಿಷ್ಟೋ ವಿಷಯೋಽತ್ರ ನಃ ॥೨೬॥

---

ಲಕ್ಷ್ಮೀವಿಶಿಷ್ಟನು ಉಪಾಸ್ಯನಾದರೆ ಲಕ್ಷ್ಮಿಯು ವಿಶೇಷಣವಲ್ಲವೇ? ಎಂಬ ತಾತ್ಪರ್ಯವು. ಇಂದ್ರನು ಪರಮಾತ್ಮನಿಗೆ ಶರೀರವಾಗಿ ಹೇಗೆ ವಿಶೇಷಣವೋ, ಹಾಗೆಯೇ ಲಕ್ಷ್ಮಿಯೂ ವಿಶೇಷಣವು ಆದುದರಿಂದ ಚೇತನವೆಲ್ಲಾ ಸರ್ವೇಶ್ವರನಿಗೆ ವಿಶೇಷಣವೇ ಎಂಬ ಭಾವವು. ಇಂದ್ರನೇ ವಿಶೇಷಣವಾದರೆ ಲಕ್ಷ್ಮಿಯು ಆಗಕೂಡದೇ? ಹಾಗೆ ವಿಶೇಷಣವೆಂದು ಹೇಳುವುದರಲ್ಲಿ ಯಾವ ಬಾಧಕವೂ ಇಲ್ಲವು. ವಿಶೇಷಣವಲ್ಲವೆಂದರೆ ಶಾಸ್ತ್ರಪ್ರಮಾಣಕ್ಕೆ ಬಾಧಕವು ಎಂಬ ತಾತ್ಪರ್ಯವು.

ಈ ಶ್ಲೋಕದಿಂದ ತಮ್ಮ ಸಿದ್ಧಾಂತರೂಪಾಭಿಪ್ರಾಯವನ್ನು ತಿಳಿಸುತ್ತಾರ:- **ಇತ್ಥಂ** - ಹೀಗೆ ಎಂದರೆ ಶ್ರುತದರ್ಶನಾದಿ ವಿದ್ಯಾ ದೃಷ್ಟಾಂತ ಕೊಟ್ಟು ಉಪಪಾದಿಸಿದ ರೀತಿಯಲ್ಲಿ, ಅಥವಾ **ಇತ್ಥಂ** - ಪೂರ್ವಪಕ್ಷಗಳಿಗೆಲ್ಲಾ ಹೀಗೆ ಸಮಂಜಸಗಳಾದ ಸಮಾಧಾನವನ್ನು ಹೇಳಿದ ನಂತರ, **ಪ್ರಪತ್ತಿ ವಿದ್ಯಾಯಾಂ** - ಈ ನ್ಯಾಸವಿದ್ಯೆಯಲ್ಲೂ ಕೂಡ, **ತತ್ತನ್ಮಂತ್ರಾನುಸಾರತಃ** - ಆಯಾಯಾ ಮಂತ್ರಗಳನ್ನನುಸರಿಸಿ, **ವಿಭುಃ** - ಸರ್ವೇಶ್ವರನು, **ಪತ್ನ್ಯಾ** - ಪತ್ನಿಯಾದ ಲಕ್ಷ್ಮಿಯಿಂದಲೂ, **ಗುಣಾದ್ಯೈಶ್ಚ** -ಸ್ವಾಶ್ರಯಕ್ಕೆ ಉಚಿತಗಳಾದ ಸ್ವಾತಂತ್ರ್ಯ ಕರುಣಾ ಸೌಲಭ್ಯ ಸೌಶೀಲ್ಯಾದಿಗಳಿಂದಲೂ ಸಹ, ಇಲ್ಲಿ ಆದಿಪದದಿಂದ ದಿವ್ಯಮಂಗಳ ವಿಗ್ರಹ ಯುಕ್ತತೆಯು ಹೇಳಲ್ಪಟ್ಟಿತು, **ವಿಶಿಷ್ಟ ಏವ** - ಸೇರಿದವನಾಗಿಯೇ, **ನಃ** - ಪ್ರಪನ್ನರಾದ ನಮಗೆಲ್ಲಾ, **ಅತ್ರ** - ಈ ಉಪಾಯವಾಗಿರುವ ಸಂದರ್ಭದಲ್ಲಿ, **ವಿಷಯಃ** - ವಿಷಯನು. ಲಕ್ಷ್ಮೀವಿಶಿಷ್ಟನಾಗಿಯೂ, ಕಲ್ಯಾಣಗುಣ ದಿವ್ಯಮಂಗಳ ವಿಗ್ರಹಗಳಿಂದ ವಿಶಿಷ್ಟನಾಗಿಯೂ ಇರುವ ಸರ್ವೇಶ್ವರನೇ ನಮಗೆ ಸಿದ್ಧೋಪಾಯನು ತತ್ತನ್ಮಂತ್ರಾನುಸಾರತಃ ಎಂದು ಹೇಳಿರುವುದರಭಿಪ್ರಾಯವೇನೆಂದರೆ, "ಓಮಿತ್ಯಾತ್ಮಾನಂ ಯುಂಜೀತ" ಎಂಬುವು ಕರಣಮಂತ್ರವಾದರೆ, ಅದರಲ್ಲಿರುವ ಪ್ರಣವದ ಉಕಾರವು ಲಕ್ಷ್ಮೀವಾಚಕವಾಗಿ, ಅಕಾರ ಉಕಾರ ವಾಚ್ಯರಾದ ಲೋಕದಂಪತಿಗಳಿಗೆ ಈ ಆತ್ಮಹವಿಸ್ಸಿನ ಸಮರ್ಪಣವೆಂದೂ, ಮೂಲಮಂತ್ರವಾದರೆ ಲಕ್ಷ್ಮೀನಾರಾಯಣರಿಗೆ ಎಂದೂ, ದ್ವಯವಾದರೆ ಕಂಠೋಕ್ತವಾಗಿ ಹೇಳಲ್ಪಟ್ಟಿರುವ ಲಕ್ಷ್ಮೀನಾರಾಯಣರಿಗೆ ಎಂದೂ, ಹೀಗೆಯೇ ಇತರ ಮಂತ್ರಗಳಲ್ಲಿಂದೂ ತಿಳಿಯತಕ್ಕದ್ದೆಂಬ ಭಾವವು. ಆದರೆ ಚರಮಶ್ಲೋಕದಲ್ಲಿ "ಮಾಮೇಕಂ ಶರಣಂ ವ್ರಜ" ಇದೆಯಲ್ಲಾ ಎಂದರೆ ಇಲ್ಲಿಯೂ ಲಕ್ಷ್ಮಿಯು ಅನಾವಶ್ಯಕವೆಂದಲ್ಲವು.

**ಇಙ್ಙು ಕೇವಲ ಕುತರ್ಕಙ್ಙಳೈಯಿಟ್ಟು ಪ್ರಮಾಣಙ್ಙಳೈ ಬಾಧಿಕ್ಕಲಾಗಾದೆನ್ರು ಇದಂ ಮುನ್ನೇ ಶೊನ್ನೋಮ್**

---

**ಮಾಮೇಕಂ** ಎಂದರೆ ಮಾಂ ಲಕ್ಷ್ಮ್ಯಾ ಸಹ ಏಕಂ ಎಂದು ಇಟ್ಟುಕೊಳ್ಳಬೇಕು ಶ್ರುತಿಪ್ರಯೋಗವೇ ಹಾಗೆ **ಸ್ವಧಯಾ ತದೇಕಂ**-ಲಕ್ಷ್ಮಿಯೊಂದಿಗೆ ಪರಬ್ರಹ್ಮನು ಒಬ್ಬನೇ ಎಂದು ಶ್ರುತಿಯು ಲಕ್ಷ್ಮೀವಿಶಿಷ್ಟತೆಯನ್ನು ಪ್ರತಿಪಾದಿಸಿರುತ್ತದೆ. ಇದನ್ನನುಸರಿಸಿಯೇ ಜ್ಞಾನನಿಧಿಗಳಾದ ಶ್ರೀ ವ್ಯಾಸಮಹರ್ಷಿಯೂ "**ಏಕಾಕೀ ವಿದ್ಯಯಾ ಸಾರ್ಧಂ**" ಎಂದು ಮೋಕ್ಷಧರ್ಮದಲ್ಲೂ, **ಮಾಮೇಕಂ ಶ್ರಿಯಾಯುಕ್ತಂ**" ಎಂದು ಪಾದ್ಮಪುರಾಣದಲ್ಲೂ, ಪ್ರಯೋಗಿಸಿರುತ್ತಾರೆ ಹೀಗೆ ಲಕ್ಷ್ಮಿಗೆ ಪರಮಾತ್ಮನೊಂದಿಗೆ ಸದಾ ನಿತ್ಯಯೋಗವಿರುವದರಿಂದ ಶ್ರುತಿಯಲ್ಲಿ ಅನೇಕ ಕಡೆಗಳಲ್ಲಿ ನಾರಾಯಣನೊಬ್ಬನೇ ಹೇಳಲ್ಪಟ್ಟಿರುವದರಿಂದ "**ತದಂತರ್ಭಾವಾತ್ ತ್ವಂ ನಪೃಥಗಭಿದತ್ತೇಶ್ರುತಿರಪಿ**" ಎಂದು ಪರಾಶರಭಟ್ಟರವರು ಹೇಳಿರುತ್ತಾರೆ.

ಇಷ್ಟು ದೂರ ಉಪಪಾದಿಸಿ ಹೇಳಿದುದನ್ನು ನಿಗಮನಮಾಡಿ ಹೇಳುತ್ತಾರೆ:- ಮೇಲೆ ಹೀಗೆಲ್ಲಾ ಪೂರ್ವಪಕ್ಷಗಳನ್ನು ತಂದವರಿಗೆ ಒಂದು ಬುದ್ಧಿವಾದವನ್ನು ಹೇಳುತ್ತಾರೆ ಪ್ರಮಾಣಗಳಿಗೆ ಪ್ರಾಮುಖ್ಯವನ್ನು ಕೊಟ್ಟು ವಾದಗಳನ್ನು ದೂರ ಮಾಡತಕ್ಕದ್ದು ನ್ಯಾಯವು ಎಂದು ಹೇಳುತ್ತಾರೆ **ಇಙ್ಙು** - ಈ ಸಂದರ್ಭದಲ್ಲಿ, **ಕೇವಲ ಕುತರ್ಕಙ್ಙಳೈ ಯಿಟ್ಟು** - ಶಾಸ್ತ್ರಪ್ರಮಾಣವನ್ನನುಸರಿಸದ ಬರೀ ತರ್ಕಗಳ ಮೂಲಕವಾಗಿ, **ಪ್ರಮಾಣಙ್ಙಳೈ** - ಮುಖ್ಯವಾಗಿ ಇಲ್ಲಿ ಶಾಸ್ತ್ರ ಪ್ರಮಾಣಗಳನ್ನು **ಬಾಧಿಕ್ಕಲಾಗಾದು** - ನಿರಸನ ಮಾಡಕೂಡದೆಂಬುವದನ್ನು, **ಮುನ್ನೇ ಶೊನ್ನೋಮ್** - ಹಿಂದೆಯೇ ಹೇಳಿದೆವು. "**ನಹಿ ವಚನ ವಿರೋಧೇ ನ್ಯಾಯಃಪ್ರವರ್ತತೇ**" ಎಂದು ಹೇಳಿರುವಹಾಗೆ ಪ್ರಮಾಣಕ್ಕೆ ವಿರೋಧವಿರುವಾಗ ವಾದಕ್ಕೆ ಅವಕಾಶವಿಲ್ಲವು ಶ್ರೀ ವ್ಯಾಸಮಹರ್ಷಿಯೂ ತರ್ಕಾ **ಪ್ರತಿಷ್ಠಾನಾತ್** ಎಂಬ ಸೂತ್ರದಲ್ಲಿ ಹೀಗೆಯೇ ಹೇಳಿರುತ್ತಾರೆ, ಈ ಅಭಿಪ್ರಾಯವನ್ನು ಹಿಂದೆ ತತ್ತ್ವತ್ರಯಾಧಿಕಾರದಲ್ಲಿ "**ವೃಥಾ ನಿರ್ಬಂಧವಾಗಾದು**" ಎಂದು "**ತರ್ಕಪಾಂಡಿತ್ಯತ್ತಾಲೆ ನಿನೈತ್ತದೆಲ್ಲಾಮ್ ಸಾಧಿಕ್ಕಲಾ ಇರುಕ್ಕ ಚೆಯ್ದೇ ಇರೇ, ನಾಮ್ ಪ್ರಮಾಣ ಶರಣರಾಯ್ಪ್ಪೋರುಗಿರದು**" ಎಂದೂ ಹೇಳಿರುತ್ತಾರೆ ೬೦-ನೆಯ ಪುಟಗಳನ್ನು ಪರಾಂಬರಿಸಿ ಉಪಾಯದ್ವಿತ್ವ ಪ್ರಸಂಗವೂ, ವಿಶೇಷಣದಿಂದ ವಿಶೇಷ್ಯಕ್ಕೆ ಅತಿಶಯ ಹಾನಿಯೂ, ಇತ್ಯಾದಿ ಆಕ್ಷೇಪಗಳನ್ನು ತರುವದು ಯುಕ್ತವಲ್ಲವೆಂಬ ಭಾವವು

ಆಗ್ಗೈಯಾಲ್ ಯಥಾಪ್ರಮಾಣಮ್ ಶರಣ್ಯಾಭಿಪ್ರಾಯಾನುಗುಣ ಮಾಗ ವಿಶಿಷ್ಟಮುಮ್ ಉಪೇಯಮಾನಾರ್ಪೋಲೆ, ವಿಶಿಷ್ಟಮುಮ್ ಉಪಾಯಮಾಗಕ್ಕುರೈಯಿಲ್ಲೈ.

**ಉಪಾಯ ದ್ವಿತ್ವವಾದ ನಿರಾಸಃ**

ಗುಣ ವಿಶೇಷ ವಿಗ್ರಹ ವಿಶೇಷಾದಿ ವಿಶಿಷ್ಟಮಾನ ಏಕಮ್ ಉಪಾಯ ಮಾನಾರ್ಪೋಲೆ ತುಲ್ಯಯೋಗಕ್ಷೇಮಮಾನ ಶ್ರೀಮಚ್ಛಬ್ದತ್ತಿಲ್ ಶೋ

---

**ಆಗ್ಗೈಯಾಲ್** - ಆದುದರಿಂದ, **ಯಥಾಪ್ರಮಾಣಮ್** - ಈಗ ನಾವು ಉದಾಹರಿಸಿದ ಅನೇಕ ಪ್ರಮಾಣಗಳನ್ನನುಸರಿಸಿ, **ಶರಣ್ಯಾಭಿಪ್ರಾಯಾನು ಗುಣಮಾಗ** ಅಂತಹ ಶಾಸ್ತ್ರಪ್ರಮಾಣಗಳಲ್ಲಿ ತೋರಿಬರುವ ಸರ್ವಶರಣ್ಯನಾದ ಸರ್ವೇಶ್ವರನ ಅಭಿಪ್ರಾಯಕ್ಕನುಗುಣವಾಗಿ, **ವಿಶಿಷ್ಟಮ್ ಉಪೇಯಮಾನಾ ರ್ಪೋಲೇ** - ಲಕ್ಷ್ಮೀ ವಿಶಿಷ್ಟ ನಾರಾಯಣನೇ ಉಪೇಯನೆಂದು ಹೇಳುವ ಹಾಗೆ, **ವಿಶಿಷ್ಟಮುಮ್ ಉಪಾಯಮಾಗಕ್ಕುರೈಯಿಲ್ಲೈ** - ಲಕ್ಷ್ಮೀ ವಿಶಿಷ್ಟನೇ ಉಪಾಯವೆಂಬುದರಲ್ಲಿ ಏನೊಂದೂ ನ್ಯೂನತೆಯಿಲ್ಲವು ಪರಮಾತ್ಮನು ಯಾವಾಗಲೂ ಲಕ್ಷ್ಮೀ ವಿಶಿಷ್ಟನಾಗಿಯೇ ಇರುತ್ತಾನೆ ಲಕ್ಷ್ಮೀ ವಿಶಿಷ್ಟ ನಾರಾಯಣನೇ ಉಪೇಯವೆಂದೂ ನಿತ್ಯಮುಕ್ತರುಗಳು ನಮ್ಮ ವ ಕೈಙ್ಕರ್ಯಗಳು ಇಬ್ಬರಿಗೂ ಎಂದು ಒಪ್ಪಿಕೊಂಡಿರುತ್ತೀರಿ. ಹಾಗೆಯೇ ಲಕ್ಷ್ಮೀ ವಿಶಿಷ್ಟನಾದ ನಾರಾಯಣನೇ ಉಪಾಯವೆಂದು ಪ್ರಮಾಣಗಳನ್ನನುಸರಿಸಿ ಒಪ್ಪಿಕೊಂಡರೆ ಬಾಧಕವೇನೆಂಬಭಿಪ್ರಾಯವು.

**ಲಕ್ಷ್ಮಿಗೂ ಉಪಾಯತ್ವ ಹೇಳಿದರೆ, ಉಪಾಯ ದ್ವಿತ್ವವೆಂಬ ವಾದದ ನಿರಾಸವು.**

ಲಕ್ಷ್ಮಿಗೂ ಉಪಾಯತ್ವದಲ್ಲಿ ಅನ್ವಯ ಉಂಟೆಂದರೆ, ಉಪಾಯದ್ವಿತ್ವ ಪ್ರಸಂಗವುಂಟಾಗುವದಿಲ್ಲವೇ ? ಆದುದರಿಂದ ಲಕ್ಷ್ಮಿಗೆ ಉಪಾಯತ್ವವು ಕೂಡುವದಿಲ್ಲವು, ಏಕಾಂತ್ಯಕ್ಕೂ ಹಾನಿಯು ಎಂದು ಪೂರ್ವಪಕ್ಷವನ್ನು ತರಬಹುದು; ಅದನ್ನು ಖಂಡಿಸುತ್ತಾರೆ **ಗುಣವಿಶೇಷ** - ಆಶ್ರಯಕ್ಕೆ ಯೋಗ್ಯವಾದ ಗುಣ ವಿಶೇಷಗಳಿಂದಲೂ, **ವಿಗ್ರಹವಿಶೇಷಾದಿ ವಿಶಿಷ್ಟಮಾನ** - ದಿವ್ಯ ಮಙ್ಗಳ ವಿಗ್ರಹವೇ ಮೊದಲಾದವುಗಳಿಂದಲೂ ಸೇರಿರುವ, **ಏಕಮ್** - ಒಬ್ಬನಾದ ಪರ ಮಾತ್ಮನು **ಉಪಾಯ ಮಾನಾರ್ಪೋಲೆ** - ನಮ್ಮಭಿಪ್ರಾಯಪ್ರಕಾರ ಉಪಾಯ ವಾದಹಾಗೆಯೇ **ತುಲ್ಯಯೋಗಕ್ಷೇಮಮಾನ**- ಪರಸ್ಪರ ವಿರೋಧವಿಲ್ಲದೆ ಸಮಾನ

**ತ್ತಿನ ನಿತ್ಯಪತ್ನೀ ಸಂಬಂಧ ವಿಶಿಷ್ಟನಾನಾಲುಮ್ ಉಪಾಯೈಕ್ಯತ್ತುಕ್ಕು ಕ್ಕುರೆ ಯಿಲ್ಲೈ.**

---

ಯೋಗಕ್ಷೇಮ ವಹಿಸಿರುವ ಶ್ರೀಮನ್ನಾರಾಯಣನು **ಶ್ರೀಯುಟ್ಟತ್ತಿಲ್ ತೋತ್ತಿನ** - ಮತುಪ್ ಪ್ರತ್ಯಯದಿಂದ ಯುಕ್ತವಾದ ಶ್ರೀ ಶಬ್ದದಿಂದ ತೋರಿ ಬರುವ, **ನಿತ್ಯಪತ್ನೀ ಸಂಬಂಧ ವಿಶಿಷ್ಟನಾನಾಲುಮ್** - ಸದಾ ಪತ್ನಿಯೊಂದಿಗೇನೇ ಸೇರಿರುವ ಸಂಬಂಧದಿಂದಲೂ ಯುಕ್ತವಾದನೆಂದು ಒಪ್ಪಿದರೂ, **ಉಪಾಯೈಕ್ಯತ್ತುಕ್ಕು**-ಇಬ್ಬರೂ ಸೇರಿ ಒಂದೇ ಉಪಾಯವೆಂಬ ಭಾವನೆಗೆ, **ಕುರೈ ಇಲ್ಲೈ** - ಬಾಧಕವಿಲ್ಲವು. ಲಕ್ಷ್ಮೀ ನಾರಾಯಣರಿಬ್ಬರೂ ಸೇರಿ ಉಪಾಯವು ಎಂದರೆ "ಎತ್ತು ಏರಿಗೆ ಎಳೆಯಿತು, ಕೋಣ ನೀರಿಗೆ ಎಳೆಯಿತು" ಎಂಬ ಹಾಗೆ ಪರಸ್ಪರ ವಿರೋಧ ಉಂಟಾಗಲಾರದೇ? ಲೋಕದಲ್ಲಿ ದಂಪತಿಗಳಿಬ್ಬರೂ ಏಕ ಗೃಹಕೃತ್ಯದಲ್ಲಿದ್ದರೂ ಪರಸ್ಪರೈಕಮತ್ಯವಿಲ್ಲದೆ ಜಗಳವಾಡುವದನ್ನು ಕಂಡಿರುವೆವಲ್ಲಾ, ಎಂದರೆ, ಇಲ್ಲಿ ಇಬ್ಬರೂ ಸರ್ವಜ್ಞರು, "ಅಸ್ಯಾದೇವ್ಯಾ ಮನಸ್ತಸ್ಮಿನ್ ತಸ್ಯ ಚಾಸ್ಯಾಂ ಪ್ರತಿಷ್ಠಿತಂ" (ರಾ ಸುಂ ) ಎಂದು ಆಂಜನೇಯನು ಆಶ್ಚರ್ಯಪಡುವ ಹಾಗೆ ಪರಸ್ಪರ ಇಂಗಿತಜ್ಞರ, ಭಕ್ತರ ಯೋಗಕ್ಷೇಮವನ್ನು ವಹಿಸುವದರಲ್ಲಿ ಇಬ್ಬರೂ ಕಂಕಣಬದ್ಧರು; ಇದನ್ನು ತಿಳಿಸುವದಕ್ಕಾಗಿಯೇ ತುಲ್ಯ ಯೋಗಕ್ಷೇಮ ಮಾನ ಎಂಬ ಪ್ರಯೋಗವು ಆದುದರಿಂದ ಇಬ್ಬರೂ ಸೇರಿಯೇ ಪರಸ್ಪರ ವಿರೋಧವಿಲ್ಲದೆ ಯೋಗಕ್ಷೇಮವನ್ನು ವಹಿಸುವರು. ಈ ಲೋಕದ ದಂಪತಿಗಳಲ್ಲಿ ಪರಸ್ಪರ ವಿರೋಧಕ್ಕೆ ಕಾರಣವು ರಾಜಸ ತಾಮಸ ಗುಣಗಳ ವಿಜೃಂಭಣೆಯು. ಇಂತಹ ಗುಣಗಳ ಸ್ಪೃಕ್ತೇ ಇಲ್ಲದವರಿಗೆ ಪರಸ್ಪರ ವಿರೋಧವೆಲ್ಲಿಯದು ? ಇಲ್ಲಿ ಯೋಗವೆಂದರೆ ತನ್ನ ಪ್ರಾಪ್ತಿ ರೂಪ ಲಕ್ಷಣವುಳ್ಳದ್ದು, ಕ್ಷೇಮವೆಂದರೆ ಪುನರಾವೃತ್ತಿ ಇಲ್ಲದಿರುವ ಶ್ರೇಯಸ್ಸು; ಇವೆರಡನ್ನೂ ಭಕ್ತನಿಗುಂಟುಮಾಡುವದರಲ್ಲಿ ಇಬ್ಬರೂ ಆದರವುಳ್ಳವರು. ಪತ್ನೀಯೋಗವು ಸರ್ವೇಶ್ವರನಿಗೆ ನಿತ್ಯವಾದುದೆಂದು ಶ್ರೀ ಪರಾಶರರು ತಮ್ಮ ಶಿಷ್ಯರಾದ ಮೈತ್ರೇಯರಿಗೆ "ನಿತ್ಯೈವೈಷಾ ಜಗನ್ಮಾತಾ ವಿಷ್ಣೋಃ ಶ್ರೀ ರನಪಾಯಿನೀ । ಯಥಾ ಸರ್ವಗತೋವಿಷ್ಣುಸ್ತಥೈವೇಯಂ ದ್ವಿಜೋತ್ತಮ" (ವಿ ಪು. ೧೮.೧೭) ಎಂಬದಾಗಿ ಉಪದೇಶಿಸಿರುತ್ತಾರೆ. ಹೀಗೆ ಲಕ್ಷ್ಮೀ ವಿಶಿಷ್ಟನಾಗಿಯೇ ಸರ್ವೇಶ್ವರನಿರುತ್ತಾನೆಂಬುದು ಸಿದ್ಧವು ಉಪಾಯತ್ವಕ್ಕೆ ಗುಣವಿಗ್ರಹ ವಿಶಿಷ್ಟತೆಯು ಸರ್ವೇಶ್ವರನಿಗೆ ಅವಶ್ಯಕವು, ಇಲ್ಲವಿದ್ದರೆ ಉಪಾಯತ್ವವೇ ಕೂಡುವದಿಲ್ಲವೆಂದು ನೀವೇ ಅಂಗೀಕರಿಸುತ್ತೀರಿ. ಸರ್ವಜ್ಞತೆ, ಸ್ವಾತಂತ್ರ್ಯ,

**ಉಪಾಯ ವಿಶೇಷಣಙ್ಗಳೈ ಎಲ್ಲಾಮ್ ವಿಟ್ಟು ಉಪಾಯತ್ತೈ ಏಕ ಮಾಕ್ಕವೇಣುಮೆನ್ನಿಲ್ ಉಪಾಯ ತ್ವಮ್ ವಿಶೇಷಣ ಮನ್ರಿಕ್ಕೆ ಪೋಮ್.**

ಕಾರುಣ್ಯ, ಸೌಲಭ್ಯ, ಸೌಶೀಲ್ಯಾದಿಗುಣಗಳ ಮತ್ತು ದಿವ್ಯ ಮಙ್ಗಳ ವಿಗ್ರಹದ ವಿಶಿಷ್ಟತೆಯು ಆವಶ್ಯಕವೆಂದು ಒಪ್ಪಿದರೆ, ಯಾವಾಗಲೂ ಜೊತೆಯಲ್ಲೇ ಲಕ್ಷ್ಮಿಯು ಇರುವದರಿಂದ ಅಂತಹ ಲಕ್ಷ್ಮೀ ವಿಶಿಷ್ಟತೆಯೂ ಆವಶ್ಯಕವೆಂದು ಅಙ್ಗೀಕರಿಸುವದರಲ್ಲಿ ಬಾಧಕವಿಲ್ಲವುದು ಎಂಬು ಹೇಳುತ್ತಾರೆ ಆದರೆ ಭಕ್ತನು ಅನನ್ಯ ಮನಸ್ಕನಾಗಿ ಚಿಂತಿಸಬೇಕಾದ ಐಕಾಂತ್ಯಕ್ಕೆ ಹಾನಿಯುಂಟಾಗುವದಿಲ್ಲವೇ ? ಹೀಗೆ ಉಪಾಯತ್ವದಲ್ಲಿ ಇಬ್ಬರೂ ಇಲ್ಲುವವರಿಂದ ಐಕಾಂತ್ಯಕೂಡುವದಿಲ್ಲವೆಂಬಾಕ್ಷೇಪ ಉಂಟಾಗಬಹುದು. ಇದೂ ಅಲ್ಲದೆ ಚರಮಶ್ಲೋಕದಲ್ಲೂ ಮಾಮೇಕಂ ಶರಣಂ ವ್ರಜ ಎಂದಿರುವದರಿಂದ ಉಪಾಯತ್ವಕ್ಕೆ ಏಕತ್ವಮುಖ್ಯವು, ಇಬ್ಬರಿಗೂ ಅನ್ವಯವು ಕೂಡುವದಿಲ್ಲವೆಂಬಾಕ್ಷೇಪವೂ ಉಂಟಾಗಬಹುದು ಆದುವರಿಂದ ಸರ್ವ ವಿಶೇಷಣಗಳೊಂದೂ ಇಲ್ಲದ ಸರ್ವೇಶ್ವರನೊಬ್ಬನೇ ಉಪಾಯವೆಂದು ಹೇಳಿಬಿಡುವೆವು ಎಂದರೆ ಆಗಲೂ ದೋಷವು ತಪ್ಪಲಿಲ್ಲವೆಂದು ಹೇಳುತ್ತಾರೆ. **ಉಪಾಯ ವಿಶೇಷಣಗಳನ್ನೆಲ್ಲಾ ವಿಟ್ಟು** – ಬಿಟ್ಟು, **ಉಪಾಯತ್ತೈ** – ಉಪಾಯವಾಗಿರುವದನ್ನು, **ಏಕಮಾಕ್ಕ ವೇಣುಮೆನ್ನಿಲ್** - ಒಂದೇಯಾಗಿರಬೇಕಾದರೆ ಉಪಾಯತ್ವವು, **ವಿಶೇಷಣಮನ್ರಿಕ್ಕೆ ಪೋಮ್** - ವಿಶೇಷಣವಿಲ್ಲದೆ ಹೋಗಬೇಕಾಗುತ್ತದೆ. ಕಲ್ಯಾಣಗುಣಗಳೂ ಅದರಲ್ಲಿ ಮುಖ್ಯವಾಗಿ ಆಶ್ರಯೋಚಿತ ಗುಣಗಳೂ ದಿವ್ಯ ಮಙ್ಗಳ ವಿಗ್ರಹವೂ, ಈ ವಿಶೇಷಣಗಳಿಂದ ಯುಕ್ತನಾಗಿರುವ ಸರ್ವೇಶ್ವರನೇ ಉಪಾಯವಾಗಿರಲು ಅರ್ಹನೆಂದೂ, ಈ ವಿಶೇಷಣಗಳಿಲ್ಲದಿದ್ದರೆ ಸರ್ವೇಶ್ವರನಿಗೆ ಉಪಾಯಭಾವವೇ ಕೂಡುವದಿಲ್ಲವೆಂದೂ, ಒಪ್ಪಿಕೊಳ್ಳುತ್ತೀರಿ. ಈ ಕಲ್ಯಾಣಗುಣಾದಿಗಳು ವಿಶೇಷಣವಾಗಿದ್ದುಕೊಂಡು ಉಪಾಯೈಕ್ಯಕ್ಕೆ ಹಾನಿ ಇಲ್ಲದಿದ್ದರೆ, ಲಕ್ಷ್ಮಿಯು ಮಾತ್ರ ವಿಶೇಷಣವಾದರೆ ಉಪಾಯೈಕ್ಯಕ್ಕೆ ಹಾನಿ ಹೇಗೆ ? ಹಾಗೆ ವಿಶೇಷಣ ಕೂಡದೆಂದರೆ, ಕಲ್ಯಾಣಗುಣಾದಿಗಳೂ ಉಪಾಯತ್ವಕ್ಕೆ ವಿಶೇಷಣವಾಗಿರದೆ, ಉಪಾಯವಾಗುವ ಪರಮಾತ್ಮನು ಅದ್ವೈತ ಸಿದ್ಧಾನ್ತದ ಹಾಗೆ ನಿರ್ವಿಶೇಷನಾಗಬೇಕಾಗುತ್ತದೆಂಬ ಭಾವವು. ಪರಮಾತ್ಮನು ನಿರ್ವಿಶೇಷನಲ್ಲವು; ಕಲ್ಯಾಣಗುಣಗಳಿಂದಲೂ ದಿವ್ಯಮಙ್ಗಳ ವಿಗ್ರಹದಿಂದಲೂ ಯುಕ್ತನಾಗಿರುವದು ವಿಶೇಷಣವಾಗಿರಲು ಅಭ್ಯಂತರವಿಲ್ಲವೆಂಬ ಭಾವವು ಆದರೆ ಈ ಸಂದರ್ಭದಲ್ಲಿ ಇನ್ನೊಂದು ವಾದವನ್ನು ತರಬಹುದು ಹೇಗೆಂದರೆ.—**ಕಲ್ಯಾಣಗುಣಗಳೂ**

## ಶ್ರೀ ಸಂಬಂಧೇನ ವೈಗುಣ್ಯಮಿತಿ ವಾದಸ್ಯ ನಿರಾಸಃ.

ವಿಶೇಷಣ ಪ್ರಯುಕ್ತಮಾಯ್ ವಿಶೇಷ್ಯತ್ತುಕ್ಕು ವರುಮ್ ಏತ್ತತ್ತಾಲ್ ವಿಶೇಷ್ಯತ್ತುಕ್ಕು ವೈಗುಣ್ಯಾದಿಗಳ್ ವಾರಾದೆನ್ರು (೧) "ಸ್ವತಶ್ಶ್ರೀ

---

ದಿವ್ಯ ಮಂಗಳ ವಿಗ್ರಹವೂ ಉಪಾಯ ಭಾವಕ್ಕೆ ಆವಶ್ಯಕವಾದರೂ ಅವುಗಳು ಹೇಗೆ ಉಪಾಯವಲ್ಲವೋ ಹಾಗೆಯೇ ಲಕ್ಷ್ಮಿಯೂ ಉಪಾಯವಲ್ಲವು ಎಂದು ಹೇಳಬಹುದು. ಆದರೆ ಕಲ್ಯಾಣಗುಣಗಳೂ ವಿಗ್ರಹವೂ ಚೈತನ್ಯವುಳ್ಳವುಗಳಲ್ಲದುದರಿಂದ ಸಙ್ಕಲ್ಪಿಸಲಾರವು. ಹಾಗಲ್ಲದೆ ಲಕ್ಷ್ಮಿಯು, ಸಙ್ಕಲ್ಪಿಸುವ ಶಕ್ತಿಯ ಮೂಲಕ ಉಪಾಯವಾಗಿರಲು ಅಭ್ಯಂತರವಿಲ್ಲವು. ಹೀಗೆ ವಿಶೇಷಣವಾಗಿರುವದು ಉಪಾಯತ್ವದ ಐಕಾಂತ್ಯಕ್ಕೇನೂ ನ್ಯೂನತೆ ಇಲ್ಲವೆಂಬುದು ವಾಖ್ಯ ತಾತ್ಪರ್ಯವು. ಇಬ್ಬರೂ ಇಂಗಿತಜ್ಞರಾಗಿ ಸತ್ಯನಿಧಿಗಳಾಗಿ ಏಕಮತ್ಯದಿಂದ ವರ್ತಿಸುವವರಿಂದ ಪರಸ್ಪರ ವಿರೋಧ ತನ್ಮೂಲಕ ವ್ಯಾಘಾತ ಮುಂತಾದುದಕ್ಕೇನೂ ಕಾರಣವಿಲ್ಲವು. ಆಶ್ರಯೋಚಿತ ಕಲ್ಯಾಣಗುಣಗಳಿಂದ ಸರ್ವೇಶ್ವರನಿಗೆ ಅತಿಶಯವುಂಟಾಗುವದರಿಂದ, ಉಪಾಯ ಭಾವದಲ್ಲಿ ವಿಶೇಷಣವಾಗಿ ಆವಶ್ಯಕವೆಂದು ಭಾವಿಸಬಹುದು. ಲಕ್ಷ್ಮಿಯಿಂದಾಗುವ ಅಂತಹ ಅತಿಶಯವೇನು? ಆದರಿಂದ ಸರ್ವೇಶ್ವರನಿಗೆ ಏನೊಂದೂ ನ್ಯೂನತೆ ಇಲ್ಲವೇ ಎಂದರೆ, ಸರ್ವೇಶ್ವರನಿಗೆ ಅತಿಶಯವೇ ವಿನಾ ನ್ಯೂನತೆ ಏನೂ ಇಲ್ಲವೆಂದು ಹೇಳುತ್ತಾರೆ. ಹಾಗೆ ಲಕ್ಷ್ಮಿಯಿಂದ ಅತಿಶಯ ಉಂಟಾಯಿತು ಎಂದರೆ ಸರ್ವೇಶ್ವರಾತಿಶಯವು ಲಕ್ಷ್ಮಿಗೆ ಅಧೀನವಾದುದೆಂಬ ದೋಷವು ಪ್ರಾಪ್ತವಾಗುವದಿಲ್ಲವೇ? ಎಂದರೆ ಅಂತಹ ನ್ಯೂನತೆ ದೋಷಗಳಿಗೆ ಕಾರಣವಿಲ್ಲವೆಂದು ಸದೃಷ್ಟಾಂತವಾಗಿ ನಮಗೂ, ಪ್ರತಿಕಕ್ಷಿಗಳಿಗೂ, ತಂಬಾ ಅಭಿಮತರಾದ ಶ್ರೀ ಪರಾಶರ ಭಟ್ಟರ ದಿವ್ಯ ಸೂಕ್ತಿಯ ಮೂಲಕ ಉಪಪಾದಿಸುತ್ತಾರೆ.

## ಲಕ್ಷ್ಮೀ ಸಂಬಂಧದಿಂದ ಸರ್ವೇಶ್ವರನಿಗೆ ವೈಗುಣ್ಯವೆಂಬ ವಾದ ನಿರಾಸವು

**ವಿಶೇಷಣ ಪ್ರಯುಕ್ತಮಾಯ್** - ವಿಶೇಷಣದ ಮೂಲಕವಾಗಿ, **ವಿಶೇಷ್ಯಕ್ಕೆ, ವರುಮ್ ಏತ್ತತ್ತಾಲ್**-ಬರುವ ಅತಿಶಯದಿಂದ, **ವಿಶೇಷ್ಯತ್ತುಕ್ಕು**-ವಿಶೇಷ್ಯಕ್ಕೆ, **ವೈಗುಣ್ಯಾದಿಗಳ್ ವಾರಾದೆನ್ರು** - ದೋಷವೇ ಮೊದಲಾದವುಗಳು ಬರುವದಿಲ್ಲವೆಂದು, **"ಸ್ವತಶ್ಶ್ರೀಸ್ತ್ವಂ ವಿಷ್ಣೋಃ"** ಎಂಬ ಶ್ರೀ ಪರಾಶರ

---

(೧) ಶ್ರೀಗುಣ. ೩೧.

**ತ್ವಂ ವಿಷ್ಣೋಸ್ಸ್ವಮಸಿ ತತ ಏವೈಷ ಭಗವಾನ್ ತ್ವದಾಯತ್ತರ್ದ್ಧಿತ್ವೇಽಪ್ಯ ಭವದ ಪರಾಧೀನ ವಿಭವಃ । ಸ್ವಯಾದೀಪ್ತ್ಯಾ ರತ್ನಂ ಭವದಪಿ ಮಹಾರ್ಘಂ ನವಿಗುಣಂ ನ ಕುಂಠಸ್ವಾತಂತ್ರ್ಯಂ ಭವತಿಚ ನ ಚಾನ್ಯಾಹಿ ತಗುಣಾವನ್ । " ಎಂಬ ಗುರಶ್ಲೋಕತ್ತಿಲೆ ನಿರ್ಣಯಿಕ್ಕಪಟ್ಟದು.**

---

ಭಟ್ಟರ ಶ್ರೀ ಗುಣ ರತ್ನಕೋಶದ ಶ್ಲೋಕವಲ್ಲಿ, ನಿರ್ಣಯಿಕ್ಕಪಟ್ಟದು - ನಿರ್ಣಯಿಸಲ್ಪಟ್ಟಿತು ಆ ಶ್ಲೋಕಾರ್ಥವೇನೆಂದರ :—**ಹೇ ಶ್ರೀಃ** ಓ ಲಕ್ಷ್ಮಿಯೇ, **ತ್ವಂ** - ನೀನು, **ಸ್ವತಃ** - ತಾನಾಗಿಯೇ, **ವಿಷ್ಣೋಃ** - ಶ್ರೀ ಮಹಾವಿಷ್ಣುವಿನ **ಸ್ವಂ** – ಶೇಷಭೂತಳಾದ ವಸ್ತು, **ಅಸಿ** - ಆಗಿದ್ದೀಯೇ, ನಾವುಗಳೆಲ್ಲಾ ಸರ್ವೇಶ್ವರ ಸಙ್ಕಲ್ಪ ಮೂಲಕ ದಾಸಭೂತರಾಗಿದ್ದೇವೆ ; ಲಕ್ಷ್ಮಿಯಾದರೋ ಹಾಗಲ್ಲದೆ ತಾನೇ ದಾಸಭೂತಳಾಗಿದ್ದಾಳೆಂಬ ಭಾವವು **ತತ ಏವ** - ಆ ಕಾರಣದಿಂದಲೇ, **ಏಷಭಗವಾನ್** – ಈ ಹೇಯ ಪ್ರತ್ಯನೀಕನಾದ ಕಲ್ಯಾಣಗುಣಾಕರನು, **ತ್ವದಾಯತ್ತರ್ದ್ಧಿತ್ವೇಽಪಿ** - ನಿನಗೆ ಅಧೀನವಾದ ಸರ್ವ ಸಂಪತ್ಸಮೃದ್ಧಿಯನ್ನು ಹೊಂದಿದ್ದರೂ ಕೂಡ, **ಅಪರಾಧೀನ ವಿಭವಃ** - ನಿನ್ನ ಪತಿಯು ಇತರರಿಗೆ ಎಂದರೆ ನಿನಗಧೀನವಲ್ಲದ ವಿಭವವುಳ್ಳವನು, **ಅಭವತ್**–ಆದನು, ಸರ್ವೇಶ್ವರನ ಸ್ವರೂಪ ಸ್ವಭಾವಾದಿಗಳೇ ಪರಮೋತ್ಕೃಷ್ಟವಾದವು, ಲಕ್ಷ್ಮೀ ವಿಶಿಷ್ಟತೆಯಿಂದ ಅವುಗಳಿಗೆ ಇನ್ನೂ ಅತಿಶಯವು, (೧) **"ಅಪ್ರಮೇಯಂ ಹಿ ತತ್ತೇಜೋಯಸ್ಯಸಾ ಜನಕಾತ್ಮಜಾ"** "ಯಾವ ಮಹನೀಯನಿಗೆ ಆ ಜನಕ ನಂದನಿಯು ಪತ್ನಿಯೋ, ಅಂತಹ ಶ್ರೀರಾಮನ ತೇಜಸ್ಸು ನಿರುಪಮವಾದುದು" ಎಂಬ ಮಾರೀಚೋಕ್ತಿಯ ಹಾಗೆ ಪರಮ ಶ್ಲಾಘ್ಯವಾದುದು ಆಯಿತು ಇದರಿಂದ ಸರ್ವೇಶ್ವರನ ವೈಭವವು ಲಕ್ಷ್ಮಿಗೆ ಅಧೀನವಾಯಿತೆಂಬಭಿಪ್ರಾಯವಲ್ಲವು. ಇದನ್ನು ಒಂದು ದೃಷ್ಟಾಂತ ಮೂಲಕ ಸಮರ್ಥನೆ ಮಾಡುತ್ತಾರೆ **ರತ್ನಂ** - ರತ್ನವು, **ಸ್ವಯಾ ದೀಪ್ತ್ಯಾ** - ತನಗೆ ವಿಶೇಷಣವಾಗಿರುವ ತನ್ನ ಕಾಂತಿಯಿಂದ, **ಮಹಾರ್ಘಂ** - ತುಂಬಾ ಬೆಲೆಯುಳ್ಳದ್ದು ಮತ್ತು ಪ್ರಾಶಸ್ತ್ಯ ಉಳ್ಳದುವು, **ಭವದಪಿ**-ಆದರೂನೂ, **ನವಿಗುಣಂ ಭವತಿ** - ಅದು ಆ ರತ್ನಕ್ಕೆ ವಿಗುಣವಲ್ಲದುದು ಎಂದರೆ ಅದರ ಶ್ಲಾಘ್ಯತೆಗೆ ಏನೊಂದೂ ನ್ಯೂನತೆಯಾಗುವದಲ್ಲವು, **ನ ಕುಂಠ ಸ್ವಾತಂತ್ರ್ಯಂ** - ಪ್ರತಿಹತ ಸ್ವಾತಂತ್ರ್ಯವುಳ್ಳದೂ ಆಗುವದಿಲ್ಲವು, **ನ ಚಾನ್ಯಾಹಿತ ಗುಣಂ ಭವತಿ** - ಇನ್ನೊಂದರಿಂದುಂಟಾದ ಗುಣವುಳ್ಳದುದೂ ಆಗುವದಿಲ್ಲವು. ಯದ್ಯಪಿ ರತ್ನಕ್ಕೆ

---

(೧) ರಾಮಾ.

## ಏವಂ ಲೋಕೇ ಪಿತರೌ ವಿಶೇಷಣ ವಿಶೇಷ್ಯಭಾವೇನ ಪರಸ್ಪರಾತಿಶಯಾವಹೌ.

ವಿಶೇಷಣತ್ತಾಲ್ ವಿಶೇಷ್ಯತ್ತುಕ್ಕು ವರುಮ್ ಅತಿಶಯುಮ್ ಪೋಲೆ ವಿಶೇಷ್ಯತ್ತುಕ್ಕು ಸ್ವರೂಪಾನುಬಂಧಿಯಾನ ಅತಿಶಯುಮುಮ್ (೧) "ಅನನ್ಯಾ ರಾಘವೇಣಾಹಂ ಭಾಸ್ಕರೇಣ ಪ್ರಭಾಯಥಾ" ಎಙ್ಗಿರ ದೃಷ್ಟಾನ್ತ

ಅದರ ಕಾಂತಿಯು ಮೂಲಕ ಬೆಲೆಯೂ ಪ್ರಾಶಸ್ತ್ಯವೂ ಆದರೂ, ರತ್ನವು ಅಮೋಘವಾದುದು, ಎಂದು ಹೇಳುತ್ತಾರೆಯೇ ವಿನಾ ಬೇರೇ ಅಲ್ಲವು, ಇದರಿಂದ ಅದರ ಶ್ಲಾಘ್ಯತೆಗೆ ಏನೂ ಕುಂದಕವಿಲ್ಲವು, ಅದು ಅದರ ಕಾಂತಿಗೆ ಅಧೀನವಾದುದೆಂದು ಯಾರೂ ಹೇಳುವದಿಲ್ಲವು ರತ್ನಕ್ಕೆ ನೈಜವಾದ ಗುಣವಲ್ಲವು, ಬೇರೇ ಇನ್ನೊಂದರಿಂದುಂಟಾದುದೆಂದು ಯಾರೂ ಹೇಳುವದಿಲ್ಲವು. ರತ್ನವು ತುಂಬಾ ಸ್ವಚ್ಛವಾಗಿ ನಿಸ್ಕಲ್ಮಷವಾಗಿರುವ ಸ್ವರೂಪವನ್ನು ಹೊಂದಿಲ್ಲದೆ ಇದ್ದರೆ ಬರೀ ಕಾಂತಿಯಿಂದಲೇ ಅದಕ್ಕೆ ಶ್ಲಾಘ್ಯತೆಯು ಬಾರದು. ಆದುದರಿಂದ ವಿಶೇಷ್ಯದ ಸ್ವರೂಪವೂ ಅಮೋಘವಾಗಿ ಅತಿಶಯುವಾಗಿ, ವಿಶೇಷಣದಿಂದಲೂ ಅತಿಶಯವುಂಟಾದರೆ ಪರಮಶ್ಲಾಘ್ಯವು ಸರ್ವೇಶ್ವರನೇ ತನ್ನ ಸ್ವರೂಪಗುಣ ವಿಭವೈಶ್ವರ್ಯಾದಿಗಳಿಂದ ಪರಮಶ್ಲಾಘ್ಯನು ಲಕ್ಷ್ಮಿಯೂ ಅನುರೂಪ ಸ್ವರೂಪ ರೂಪಗುಣ ವಿಭವೈಶ್ವರ್ಯಾದಿಗಳಿಂದ ಶ್ಲಾಘ್ಯಳು ಆದುದರಿಂದ ಹೀಗೆ ವಿಶೇಷಣವಾದ ಲಕ್ಷ್ಮಿಯಿಂದ ಶ್ರೀ ಹರಿಗೆ ಯಾವುದೊಂದು ವೈಗುಣ್ಯವಿಲ್ಲವೆಂದು ಹೇಳಿ ಮುಂದೆ ವಿಶೇಷಣ ವಿಶೇಷ್ಯಗಳಿಗೆ ಇಂತಹ ನಿತ್ಯಯೋಗದಿಂದ ಪರಸ್ಪರಾತಿಶಯಕ್ಕೆ ಕಾರಣವೆಂದು ಉಪದೇಶಿಸುತ್ತಾರೆ.

## ಹೀಗೆ ಲೋಕ ದಂಪತಿಗಳು ವಿಶೇಷಣ ವಿಶೇಷ್ಯ ಭಾವದಿಂದ ಪರಸ್ಪರಾತಿಶಯಗಳನ್ನುಂಟುಮಾಡುವವರು.

ವಿಶೇಷಣತ್ತಾಲ್ ವಿಶೇಷ್ಯತ್ತುಕ್ಕು ವರುಮ್ ಅತಿಶಯಂ ಪೋಲೆ - ವಿಶೇಷಣದಿಂದ ವಿಶೇಷ್ಯಕ್ಕುಂಟಾಗುವ ಅತಿಶಯದ ಹಾಗೆಯೇ, ವಿಶೇಷ್ಯತ್ತುಕ್ಕು ವಿಶೇಷ್ಯಕ್ಕೆ, ಸ್ವರೂಪಾನುಬಂಧಿಯಾನ - ಆ ವಿಶೇಷ್ಯದ ಸ್ವರೂಪಕ್ಕೆ ಸೇರಿದ, ಅತಿಶಯವನ್ನು, ಭಾಸ್ಕರೇಣ – ಜ್ಯೋತಿಸ್ಸ್ವರೂಪನಾದ ಸೂರ್ಯನಿಂದ, ಪ್ರಭಾಯಥಾ - ಪ್ರಭೆಯು ಹೇಗೆ ಬೇರೆಯಾಗಿರಲಾರದೋ, ಹಾಗೆಯೇ ಅಹಂ-ನಾನೂ

(೧) ರಾಮಾ. ಸುಂದರ. ೨೧.೧೫,

**ತ್ತಿಲೆ ಕಾಣಲಾಮ್. ಭಾಸ್ಕರನುಕ್ಕುಮ್ ಪ್ರಭೈಕ್ಕುಮ್ ಸ್ವತಸಿದ್ಧಮಾನ ತೇಜಸ್ತ್ವಮ್ಪೋಲೆ ಇರುವರ್ಕ್ಕುಮ್ (೧) "ಅನನ್ಯಾಧೀನ ಕಲ್ಯಾಣಂ" ಎಙ್ಗಿರ ಪಡಿಯೇ ಸ್ವಭಾವ ಸಿದ್ಧ ಕಲ್ಯಾಣ ತೈಯಾಲೇ (೨) "ಅಪ್ರ**

---

**ಕೂಡ, ರಾಘವೇಣ** - ರಘುಕುಲದಿನಮಣಿಯಾದ ನನ್ನ ಪತಿಯಿಂದ, ಅನನ್ಯಾ-ಬೇರೆಯಾಗಿರುವಳಲ್ಲವು." ಎಙ್ಗಿರ **ದೃಷ್ಟಾಂತತ್ತಿಲೆ** ಎನ್ನುವ ಸೀತಾವಾಕ್ಯದ ದೃಷ್ಟಾಂತದಲ್ಲಿ, **ಕಾಣಲಾಮ್** - ತಿಳಿಯಬಹುದು ನಿತ್ಯಯೋಗವನ್ನು ತನ್ನ ಪತಿಯೊಂದಿಗೆ ಹೊಂದಿರುವದರಿಂದಲೇ ತನಗೆ ಅತಿಶಯ ವೆಂದು ಸೀತೆಯೂ ಹೇಳಿಕೊಂಡಿರುತ್ತಾಳೆ ಈಗ ಪತಿಯಿಂದಗಲಿದ್ದಾಳಲ್ಲ ನಿತ್ಯಯೋಗವೆಲ್ಲಿಯಿದೆ ಎಂದರೆ ಈ ವಿಶ್ಲೇಷೆಯು ಲೋಕವಿಡಂಬನಾರ್ಥವಾಗಿ ರಾವಣ ವಧೆಗಾಗಿ ಆರೋಪಿತವು. ಇನ್ನೊಂದು ಕಡೆಯಲ್ಲಿಯೂ "ಯಸ್ತ್ವಯಾ ಸಹ ಸ ಸ್ವರ್ಗೋ ನಿರಯೋಯಸ್ತ್ವಯಾವಿನಾ" (ರಾಮಾ ಅಯೋಧ್ಯಾ ೩೦-೧೮) ಸೀತೆಯು "ಓ ಪತಿಯೇ ನಿನ್ನೊಂದಿಗಿರುವದೇ ನನಗ ಸ್ವರ್ಗವು, ನಿನ್ನನ್ನಗಲಿರುವದೇ ನರಕವು" ಎಂದು ಹೇಳಿಕೊಂಡಿರುತ್ತಾಳೆ. ಶ್ರೀರಾಮನ ಸಂಶ್ಲೇಷವು ಸೀತೆಗೆ ಹೇಗೆ ಅತಿಶಯಾ ವಹವೋ, ಹಾಗೆಯೇ ಸೀತೆಯ ಸಂಬಂಧವೂ ಶ್ರೀರಾಮನಿಗೂ ಅತಿಶಯಾವಹವಾದುದು ಎಂಬ ಭಾವವು ಹೇಗೆಂದರೆ ಪ್ರಭೆ ಇಲ್ಲದೆ ಭಾಸ್ಕರನು ಹೇಗೆ ಶೋಭಿಸುವದಿಲ್ಲವೋ, ಹಾಗೆಯೇ ಸೀತೆಯಿಲ್ಲದೆ ಶ್ರೀರಾಮನೂ ಶೋಭಿಸನು ಎಂಬುದು ಇಲ್ಲಿಯೂ ತೋರಿಬರುತ್ತದೆ ಹೀಗೆ ಇವರುಗಳ ನಿತ್ಯಯೋಗವು ಪರಸ್ಪರಾತಿಶಯಕ್ಕೆ ಕಾರಣವೆಂದು ಮುಂದೆ ಭಾಸ್ಕರ ದೃಷ್ಟಾಂತದಿಂದಲೇ ಉಪಪಾದಿಸುತ್ತಾರೆ

**ಭಾಸ್ಕರನುಕ್ಕುಮ್** - ಸೂರ್ಯನಿಗೂ, **ಪ್ರಭೈಕ್ಕುಮ್** - ಆತನ ಪ್ರಭೆಗೂ ಎಂದರೆ ಕಿರಣಗಳಿಗೂ, **ಸ್ವತಸಿದ್ಧಮಾನ** - ಸ್ವರೂಪತಃ ಉಂಟಾಗಿರುವ, **ತೇಜಸ್ತ್ವಮ್ಪೋಲೆ** - ತೇಜೋರೂಪದಹಾಗೆ, **ಇರುವರ್ಕ್ಕುಮ್** - ಲಕ್ಷ್ಮೀನಾರಾಯಣರಿಬ್ಬರಿಗೂ, "ಅನನ್ಯಾಧೀನ ಕಲ್ಯಾಣಂ" ಎಂದರೆ "ಇನ್ನ್ಯಾರಿಗೂ ಅಧೀನವಾಗದೇ ಇರುವ ಐಶ್ವರ್ಯವುಳ್ಳ, ಇದು ಶ್ಲೋಕದಲ್ಲಿ ದ್ವಂದ್ವಂ ಎಂದು ಮುಂದೆ ಇದೆ, ಅದಕ್ಕೆ ವಿಶೇಷಣವು, ಅಂತಹ ದಂಪತಿಗಳನ್ನ ವಂದಿಸುವೆನು " ಎಙ್ಗಿರ **ಪಡಿಯೇ** - ಎಂದು ಹೇಳಿರುವ ಹಾಗೆ **ಸ್ವಭಾವಸಿದ್ಧ ಕಲ್ಯಾಣತೈಯಾಲೆ** - ಸ್ವರೂಪತಃ ಉಂಟಾದ ಕಲ್ಯಾಣತೆಯಿಂದ, ಮುಂದೆ ಅನೇಕ ಆಳ್ವಾರಾಚಾರ್ಯ

---

(೧) ಲಕ್ಷ್ಮೀ ಕಲ್ಯಾಣ. ೭. ೭. (೨) ರಾಮಾ. ಅರಣ್ಯ. ೩೭,೧೮.

**ಮೇಯಂ ಹಿ ತತ್ತೇಜೋ ಯಸ್ಯಾ ಜನಕಾತ್ಮಜಾ" ಎನ್ನುವುದು, (೧) ತವ ಶ್ರಿಯಾ" ಎನ್ನುವುದು,**

ದಿವ್ಯಸೂಕ್ತಿಗಳಿಂದ ಸಮರ್ಥಿಸಿ, ವಿಶೇಷ್ಯ ವಿಶೇಷಣಗಳು ಈ ಸಂದರ್ಭದಲ್ಲಿ ಪರಸ್ಪರಾತಿಶಯಾವಹಗಳೆಂದು ಹೇಳುತ್ತಾರೆ "ಅನನ್ಯಾಧೀನ ಕಲ್ಯಾಣಂ" ಎಂಬುದು ಶ್ರೀ ಪರಾಶರ ಭಟ್ಟರ ಲಕ್ಷ್ಮೀ ಕಲ್ಯಾಣ ಶ್ಲೋಕವು ಪೂರಾ ಶ್ಲೋಕವು ಯಾವುದೆಂದರೆ —

**ಅನನ್ಯಾಧೀನ ಕಲ್ಯಾಣ ಮನ್ಯ ಮಂಗಳ ಕಾರಣಮ್ ।**
**ಜಗನ್ನಿದಾನ ಮದ್ವಂದ್ವಂ ದ್ವಂದ್ವಂ ವಂದಾ ಮಹೇ ಮಹಃ ॥**

"ಇವರ ಇಶ್ವರ್ಯಾದಿಗಳು ಯಾರ ಅಧೀನವಾದವೂ ಅಲ್ಲವು ಸ್ವರೂಪತಃ ಸ್ವತಸ್ಸಿದ್ಧವಾದವು ಇತರರ ಶ್ರೇಯಸ್ಸಿಗೆ ಕಾರಣವಾಗಿ ಉಳ್ಳವರು, ಇಬ್ಬರೂ **ಜಗನ್ನಿದಾನಂ** - ಜಗತ್ತಿಗೆ ಸರ್ವ ಕಾರಣಭೂತರು, **ಅದ್ವಂದ್ವಂ** - ಅವರಿಗೆ ಸಮಾನವಿಲ್ಲದೇ ಇರುವವರು, **ದ್ವಂದ್ವಂ**-ದಂಪತಿಗಳಾಗಿ ಯಾವಾಗಲೂ ಒಟ್ಟಿಗೇ ಇರತಕ್ಕವರ, **ಮಹಃ** - ಇಂತಹ ತೇಜೋಮಯರನ್ನು, **ವಂದಾಮಹೇ** - ನಮಸ್ಕರಿಸುತ್ತೇನೆ" ಎಂಬುದು ಈ ಶ್ಲೋಕಾರ್ಥವು. ಇಲ್ಲಿ ದ್ವಂದ್ವಂ ಎಂಬ ಪದ ಪ್ರಯೋಗದಿಂದ ಗೀತೆಯಲ್ಲಿ (೧೦-೩) "ದ್ವಂದ್ವಸ್ಸಾಮಾಸಿಕಸ್ಯಚ" ಎಂಬಲ್ಲಿ ಹೇಳಿರುವ ಉಭಯ ಪದಗಳ ಪ್ರಾಧಾನ್ಯತೆಯಿಂದ ಪರಸ್ಪರಾತಿಶಯವೆಂಬ ಭಾವವು ಸೂಚಿತವು

**ಯಸ್ಯ** - ಯಾವ ಪರಾಕ್ರಮಿಯಾಗಿ ಪ್ರಸಿದ್ಧನಾದ ರಾಮನಿಗೆ, **ಜನಕಾತ್ಮಜಾ** - ಕರ್ಮಯೋಗನಿಷ್ಠನಾದ ಜನಕರಾಜನಿಗೆ ಮಗಳಾದ ಸೀತೆಯು ಪತ್ನಿಯೋ, **ತತ್ತೇಜಃ** - ಅಂತಹ ತೇಜೋರೂಪನಾದ ತಚ್ಛಬ್ದವಾಚ್ಯನಾದ ಈ ಶ್ರೀರಾಮರೂಪೀ ಪರತತ್ತ್ವವು **ಅಪ್ರಮೇಯಂ ಹಿ**-ಅಪರಿಚ್ಛೇದ್ಯವಾದದೋ, "**ನ ತ್ವಂ ಸಮರ್ಥ ಸ್ತಾಂ ಹರ್ತುಂ ರಾಮಚಾಪಾಶ್ರಯಾಂ ವನೇ**" ಎಂಬುದು ಉತ್ತರಾರ್ಧವು, ರಾವಣನನ್ನು ಕುರಿತ ಮಾರೀಚ ವಾಕ್ಯವು, **ತಾಂ** - **ಅಂತಹ** ಪ್ರಸಿದ್ಧಳಾದ, **ವನೇ ರಾಮಚಾಪಾಶ್ರಯಾಂ** - ವನದಲ್ಲಿ ಶ್ರೀರಾಮನ ಬಾಣವನ್ನು ಆಶ್ರಯಿಸಿರುವವಳನ್ನು, ಅಂತಹ ಶ್ರೀರಾಮನನ್ನು ಆಶ್ರಯಿಸಿರುವವಳನ್ನು ಎಂಬ ಭಾವವು, **ಹರ್ತುಂ** - ಅಪಹರಿಸಲು, **ನತ್ವಂ ಸಮರ್ಥಃ**-ನೀನು ಸಮರ್ಥನಾಗಲಾರೆ ಒಂದು ವೇಳೆ ಅಪಹರಿಸಿದುದಾದರೆ ರಾಮಬಾಣದಿಂದ ದಗ್ಧನಾಗುವೆ; ಅಥವಾ **ಜನಕಾತ್ಮಜೆ**ಯಾದುದರಿಂದ ನೀನು ಅಪಹರಿಸಿದುದು ಆಕೆಯ

(೧) ಆಳ. ಸ್ತೋತ್ರ ೩೮.

ತಂದೆಗೆ ತಿಳಿದರೂ ಆ ಜನಕನು ಮಹಾಕರ್ಮಯೋಗಿಯಾದುದರಿಂದ ಆತನ ಶಾಪವು ನಿನ್ನನ್ನು ದಹಿಸೀತು ಎಂಬ ಭಾವವು. ಈ ವ್ಯಾಜೋಕ್ತಿಯಲ್ಲಿ ಸೀತೆಯ ಮಹಿಮೆಯಿಂದ ಶ್ರೀರಾಮನಿಗೆ ಉತ್ಕರ್ಷವು ಉಪಪಾದಿಸಲ್ಪಟ್ಟಿತು. **ರಾಮ ಚಾಪಾಶ್ರಯಾಂ** - ಎಂಬುದರಿಂದ ರಾಮಾಶ್ರಯದಿಂದ ಸೀತೆಗೆ ಉತ್ಕರ್ಷ ವೆಂಬುದೂ ತೋರಿಬರುತ್ತದೆ.

"ತವಶ್ರಿಯಾ" ಎನ್ನುವುದು-"ನಿನ್ನ ಲಕ್ಷ್ಮಿಯೊಡನೆ" ಎಂದೂ, ಇಲ್ಲಿ ನಿನ್ನ ಲಕ್ಷ್ಮೀ ಎಂಬುದರಿಂದ ನಿನಗೆ ಅತಿಶಯವನ್ನುಂಟುಮಾಡುವ ಲಕ್ಷ್ಮಿಯೊಡನೆ ಎಂಬರ್ಥವಾಗಲಿ ಆಗಬಹುದು. ಅಥವಾ ಸರ್ವೇಶ್ವರನೊಂದಿಗೆ ನಿತ್ಯಯೋಗವನ್ನು ಹೊಂದಿ ತನ್ಮೂಲಕ ಅತಿಶಯ ಹೊಂದಿದ ನಿನ್ನ ಲಕ್ಷ್ಮಿಯೊಡನೆ ಎಂಬರ್ಥವಾಗಲಿ ಆಗಬಹುದು. **ಸ್ವವೈಶ್ವರೂಪ್ಯೇಣ ಸದಾನುಭೂತಯಾಪ್ಯಪೂರ್ವವದ್ವಿಸ್ಮಯಮಾದಧಾನಯಾ । ಗುಣೇನ ರೂಪೇಣ ವಿಲಾಸಚೇಷ್ಟಿತೈಸ್ಸದಾ ತವೈವೋಚಿತಯಾ ತವಶ್ರಿಯಾ ॥**" ಎಂಬುದು ಪೂರಾ ಶ್ಲೋಕವು. **ಸ್ವವೈಶ್ವರೂಪ್ಯೇಣ** ತಾನೂ ಸರ್ವೇಶ್ವರನ ಹಾಗೆಯೇ ಎಲ್ಲಾ ವಿಶ್ವವನ್ನೂ ಶರೀರವಾಗಿ ಉಳ್ಳವ ಕ್ಕೆಲ್ಲಾ ಆತ್ಮಾವಾಗಿರುವ, ಸದಾನುಭೂತಯಾ - ಸರ್ವೇಶ್ವರನ ಹಾಗೆ ತಾನೂ ಎಲ್ಲರನ್ನೂ ಸದಾ ಸಾಕ್ಷಾತ್ಕರಿಸಿರುವ ಅಥವಾ ಹೀಗೆ ಸ್ವರೂಪಸ್ವಭಾವಾದಿ ಸರ್ವಾಕಾರದಿಂದಲೂ ಸರ್ವೇಶ್ವರನೊಂದಿಗೆ ನಿತ್ಯಯೋಗವನ್ನು ಹೊಂದಿರುವುದರಿಂದ ವಿಶ್ವಾನುಭವವುಳ್ಳ, **ಅಪೂರ್ವವತ್** - ಹಿಂದೆ ಎಂದೂ ನೋಡದೇ ಇರುವ ಹಾಗೆ **ವಿಸ್ಮಯಂ** - ಆಶ್ಚರ್ಯವನ್ನು, **ಆದಧಾನಯಾ** - ಬೀರುತ್ತಿರುವ, ಉಂಟು ಮಾಡುತ್ತಿರುವ **ಗುಣೇನ** - ಭಗವಂತನಿಗೆ ಅಭಿಮತವಾದ ಜ್ಞಾನಕಾರುಣ್ಯಾದಿ ಕಲ್ಯಾಣಗುಣಗಳಿಂದಲೂ, **ರೂಪೇಣ** - "ರಾಘವತ್ವೇ ಭವೇತ್ಸೀತಾ ರುಕ್ಮಿಣೀ ಕೃಷ್ಣಜನ್ಮನಿ" ಎಂದು ಶ್ರೀಪರಾಶರರು ಹೇಳಿರುವ ಹಾಗೆ, ಆತನಿಗೆ ಅಭಿಮತವಾದ ದಿವ್ಯಮಂಗಳ ವಿಗ್ರಹದಿಂದಲೂ (ಇವೆಲ್ಲಾ ತೃತೀಯಾವಚನಗಳು), **ವಿಲಾಸಚೇಷ್ಟಿತೈಃ** - "ದೇವತ್ವೇ ದೇವದೇಹೇಯಂ ಮನುಷ್ಯತ್ವೇ ಚ ಮಾನುಷೀ" ಎಂದು ಹೇಳಿರುವಹಾಗೆ, ಆತನಿಗೆ ಅಭಿಮತವಾದ ಲೀಲಾ ವಿಶೇಷಗಳಿಂದಲೂ ಆಶ್ರಿತ ಸಂರಕ್ಷಣಾರ್ಥವಾದ ಅವತಾರ ಮೊದಲಾದ ದಿವ್ಯ ವ್ಯಾಪಾರಗಳಿಂದಲೂ, **ತವೈವೋಚಿತಯಾ**- "ತುಲ್ಯ ಶೀಲವಯೋವೃತ್ತಾಂ ತುಲ್ಯಾಭಿಲಕ್ಷಣಾಂ ರಾಘವೋರ್ಹತಿ ವೈದೇಹೀಂ ತಂಚೇಯಮಸಿತೇಕ್ಷಣಾಂ" ಎಂದು ಹೇಳಿರುವ ಹಾಗೆ, ಭಗವಂತನಾದ ನಿನಗೆ ಮಾತ್ರವೇ ಉಚಿತಳಾದ, **ತವಶ್ರಿಯಾ** - ನಿನ್ನ ಲಕ್ಷ್ಮಿಯೊಡನೆ, **ಸಹಾಸೀನಂ** - ಯಾವಾಗಲೂ ಬಿಜಮಾಡಿಸಿ ಎಂದು ಮುಂದಿನ ಶ್ಲೋಕದಲ್ಲಿರುವುದರೊಂದಿಗೆ ಅನ್ವಯವು.

(೧) "ಉನ್ತಿರು" ಎನ್ನುಮ್,

(೧) "ಉನ್ತಿರು" ಎನ್ನುಮ್ - ಈ ಪಾಶುರವು ಯಾವುದೆಂದರೆ —

ಮಾಯಞ್ಜೆಯ್ಯೇಲೆನ್ನೈಯುನ್ತಿರು ಮಾರ್ವತ್ತು ಮಾಲೈ ನಙ್ಗೈ ।
ವಾಶಞ್ಜೆಯ್ ಪೂಙ್ಗುಳಲಾಳ್ ತಿರುವಾಣೈ ನಿನ್ನಾಣೈ ಕಣ್ಡಾಯ್ ।
ನೇಶಞ್ಜೆಯ್ದು ನ್ನೊಡೆನ್ನೈ ಯುಯಿರ್ವೇರಿ ನ್ರಿಯೊನ್ರಾಗವೇ ।
ಕೂಶಞ್ಜೆಯ್ಯಾದು ಕೊಣ್ಡಾಯೆನ್ನೈ ಕೂವಿಕ್ಕೊಳ್ಳಾಯ್ ವನ್ದನ್ದೋ ॥

ಎನ್ನೈ ಮಾಯಞ್ಜೆಯ್ಯೇಲ್ - ನಿನ್ನನ್ನು ಕ್ಷಣಕಾಲವೂ ಬಿಟ್ಟಿರಲಾರದ ನನಗೆ ಇನ್ನಾದರೂ ವಂಚನೆಮಾಡಬೇಡ, ಉನ್ತಿರು - ನೀನೇನೋ ಸರ್ವರಿಗೂ ಸಂಪತ್ತಾದರೂ ನಿನಗೂ ಸಂಪತ್ಪ್ರದಳಾದವಳು ಲಕ್ಷ್ಮಿಯು. ಶ್ರೀ ಪರಾಶರರು ವಿಷ್ಣೋಃಶ್ರೀಃ ವಿಷ್ಣುವಿಗೂ ಸಂಪತ್ತಾದವಳೆಂದು ಹೇಳಿರುತ್ತಾರೆ, ಅಪೃಥಕ್ಸಿದ್ಧವಿಶೇಷಣ ವಿಶೇಷ್ಯಗಳಾಗಿ ಪರಸ್ಪರಾತಿಶಯಗಳನ್ನುಂಟುಮಾಡುವರೆಂಬ ಭಾವವು, ಮತ್ತು, ಮಾರ್ವತ್ತು ಮಾಲೈ-ನಿನ್ನ ವಕ್ಷಸ್ಥಳಕ್ಕೆ ದಿವ್ಯ ಕಾಂಚನಮಾಲಾರೂಪಳಾಗಿ ವಕ್ಷಸ್ಥಳಕ್ಕೆ ಅಲಂಕಾರಭೂತಳು, ದಿವ್ಯ ವಕ್ಷಸ್ಥಳವೂ ಆಕೆಗೂ ಅಲಂಕಾರವು, ಇಂತಹ, ನಙ್ಗೈ ವಾಶಮ್ ಶೆಯ್-ನಿನ್ನ ಹಾಗೆಯೇ ಸಕಲ ಕಲ್ಯಾಣಗುಣಪರಿಪೂರ್ಣಳಾಗಿ "ಸರ್ವಗಂಧ ಸ್ಸರ್ವರಸಃ" ಎಂದು ಹೇಳಿರುವ ಹಾಗೆ ನಿನಗೆ ಸರ್ವ ಪರಿಮಳತ್ವವನ್ನು ಉಂಟುಮಾಡುವಳಾದ, ಪೂಙ್ಗುಳಲಾಳ್-ಹೂವಿನಿಂದ ಅಲಂಕರಿಸಲ್ಪಟ್ಟ ಸುಂದರವಾದ ಕುರುಳುಗಳನ್ನು ಹೊಂದಿರುವ ತಿರುಆಣೈ ಭೋಗ್ಯಭೂತಳಾದ ಲಕ್ಷ್ಮಿಯ ಮೇಲೆ ಆಣೆಯು ತನ್ನ ಕೆಲಸ ಮಾಡಿಕೊಟ್ಟಲ್ಲಿವ ತೀರವೆಂಬ ನಿರ್ಬಂಧವಲ್ಲಿ ಆಣೆ ಇಡುವವರುಂಟು ; ಹಾಗೆಯೇ ನಿನ್ನಾಣೈ ಕಂಡಾಯ್-ನಿನ್ನ ಮೇಲೆಯೂ ಆಣೆಯುಂಟು ಹೀಗೆ ಹೇಳಿದುದರಿಂದ ಇಬ್ಬರೂ ಉಪಾಯಭೂತರೆಂದು ಹೇಳಲ್ಪಟ್ಟಿತು. ನೇಶಮ್ ಶೆಯ್ದು - ನಿರ್ಹೇತುಕ ಕೃಪೆಯಿಂದ ನನ್ನೊಂದಿಗೆ ಸ್ನೇಹವನ್ನು ಬೆಳೆಸಿ, ಉನ್ನೋಡು ಎನ್ನೈ - ಪರತ್ವಾದಿ ಮಹಾ ಕಲ್ಯಾಣಗುಣಗಳಿಂದ ವಿರಾಜಿಸುವ ನಿನ್ನೊಂದಿಗೆ ತುಂಬಾ ನಿಕೃಷ್ಟನಾದ ನನ್ನನ್ನು, ಉಯಿರ್ ವೇರಿನ್ರಿ - ಆತ್ಮಭೇದವು ತೋರದಹಾಗೆ, ಒನ್ರಾಗವೇ - ಅಪೃಥಕ್ಸಿದ್ಧ ವಿಶೇಷಣವಾಗಿ ಒಂದಾಗಿಯೇ, ಕೂಶಮ್ ಶೆಯ್ಯಾದು - ನನ್ನ ನಿಕೃಷ್ಟಭಾವಕ್ಕಾಗಿ ಸಙ್ಕೋಚಪಡದೆ, ಕೊಂಡಾಯ್ - ನನ್ನನ್ನು ಅಙ್ಗೀಕರಿಸಿರುತ್ತೀಯೆ ಎನ್ನೈ ವನ್ದು - ನನ್ನನ್ನು ಬಂದು,

(೧) ತಿರು ೧೦ ೧೦. ೨. (೨) ಶ್ರೀಗುಣ ೯.

(೨) "ಶ್ರಿಯಃಶ್ರೀಃ" ಎನ್ನುವರ್,

**ಕೂನಿಕ್ಕೊಳ್ಳೈಯರ್** - ಕರೆದುಕೊಂಡು ಹೋಗತಕ್ಕವರು, **ಅನ್ರೋ** - ಅಯ್ಯೋ

(೨) **ಶ್ರಿಯಃಶ್ರೀಃ ಶ್ರೀರಙ್ಗೇಶಯ ತವ ಚ ಹೃದ್ಯಾಂ ಭಗವತೀಂ ।**
**ಶ್ರಿಯಂ ತ್ವತ್ತೋಽಪ್ಯುಚ್ಚೈಃ ವಯಮಿಹ ಫಣಾಮಃ ಶೃಣುತರಾಂ।**
**ದೃಶೌ ತೇ ಭೂಯಾಸ್ತಾಂ ಸುಖತರಳತಾರೇ ಶ್ರವಣತಃ ।**
**ಪುನರ್ಹರ್ಷೋತ್ಕರ್ಷಾತ್ ಸ್ಫುಟತು ಭುಜಯೋಃ ಕಂಚುಕಶತಂ ॥**

**ಅರ್ಥ**—ಹೇ ಶ್ರೀರಙ್ಗೇಶಯ-ಓ ಶ್ರೀರಙ್ಗದಲ್ಲಿ ಶಯನಿಸಿರುವ ಮಹಾನುಭಾವನೇ, ನೀನು ಶ್ರಿಯಃಶ್ರೀಃ - ಲಕ್ಷ್ಮಿಗೂ ಆಶ್ರಯನು, ಶೇಷಿಯು, ತವಚ-ಎಲ್ಲಾ ಪ್ರಸನ್ನರಿಗೂ ಹೃದ್ಯನಾಗಿರುವ ನಿನಗೂ ಕೂಡ **ಹೃದ್ಯಾಂ** - ವಾತ್ಸಲ್ಯಾತಿಶಯದಿಂದ ಹೃದ್ಯಳಾಗಿರುವುದರಿಂದಲೇ ಸದಾ ವಕ್ಷಸ್ಥಳದಲ್ಲಿ ಧರಿಸಲ್ಪಟ್ಟಿರುವ, **ಭಗವತೀಂ** - ಷಾಡ್ಗುಣ್ಯಾದಿ ಕಲ್ಯಾಣಗುಣಾಕರತ್ವ ಹೇಯಪ್ರತ್ಯನೀಕತ್ವಾದಿಗಳಿಂದ ನಿನಗೆ ಅನುರೂಪವಾದ ಸ್ವರೂಪಗುಣಾದಿಗಳುಳ್ಳ, **ಶ್ರಿಯಂ** - ಲಕ್ಷ್ಮಿಯನ್ನು, **ತ್ವತ್ತಃ** - ನಿನಗಿಂತಲೂ, **ಉಚ್ಚೈಃ** - ಹೆಚ್ಚಾಗಿ, **ವಯಂ** - ಇಂತಹ ಲಕ್ಷ್ಮೀ ಕಟಾಕ್ಷದಿಂದಲೂ ಆಕೆಯ ವರಪ್ರಸಾದದಿಂದಲೂ ಶ್ರೀ ಯತಿವರ್ಯರ ಸಙ್ಕಲ್ಪಾತಿಶಯದಿಂದಲೂ ತುಂಬಾ ಉನ್ನತ ವೈಷ್ಣವ ಜನ್ಮವನ್ನು ಹೊಂದಿ, ಆಕೆಯ ಕೃಪೆಯಿಂದಲೇ ನಿರತಿಶಯ ಜ್ಞಾನಾಧಿಕ್ಯವನ್ನು ಹೊಂದಿದ ನಾವು, ಕವಿಗಳಿಗೆ ಸಲ್ಲುವ ಬಹುವಚನವು, ಅಥವಾ ತಮ್ಮ ಹಾಗೆ ತತ್ತ್ವತ್ರಯಾದಿಗಳ ಜ್ಞಾನವುಳ್ಳ ವೈಷ್ಣವಾಗ್ರೇಸರರೂ ಎಂದು ಬಹು ವಚನವು, **ಇಹಫಣಾಮಃ** - ಇಲ್ಲಿ ಸ್ತೋತ್ರ ಮಾಡುತ್ತೇವೆ. ಈಗ ನಿನ್ನ ಎದುರಿಗೇನೇ ಈ ಶ್ರೀಗುಣರತ್ನಕೋಶದ ಮೂಲಕ ಸ್ತೋತ್ರಮಾಡುತ್ತೇವೆ ಎಂದು ಹೇಳಿಕೊಂಡರು ನಿನ್ನ ವಾತ್ಸಲ್ಯಾತಿಶಯವಾದರೋ ಎಂಥಾದ್ದೆಂದರೆ **ಶೃಣುತರಾಂ** - ಚೆನ್ನಾಗಿ ಆಲಿಸುವದು ಎಂದು ಹೇಳುತ್ತಾರೆ. ಆ ಪ್ರಿಯಸತ್ನಿಯ ಸ್ತೋತ್ರದ ಆನಂದದಿಂದ ಪರವಶನಾಗಿ ಆಲೈಸಿ ಕೇಳುವ, **ತೇ** - ನಿನ್ನ, **ದೃಶೌ** ದಿವ್ಯ ಪುಂಡರೀಕಾಕ್ಷಗಳಾದರೋ, **ಸುಖ ತರಳತಾರೇ**-ಆನಂದದಿಂದ ಚಂಚಲವಾಗಿ ಚಲಿಸುವ ಕಣ್ಣು ಗುಡ್ಡೆಗಳುಳ್ಳವಳಾಗಲಿ; **ಪುನಃ ಹರ್ಷೋತ್ಕರ್ಷಾತ್**-ಹಾಗೆಯೇ ಪುನಃ ಸಂತೋಷಾಧಿಕ್ಯದಿಂದ **ಭುಜಯೋಃ** - ನಿನ್ನ ಭುಜಗಳಲ್ಲಿರುವ, **ಕಂಚುಕಶತಂ ಸ್ಫುಟತು** - ಅನೇಕ ಕಂಚುಕಗಳು ದೇಹವು ಉಬ್ಬುವದರ ಮೂಲಕ ಬಿಚ್ಚಿಹೋಗಲಿ. ಈ ಶ್ಲೋಕದ ಮೂಲಕ ಶ್ರೀರಙ್ಗನಾಥನ ಅನುಜ್ಞೆಯನ್ನು ಲಕ್ಷ್ಮೀಸ್ತೋತ್ರಾರಂಭಕ್ಕಾಗಿ ಪೂಜ್ಯರಾದ ಶ್ರೀ ಪರಾಶರ ಭಟ್ಟರು ಪ್ರಾರ್ಥಿಸುವರಾಗಿ, ಲಕ್ಷ್ಮಿಯನ್ನು ಸ್ತುತಿಸಿರುತ್ತಾರೆ.

(೩) "ತಿರುವುಕ್ಕುಮ್ ತಿರು" ಎನ್ರುಮ್,¹ ಅನ್ಯೋನ್ಯಾತಿಶಯಾವಹಙ್ಗಳಾಗ ವಿಶೇಷಣ ವಿಶೇಷ್ಯಙ್ಗಳೈ ನಿರ್ದೇಶಿಕ್ಕಿರದು ಕ್ಕು ಕ್ಕರುತ್ತೈಯಿಲ್ಲೈ.

(೩) ತಿರುವುಕ್ಕುಮ್ ತಿರುವಾಗಿಯ ಶೆಲ್ವಾ ದೆಯ್‌ವತ್ತುಕ್ಕರಶೇ, ಶೆಯ್ಯ ಕಣ್ಣಾ। ಉರುವಚ್ಚೆಂಶುಡರಾಳಿವಲ್ಲಾನೇ, ಉಲಗುಣ್ಡ ವೊರುವಾ, ತಿರುಮಾರ್ವಾ। ಒರುವರ್‌ಕಾ...ಯುಯ್ಯವಾ ವಗ್ಯೆ ಯುನ್ರಾಲ್ ಉಡನಿನ್ರು ವರೆನುಳ್ ಪುಗನ್ದು ಒಳಿಯಾದು। ಅರುವಿತ್ತಿನ್ರಿಡ ಅಂಜಿ ನಿನ್ನಡೈನ್ದೇನ್ ಅಳುನ್ದೂರ್ ಮೇಲ್ ದಿಶೈನಿನ್ರ ವಮ್ಮಾನೇ॥

ತಿರುವುಕ್ಕುಮ್ ತಿರುವಾಗಿಯ ಶೆಲ್ವಾ ಲಕ್ಷ್ಮಿಯು ಎಲ್ಲರಿಗೂ ಸಂಪದ್ರೂಪಳು, ಅಂತಹ ಲಕ್ಷ್ಮಿಗೂ ಸಂಪದ್ರೂಪನು, ಮತ್ತು ಶ್ರೀ ಶಬ್ದದಿಂದ ಸರ್ವೇಶ್ವರನಿಗೂ ಅತಿಶಯವನ್ನುಂಟು ಮಾಡುವವಳು ಎಂಬರ್ಥವೂ ಉಂಟಾಗುವದರಿಂದ ಪರಸ್ಪರಾತಿಶಯಗಳನ್ನುಂಟುಮಾಡುವವರು ಲಕ್ಷ್ಮಿಯೂ ನಾರಾಯಣನೂ ಎಂಬ ಭಾವವು, ಇಂತಹ ಸುಂದರನೇ, ದೇಯ್‌ವತ್ತುಕ್ಕು ಅರಶೇ ನಿತ್ಯಸೂರಿಗಳಿಗೂ ನಿರ್ವಾಹಕನೇ, ಶೆಯ್ಯ ಕಣ್ಣಾ - ಕಮಲದ ಹಾಗೆ ಕೆಂಪಾದ ಕಣ್ಣುಗಳುಳ್ಳವನೇ, ಉರವುಮ್ ಶೆಮ್ ಶುಡರಾಳಿ ವಲ್ಲಾನೇ - ಕೆಂಪಗೆ ತೇಜೋಮಯವಾದ ಸುದರ್ಶನ ಚಕ್ರವನ್ನು ಹಿಡಿಯುವುದರಲ್ಲಿ ಸಮರ್ಥನೇ, ಉಲಗುಣ್ಡ ಒರುವಾ - ಪ್ರಳಯಕಾಲದಲ್ಲಿ ಪ್ರಪಂಚವನ್ನೆಲ್ಲಾ ನುಂಗುವ ಓ ಅದ್ವಿತೀಯನೇ, ತಿರುಮಾರ್ವಾ - ಲಕ್ಷ್ಮಿಯನ್ನು ವಕ್ಷಸ್ಥಳದಲ್ಲಿ ಳ್ಳವನೇ, ಅಳುನ್ದೂರ್ ಮೇಲ್ ದಿಶೈ ನಿನ್ರ ಅಮ್ಮಾನೇ ತಿರುವಳುನ್ದೂರಿನಲ್ಲಿ ಬಿಜಮಾಡಿಸಿರುವ ಓ ಸ್ವಾಮಿಯೇ, ಒರುವರ್ಕ್ಕು ಆ... ಉಯ್ಯುಮ್ ವಗೈಯುನ್ರು-ಒಂದು ಇಂದ್ರಿಯಕ್ಕಾಗಲಿ ತೃಪ್ತಿಯನ್ನುಂಟು ಮಾಡಿ ಉಜ್ಜೀವಿಸುವ ರೀತಿಯು ನನಗಿಲ್ಲವು; ಅಲ್ - ಅಯ್ಯೋ, ಐವರ್ ಉಡನ್ ನಿನ್ರು - ಐದು ಇಂದ್ರಿಯಗಳೂ ಒಟ್ಟಿಗೆ ಸೇರಿ, ಎನ್ನುಳ್ ಪುಗನ್ದು-ನನ್ನ ಮನಸ್ಸನ್ನು ಪ್ರವೇಶಿಸಿ, ಒಳಿಯಾದು-ಒಂದು ಕ್ಷಣವಾದರೂ ಬಿಟ್ಟಿರದೆ ಅರುವಿತಿನ್ರಿಡ - ಸಂಬಂಧಿಸಲಾಗಿ ಅಂಜಿ - ಅದಕ್ಕೆ ಭಯಪಟ್ಟು, ನಿನ್ನಡೈನ್ದೇನ್ - ನಿನ್ನನ್ನು ಶರಣು ಹೊಕ್ಕೆನು" ಎನ್ರುಮ್ - ಎಂಬದಾಗಿಯೂ, ಅನ್ಯೋನ್ಯಾತಿಶಯಾವಹಙ್ಗಳಾಗ - ಪರಸ್ಪರಾತಿಶಯವನ್ನುಂಟುಮಾಡುವವುಗಳಾಗಿ, ವಿಶೇಷಣ ವಿಶೇಷ್ಯಙ್ಗಳೈ - ವಿಶೇಷಣವಾದ ಲಕ್ಷ್ಮಿಯನ್ನೂ, ವಿಶೇಷ್ಯವಾದ ನಾರಾಯಣನನ್ನೂ, ನಿರ್ದೇಶಿ

(೩) ಪೆರಿ. ತಿರು. ೩, ೭. ೧.

## ಲಕ್ಷ್ಮ್ಯಾಃ ವಿಶೇಷಣತ್ವ ಸಮರ್ಥನೇ ಪ್ರಧಾನ ಫಲಮಾಹ.

**ಶ್ರುತಿಬಲತ್ತಾಲೆ (೧) "ದ್ವಾಚ ಸದೈಕಶೇಷೀ" ಎಙ್ಗಿರಪಡಿಯೇ, "ಉಭಯಾಧಿಷ್ಠಾನಂ ಚೈಕಂ ಶೇಷಿತ್ವಂ" ಎನ್ರು ಶೋಮಾಶಿ ಯಾಂಡಾರ್ ಪದರ್ಥಸಂಕ್ಷೇಪತ್ತಿಲೆ ನಿಷ್ಕರ್ಷಿತ್ತ ಪಡಿಯೇ ಇರುವರುಮ್ ಏಕ ಶೇಷಿ**

---

**ಕ್ಕಿರದರ್ಕ್ಕು ಕ್ಕುರೈ ಯಿಲ್ಲೈ** - ಶೇಷಿತ್ವವಿಷಯದಲ್ಲಿ ನ್ಯೂನತೆಯಿಲ್ಲವು ಎಂದರೆ ಅಭ್ಯಂತರವೇನೂ ಇಲ್ಲವು ಎಂಬ ಭಾವವು ಇಬ್ಬರೂ ಇಲ್ಲಿ ಸ್ವತಸಿದ್ಧವಾದ ಅತಿಶಯವುಳ್ಳವರಾಗಿ ಯಾವಾಗಲೂ ವಿಶೇಷಣ ವಿಶೇಷ್ಯಭಾವದಿಂದಿರುವವರಿಂದ ಪರಸ್ಪರ ಅತಿಶಯವನ್ನುಂಟುಮಾಡತಕ್ಕದ್ದಾಗುವುದು ಸಹಜವಾದುದೇ ಎಂಬ ತಾತ್ಪರ್ಯವು

**ಲೋಕದೃಷ್ಟಾಂತ**ದಲ್ಲಿ ತುಂಬಾ ಧರ್ಮಿಷ್ಠನಾದ ರಾಜನಿಂದ **ರಾಜಪತ್ನಿ**ಗೂ, ಹಾಗೆಯೇ ಮಹಾಪತಿವ್ರತೆ ತಿಯುಳ್ಳವಳಾಗಿ **ಲೋ**ಕಾನುಗ್ರಹಕಾರಿಣಿಯಾದ ರಾಜಪತ್ನಿಯಿಂದ ರಾಜನಿಗೂ ಪರಸ್ಪರಾತಿಶಯವುಂಟು. ಹಾಗೆಯೇ **ಕಾಂತಿ**ಯಿಂದ ರತ್ನಕ್ಕೂ ರತ್ನದಿಂದ ಕಾಂತಿಗೂ ಪರಸ್ಪರಾತಿಶಯವು ಮನೋಹರವಾದ **ಪುಷ್ಪ**ದಿಂದ ಪರಿಮಳಕ್ಕೂ, ಪರಿಮಳದಿಂದ ಪುಷ್ಪಕ್ಕೂ ಅತಿಶಯವುಂಟು

## ಲಕ್ಷ್ಮಿಗೆ ವಿಶೇಷಣತ್ವ ಸಮರ್ಥನೆಯಿಂದುಂಟಾಗುವ ಪ್ರಧಾನ ಫಲವನ್ನು ಹೇಳುತ್ತಾರೆ.

**ಶ್ರುತಿ ಬಲತ್ತಾಲೆ** - ಕೆಲವು ಶ್ರುತಿಗಳು ನಾರಾಯಣನಿಗೆ ಶೇಷಿತ್ವವನ್ನೂ ಇನ್ನು ಕೆಲವು ಲಕ್ಷ್ಮಿಗೆ ಶೇಷಿತ್ವವನ್ನೂ ಹೇಳುವ ಬಲದಿಂದ, "**ಪತಿಂವಿಶ್ವಸ್ಯಾತ್ಮೇಶ್ವರಂ**" ಇತ್ಯಾದಿ ಶ್ರುತಿಗಳು ನಾರಾಯಣನು ಲೋಕೈಕೇಶ್ವರನೆಂದೂ, "**ಅಸ್ಯೇಶಾನಾ ಜಗತೋ ವಿಷ್ಣುಪತ್ನೀ" "ಈಶ್ವರೀಗ್‌ಂ ಸರ್ವಭೂತಾನಾಂ**" ಇತ್ಯಾದಿ ಶ್ರುತಿಗಳು ಲಕ್ಷ್ಮಿಯನ್ನು ಲೋಕೈಕೇಶ್ವರಿ ಎಂದೂ ಹೇಳುವ ಬಲದಿಂದ ಎಂಬ ಭಾವವು, "**ದ್ವಾಚ ಸದೈಕಶೇಷೀ**" - **ದ್ವಾಚ** - ಲಕ್ಷ್ಮೀನಾರಾಯಣರಿಬ್ಬರೂ, **ಸದಾ** - ಯಾವಾಗಲೂ ಎಂದರೆ ಸರ್ವದೇಶ ಸರ್ವಕಾಲ ಸರ್ವಾವಸ್ಥೆಯಲ್ಲಿಯೂ, ಉಪಾಯೋಪೇಯಾವಸ್ಥೆಗಳಲ್ಲಿಯೂ, **ಏಕಶೇಷೀ** - **ಏಕಂಚ ತತ್ ಶೇಷೀಚ** ಎಂಬ ವಿಗ್ರಹವಾಕ್ಯಾನುಸಾರ ಜಗತ್ತಿಗೆ ಒಬ್ಬರಾದ **ಶೇಷಭೂತ**

---

(೧) ಶ್ರೀ ಸಾತ್ವತಂ

**ತತ್ವಾಶ್ರಯಮಾನ ಪಡಿಯಾಲೇ, [ಹವಿರ್ವಿಶೇಷಙ್ಗಳಿಲ್ ಅಗ್ನಾವಿಷ್ಣು ಪ್ರಭೃತಿಗಳುಕ್ಕುಪ್ಪೋಲೆ ಅತ್ಮಹವಿಸ್ಸಮರ್ಪಣ ಪ್ರತಿಸಂಬಂಧಿಗಳಾಗೈಕ್ಕುಮ್ ಕುರೈ ಯಿಲ್ಲೈ.**

---

**ವಸ್ತು" ಎಙ್ಗಿರಪಡಿಯೇ** - ಎಂದು ಹೇಳಿರುವ ಹಾಗೆಯೇ, **ಏಕಶೇಷಿತ್ವಂ** - ಒಂದಾದ ಶೇಷಭಾವವು, ಒಂದಾದ ಶೇಷಿತ್ವಕ್ಕೆ ಆಶ್ರಯರು, **ಉಭಯಾಧಿಷ್ಠಾನಂ** - ಲೋಕದಂಪತಿಗಳಿಬ್ಬರನ್ನೂ ಅಧಿಷ್ಠಾನವಾಗಿವುಳ್ಳದು, ಶ್ರಿಯಃಪತಿಯೇನು, ವಿಷ್ಣುಪತ್ನಿಯೇನು ಹೀಗೆ ಉಭಯಾಶ್ರಯನೆಂದು, **ಎನ್ರು** - ಎಂಬದಾಗಿ, ಶ್ರೀರಾಮಮಿಶ್ರ [illegible] ಅವರು ರಚಿಸಿದ **ಷಡರ್ಥಸಂಕ್ಷೇಪ** ವೆಂಬ ಗ್ರಂಥದಲ್ಲಿ, **ನಿಷ್ಕರ್ಷಿತ್ತಪಡಿಯೇ** - ನಿರ್ಣಯವಾಗಿ ಹೇಳಿದಹಾಗೆ, **ಇರುವರುಮ್** ಲಕ್ಷ್ಮೀನಾರಾಯಣರಿಬ್ಬರೂ, **ಏಕಶೇಷಿತ್ವಾಶ್ರಯಮಾನ ಪಡಿಯಾಲೆ** - ಒಂದಾದ ಶೇಷಿತ್ವಕ್ಕೆ ಆಶ್ರಯವಾಗಿರುವದರಿಂದ. **ಹವಿರ್ವಿಶೇಷಙ್ಗಳಿಲ್** - ಹವಿರ್ವಿಶೇಷಕ್ಕೆ ಉದ್ದೇಶ್ಯರಾದ, **ಅಗ್ನಾವಿಷ್ಣು ಪ್ರಭೃತಿಗಳುಕ್ಕುಪ್ಪೋಲೆ** - ಒಂದೇ ಹವಿಸ್ಸಿಗೆ ಇಬ್ಬರಾದ ಅಗ್ನಿ ವಿಷ್ಣುಗಳೇ ದೇವತೆಯಾದವರಿಗೆ ಉದ್ದೇಶ್ಯವಾದಹಾಗೆ, ಎಂದರೆ ಇಬ್ಬರೂ ಸೇರಿ ಒಂದು ದೇವತಾತ್ವವು ಹೇಗೋ, **ಆತ್ಮ ಹವಿಸ್ಸಮರ್ಪಣ ಪ್ರತಿ ಸಂಬಂಧಿಗಳಾಗೈಕ್ಕುಮ್** - ಓಂ ಎಂಬದಾಗಿ ಪ್ರಣವ ಮೂಲಕವಾಗಿ ಈ ನನ್ನ ಆತ್ಮ ಎಂಬ ಹವಿಸ್ಸನ್ನು ಸಮರ್ಪಿಸಲು ಉದ್ದೇಶ್ಯರಾಗಿರುವದಕ್ಕೆ ಇಲ್ಲಿ ಆತ್ಮನು ಸಂಬಂಧಿಯು, ಲಕ್ಷ್ಮೀನಾರಾಯಣರು ಪ್ರತಿ ಸಂಬಂಧಿಗಳು ಈ ಪ್ರತಿ ಸಂಬಂಧಿಗಳನ್ನು ನೈಯಾಯಿಕರು ಅನುಯೋಗಿ ಎಂದು ಹೇಳುತ್ತಾರೆ, ಆದುದರಿಂದಲೇ ಪ್ರತಿಸಂಬಂಧಿಗಳೆಂಬ ಪ್ರಯೋಗವು. ಆದುದರಿಂದ ಪ್ರತಿಸಂಬಂಧಿಗಳೆಂದರೆ ಉದ್ದೇಶ್ಯರು, ಹೀಗೆ ಉದ್ದೇಶ್ಯರಾಗಿರುವದಕ್ಕೆ, **ಕುರೈ ಯಿಲ್ಲೈ** - ನ್ಯೂನತೆ ಏನೂ ಇಲ್ಲವು ಭರನ್ಯಾಸದಲ್ಲಿ ಆತ್ಮ ಹವಿಸ್ಸಮರ್ಪಣೆಯೇ ಅಙ್ಗವು, ಇದೇ ಆತ್ಮ ಹವಿಸ್ಸು, ಇದನ್ನು "**ಓಮಿತ್ಯಾತ್ಮಾನಂ ಯುಞ್ಜೀತ**" ಎಂಬ ವಿಧಿವಾಕ್ಯಾನುಸಾರವಾಗಿ ಸಮರ್ಪಿಸುವಾಗ, ಲೋಕದಂಪತಿಗಳಾದ ಇಬ್ಬರ ಪಾದಗಳಲ್ಲೂ ಸಮರ್ಪಿಸತಕ್ಕದ್ದೆಂದು ಹೇಳಲ್ಪಟ್ಟಿತು. ಪ್ರಣವಾರ್ಥವೇ ಇಬ್ಬರೂ ಉದ್ದೇಶ್ಯರೆಂದು ತಿಳಿಸುತ್ತದೆ ಅಕಾರವು ಲಕ್ಷ್ಮೀ ವಿಶಿಷ್ಟನಾದ ವಿಷ್ಣುವನ್ನೇ ಬೋಧಿಸಿ ಅವರಿಬ್ಬರಗೋಸ್ಕರವಾಗಿಯೇ ಈ ಮಕಾರ ವಾಚ್ಯನಾದ ಜೀವನು ಎಂಬರ್ಥದಿಂದಲೇ ದ್ಯೋತಿತವು. ಅಥವಾ "**ಅಕಾರೇಣೋಚ್ಯತೇ ವಿಷ್ಣುಸ್ಸರ್ವಲೋಕೇಶ್ವರೋ ಹರಿಃ । ಉದ್ಧೃತಾ**

## ಏಕ ಶೇಷಿತ್ವ ಕಥನಂ ಏಕಪ್ರಾಧಾನ್ಯಾತ್.

(೧) "ಯುವತ್ವಾದೌ ತುಲ್ಯೇಪ್ಯ ಪರವಶತಾ ಶತ್ರುಶಮನ ಸ್ಥಿರತ್ವಾ

ಏಷ ನಾಲಕ್ಷ್ಮೀರುಕಾರೇಣೋಚ್ಯತೇ ತಥಾ । ಮಕಾರಸ್ತು ತಯೋರ್ದಾಸ ಇತಿ ಪ್ರಣವ ಲಕ್ಷಣಂ" ಎಂಬ ಪ್ರಮಾಣದಲ್ಲಿ ಇದು ಸುವ್ಯಕ್ತವು. ಆದುದರಿಂದ ಓಂ ಎಂಬುದಾಗಿ ಆತ್ಮಹವಿಸ್ಸಮರ್ಪಣೆಯು ಇಬ್ಬರ ಪಾದಾರವಿಂದದಲ್ಲೂ ಎಂದು ತಿಳಿಯತಕ್ಕದ್ದು. ಹೀಗೆ ಒಂದು ಹವಿಸ್ಸಿಗೆ ಇಬ್ಬರು ಉದ್ದೇಶ್ಯರುಂಟೋ ಎಂದರೆ, ಉಂಟೆಂಬುದಾಗಿ ದೃಷ್ಟಾಂತಮೂಲಕವಾಗಿ ತಿಳಿಸುತ್ತಾರೆ.— ಅಗ್ನಾವಿಷ್ಣು ಪ್ರಭೃತಿಗಳುಕ್ಕು ಪ್ರೋಲೆ ಎಂದು ಹೇಳಿದರು. ಆತ್ಮಹವಿಸ್ಸಮರ್ಪಣ ಮಂತ್ರವು "ವಸುರಣ್ಯೋ ವಿಭೂರಸಿ" ಎಂಬುದಾಗಿ ಪ್ರಾರಂಭಿಸಿ ಓಮಿತ್ಯಾತ್ಮಾನಂ ಯುಂಜೀತ ಎಂದು ಮುಗಿಯುವವರೆಗೂ ಇರುವ ಮಂತ್ರವು. ಈ ಮಂತ್ರ ಮತ್ತು ಅರ್ಥಗಳಿಗೆ ದಾಸನು ಬರೆದಿರುವ ಶ್ರೀ ಸ್ತುತಿಯ ವರ್ಣನೆಯ ಪುಟವನ್ನು ಪರಾಂಬರಿಸಿ. ಶ್ರೀ ಸ್ತುತಿಯ ೬ನೆಯ ಶ್ಲೋಕದಲ್ಲೂ ಶ್ರೀ ದೇಶಿಕರವರು ಈ ಅಭಿಪ್ರಾಯವನ್ನೇ ಸಮರ್ಥನೆಮಾಡಿರುತ್ತಾರೆ:—"ಪ್ರತ್ಯಗ್ರಾಸೇ ಹವಿಷಿ ಯುವಯೋರೇಕಶೇಷಿತ್ವ ಯೋಗಾತ್" ಎಂದು ಹೇಳಿರುತ್ತಾರೆ. ಇದರ ಅರ್ಥವು ಅಲ್ಲಿಯೇ ಉಪಪಾದಿಸಲ್ಪಟ್ಟಿರುತ್ತದೆ.

ಆದರೆ, ಆತ್ಮಹವಿಸ್ಸಮರ್ಪಣೆಗೆ ಪ್ರತಿಸಂಬಂಧಿತ್ವವಿಬ್ಬರಿಗೂ ಉಂಟಾದರೆ "ತಮೇವಂ ವಿದಿತ್ವಾತಿ ಮೃತ್ಯುಮೇತಿ", "ತಮೇವಂ ವಿದ್ವಾನಮೃತ ಇಹ ಭವತಿ" "ತಂ ವಾಸುದೇವಂ ಶರಣಂ ಗತೋಸ್ಮಿ", "ಮಾಮೇಕಂ ಶರಣಂ ವ್ರಜ" ಇತ್ಯಾದಿ ವಾಕ್ಯಗಳಲ್ಲಿ ನಾರಾಯಣನು ಮಾತ್ರವೇ ಹೇಳಲ್ಪಟ್ಟಿರುತ್ತಾನಲ್ಲಾ ಎಂದರೆ ಅದಕ್ಕೆ ಸಮಾಧಾನವನ್ನು ಹೇಳುತ್ತಾರೆ.

### ಶ್ರುತಿಗಳಲ್ಲಿ ಒಬ್ಬ ಯಜಮಾನನೆಂಬ ನಿರ್ದೇಶವು, ಯಜಮಾನ ಪ್ರಾಧಾನ್ಯದಿಂದ

ಈ ಮೇಲಿನ ಶ್ರುತಿಗಳಲ್ಲಿ ನಾರಾಯಣನೊಬ್ಬನನ್ನೇ ಹೇಳಿರುವದು ಸನ್ನಿಯೋಗ ಶಿಷ್ಟನ್ಯಾಯದಿಂದ ಹೇಳಬಹುದು. ಲಕ್ಷ್ಮಿಯು ಅಪೃಥಕ್ಸಿದ್ಧ ವಿಶೇಷಣವಾದುದರಿಂದ ಯಾವಾಗ ನಾರಾಯಣನು ಹೇಳಲ್ಪಟ್ಟನೋ, ಲಕ್ಷ್ಮಿಯು ಸದಾ

(೧) ಶ್ರೀಗುಣ ೩೪.

ದೀನ್ ಕೃತ್ವಾ ಭಗವತಿ ಗುಣಾನ್ ಪುಂಸ್ತ್ವ ಸುಲಭಾನ್ । ತ್ವಯಿ ಸ್ತ್ರೀತ್ವೈ ಕಾಂತಾನ್ ಮೃದಿಮ ಪತಿಪಾರಾರ್ಥ್ಯ ಕರುಣಾ ಕ್ಷಮಾದೀನ್ವಾ ಭೋಕ್ತ್ರಂ ಭವತಿ ಯುವಯೋರಾತ್ಮನಿ ಭಿದಾ", ಎಜ್ಞಿರಪಡಿಯೋ, ಶಕ್ತಿಕ್ಕ

---

ಜೊತೆಯಲ್ಲೇ ಇರುವದರಿಂದ ಆಕೆಯೂ ಹೇಳಲ್ಪಟ್ಟಳೆಂದು ಭಾವಿಸಬಹುದು. ಸೀತೆಯು ಹಾಗೆಯೇ ಹೇಳಿಕೊಂಡಿರುತ್ತಾಳೆ —"ಅನನ್ಯಾ ರಾಘವೇಣಾಹಂ ಭಾಸ್ಕರೇಣ ಪ್ರಭಾಯಥಾ" ಸೂರ್ಯನಿಗೆ ಪ್ರಭೆಯು ಹೇಗೆ ಯಾವಾಗಲೂ ಒಟ್ಟಿಗಿರುತ್ತದೋ ಹಾಗೆಯೇ ನಾನೂ ಶ್ರೀರಾಮನನ್ನಗಲಿರಲಾರೆನು." ಪ್ರವೃತ್ತಿ ನಿವೃತ್ತಿಗಳು ಇಬ್ಬರಿಗೂ ಒಟ್ಟಿಗೆ ಉಂಟಾಗುವದರಿಂದ ಒಂದನ್ನು ಹೇಳಿದ ನಂತರ ಇನ್ನೊಂದನ್ನು ಹೇಳಿದಂತಾಯಿತೆಂದು ಭಾವಿಸಬಹುದು. ಇದರಿಂದಲೇ ಶ್ರುತಿಯು ಲಕ್ಷ್ಮಿಯನ್ನು ಬೇರೆಯಾಗಿ ಅನೇಕ ಕಡೆಗಳಲ್ಲಿ ಹೇಳಲಿಲ್ಲವೆಂದು "ನ ಪೃಥಗಭಿಧತ್ತೇ ಶ್ರುತಿರಪಿ" ಎಂದು ಶ್ರೀ ಪರಾಶರಭಟ್ಟರು ಹೇಳಿದರು ಇದನ್ನು ಮುಂದೆ ಶ್ರೀ ದೇಶಿಕರವರು ಉಪಪಾದಿಸುತ್ತಾರೆ ಹೀಗೆ ಇಬ್ಬರು ಯಾವಾಗಲೂ ಜೊತೆಯಲ್ಲಿದ್ದುದಾದರೆ ಶ್ರುತಿಯು ಲಕ್ಷ್ಮಿಯನ್ನು ಮಾತ್ರವೇ ಹೇಳಲಿ, ನಾರಾಯಣನನ್ನು ಊಹಿಸೋಣ ಎಂಬ ಪೂರ್ವಪಕ್ಷವು ಬರಬಹುದು ಅದಕ್ಕೆ ಸಮಾಧಾನವಾಗಿ ಸನ್ನಿಯೋಗಶಿಷ್ಟನ್ಯಾಯದ ಪ್ರಕಾರ ಇದಕ್ಕೆ ಸಮಾಧಾನವು ಮುಂದೆ ಉಪಪಾದಿಸುವಹಾಗೆ ಆದರೂ, ಪತಿಪಾರಾರ್ಥ್ಯವು ಆಕೆಗೆ ಇಷ್ಟವಾದುದರಿಂದ, ನಾರಾಯಣನಿಗೆ ಪ್ರಾಧಾನ್ಯವನ್ನು ಈ ನಾರಾಯಣನೊಬ್ಬನನ್ನು ಮಾತ್ರ ಹೇಳುವ ಶ್ರುತ್ಯಾದಿಗಳು ಬೋಧಿಸುತ್ತವೆಂದು ಹೇಳಲು "ಯುವತ್ವಾದೌ" ಎಂಬ ಪರಾಶರ ಭಟ್ಟರ ಶ್ಲೋಕವನ್ನು ಮುಂದೆ ಉದಾಹರಿಸುತ್ತಾರೆ. ಈ ಶ್ಲೋಕವು ಹಿಂದೆ ತತ್ತ್ವತ್ರಯಾಧಿಕಾರದಲ್ಲೂ ಉದಾಹರಿಸಲ್ಪಟ್ಟಿರುತ್ತದೆ ೫೪೮ನೆಯ ಪುಟ ನೋಡಿ.

ಯುವತ್ವಾದೌ - ಇದರ ಹಿಂದಿನ ಶ್ಲೋಕದಲ್ಲಿ ಉಪಪಾದಿಸಿದಹಾಗೆ ಯೌವ್ವನ ಮೊದಲಾದವುಗಳು, ತುಲ್ಯೇಪಿ - ನಿನಗೂ ನಿನ್ನ ಪತಿಗೂ ಸಹ ಸಮವಾದರೂ ಕೂಡ, ಅಪರವಶತಾ-ಇನ್ನೊಬ್ಬರಿಗೆ ಅಧೀನನಾಗದಿರುವಿಕೆಯೂ, ಶತ್ರುಶಮನ - ಶತ್ರುವನ್ನು ನಾಶಮಾಡುವದು, ಸ್ಥಿರತ್ವಾದೀನ್ - ಸತ್ಯಪರಾಕ್ರಮನು ಸತ್ಯಸಙ್ಕಲ್ಪನು ಇತ್ಯಾದಿ ನಿನ್ನ ಬಿರುದುಗಳಲ್ಲಿ ತೋರುವ ಸ್ಥಿರತ್ವ ಮೊದಲಾದವುಗಳಾದ ಪುಂಸ್ತ್ವ ಸುಲಭಾನ್ - ಪುರುಷನಿಗೆ ಯೋಗ್ಯವಾಗಿ ಸುಲಭಗಳಾದ, ಗುಣಾನ್ - ಗುಣಗಳನ್ನು ಭಗವತಿ - ನಿನ್ನ ಪತಿಯಾದ ಭಗ

ವಂಶನಲ್ಲಿ, ಕೃತ್ವಾ - ಮಾಡಿ," ಎಂದರೆ ಅವನಲ್ಲಿ ಬಿಟ್ಟು, ತ್ವಯಿ - ನಿನ್ನಲ್ಲಾದರೋ, ಸ್ತ್ರೀತ್ವೈ ಕಾಂತಾ - ಸ್ತ್ರೀಯಾಗಿರುವದಕ್ಕೆ ಮಾತ್ರವೇ ಯೋಗ್ಯವಾದ, ಮೃದಿಮ - ಮೃದುಸ್ವಭಾವ, ಪತಿಪಾರಾರ್ಥ್ಯ - ಪತಿಗೆ ಸರ್ವ ವಿಧದಲ್ಲೂ ಅಧೀನಳಾಗಿರುವಿಕೆ, ಕರುಣೆ, ಕ್ಷಮಾ ಆದೀ - ಇವೇ ಮೊದಲಾದ ಗುಣ ಗಳನ್ನು, ಭೋಕ್ತುಂ - ಅನುಭವಿಸುವವಕ್ಕೆ ಎಂದರೆ ಹೊಂದಿರುವದಕ್ಕೆ, ಯುವಯೋಃ - ನಿಮ್ಮಿಬ್ಬರಿಗೂ, ಆತ್ಮನಿ ಭಿದಾ - ಸ್ವರೂಪದಲ್ಲಿ ಸ್ವಲ್ಪ ವ್ಯತ್ಯಾಸವು, ಭವತಿ - ಉಂಟಾಗುತ್ತದೆ ಶ್ರೀ ಭಟ್ಟರು ಹಿಂದಿನ ಶ್ಲೋಕಗಳಲ್ಲಿ ಇಬ್ಬರ ಸ್ವರೂಪದಲ್ಲೂ ಏನೂ ವ್ಯತ್ಯಾಸವಿಲ್ಲವೆಂಬ ಶ್ರೀ ವಿಷ್ವಕ್ಸೇನ ಸಂಹಿತಾ ಪ್ರಮಾಣಾಭಿಪ್ರಾಯವನ್ನು ಉಪಪಾದಿಸಿದರು ಅಲ್ಲಿ ಹೇಳಿರುವದೇನೆಂದರೆ:—

ತಥಾ ಲಕ್ಷ್ಮ್ಯಾಃ ಸ್ವರೂಪಂಚ ವಕ್ಷ್ಯೇ ಶೃಣು ಸಮಾಹಿತಃ ।
ಗುಣತಶ್ಚ ಸ್ವರೂಪೇಣ ವ್ಯಾಪ್ತಿಸ್ಸಾಧಾರಣೀ ಮತಾ ॥
ಯಥಾ ಮಯಾ ಜಗದ್ವ್ಯಾಪ್ತಂ ಸ್ವರೂಪೇಣ ಸ್ವಭಾವತಃ ।
ತಥಾ ವ್ಯಾಪ್ತಂ ತಯಾಸರ್ವಂ ನಿಯಂತ್ರೀಚ ತಥೇಶ್ವರೀ ॥

ಭಗವಂತನು ವಿಷ್ವಕ್ಸೇನರಿಗೆ ಹೇಳುತ್ತಾನೆ.—ಲಕ್ಷ್ಮಿಯ ಸ್ವರೂಪವನ್ನೂ ಹಾಗೆಯೇ ಹೇಳುತ್ತೇನೆ, ಸಮಾಧಾನ ಚಿತ್ತನಾಗಿ ಕೇಳು; ಗುಣಗಳಿಂದಲೂ, ಸ್ವರೂಪದಿಂದಲೂ ವ್ಯಾಪ್ತಿ ಎಂಬುದು ನಮ್ಮಿಬ್ಬರಿಗೂ ಸಾಧಾರಣವಾದುದು. ಈ ಜಗತ್ತೆಲ್ಲವೂ ನನ್ನಿಂದ ಹೇಗೆ ವ್ಯಾಪಿಸಲ್ಪಟ್ಟಿರುತ್ತದೆಯೋ ಹಾಗೆಯೇ ಲಕ್ಷ್ಮಿಯಿಂದಲೂ ಇವೆಲ್ಲವೂ ವ್ಯಾಪಿಸಲ್ಪಟ್ಟಿವೆ ನಾನು ಹೇಗೆ ಎಲ್ಲದಕ್ಕೂ ನಿಯಾಮಕನಾಗಿ ಈಶ್ವರನೋ, ಹಾಗೆಯೇ ಅವಳೂ ನಿಯಾಮಕಳಾಗಿ ಈಶ್ವರಳು, ಹೀಗೆ ಇಬ್ಬರೂ ಸಮರು ಎಂದು ಹೇಳಲ್ಪಟ್ಟಿತು. ಹಾಗಾದರೆ ಏನೊಂದೂ ವೈಲಕ್ಷಣ್ಯವಿಲ್ಲವೋ? ಹಾಗಾದರೆ ನಿತ್ಯಮುಕ್ತರುಗಳು ನಿಮ್ಮಿಬ್ಬರನ್ನು ಭಾವಿಸಿ ಪರಿಪೂರ್ಣಾನುಭವವನ್ನು ಮಾಡುವದು ಹೇಗೆ ಎಂದರೆ, ಸ್ವಲ್ಪ ವೈಲಕ್ಷಣ್ಯವುಂಟೆಂದು ಮುಂದೆ ಅದೇ ಪ್ರಮಾಣವೇ ತಿಳಿಸುತ್ತದೆ —

ಮಚ್ಛೇಷಭೂತಾ ಸರ್ವೇಷಾ ಮೀಶ್ವರೀ ವಲ್ಲಭಾ ಮಮ
ತಸ್ಮಾಚ್ಚ ಜಗತಶ್ಚಾಹ ಮೀಶ್ವರೋ ವೇದವಿಶ್ರುತಃ
ಅಸ್ಯಾ ಮಮಚ ಶೇಷಂಹಿ ವಿಭೂತಿ ರುಭಯಾತ್ಮಿಕಾ ॥

ಎಲ್ಲದಕ್ಕೂ ನಿಯಾಮಕಳಾಗಿ ಈಶ್ವರೀ ಎನ್ನಿಸಿಕೊಂಡಿರುವ ನನ್ನ ವಲ್ಲಭೆಯು ನನಗೆ ಶೇಷಭೂತಳು, ಆದುದರಿಂದ ಆಕೆಗೂ ಜಗತ್ತಿಗೂ ಕೂಡ ನಾನು ಈಶ್ವರನೆಂಬುದು ವೇದಪ್ರಸಿದ್ಧವಾದುದು ಈ ಎರಡು ವಿಭೂತಿಗಳು ಆಕೆಗೂ ನನಗೂ ಸಹ ಶೇಷಭೂತವಾದುದು. ಹೀಗೆ ಲಕ್ಷ್ಮಿಯು ಸರ್ವೇಶ್ವರನಿಗೆ ಸಮನಾದ

**ಪತ್ನಿಕ್ಕು ಪತಿಪಾರಾರ್ಥ್ಯತ್ತಾಲೆ ಯಾಗಕರ್ತೃತ್ತಿರ್ಪ್ಪೋಲೆ ಪತಿಪ್ರಧಾನಮಾಗ ಶಾಸ್ತ್ರಙ್ಗಳಿಲ್ ವ್ಯ (ಉ) ಪದೇಶಙ್ಗಳುಕ್ಕುಮ್ ಏಕ ಯಜಮಾನನೆನ್ರುಮಾಪ್ಪೋಲೆ ಏಕತ್ವಪದೇಶತ್ತುಕ್ಕುಮ್ ಕುರೈ ಇಲ್ಲೈ.**

ಸ್ವರೂಪಾದಿಗಳನ್ನು ಮಹರ್ಷಿವಾಕ್ಯವಾದ "**ತುಲ್ಯಶೀಲ ವಯೋವೃತ್ತಾಂ ತುಲ್ಯಾಭಿ ಜನಲಕ್ಷಣಾಂ । ರಾಘವೋಽರ್ಹತಿವೈದೇಹೀಂ ತಂಚೇಯಂ ಮಸಿತೇಕ್ಷಣಾ**" (ರಾಮಾ ಸುಂ) ಎಂಬುದರಲ್ಲಿ ಉಪಪಾದಿಸಿರುವ ಹಾಗೆ ಹೊಂದಿದ್ದರೂ, ಪತಿಪಾರಾರ್ಥ್ಯ ಉಳ್ಳವಳಾಗಿ ಪತಿಗೆ ತನ್ನಿಷ್ಟಾನುಸಾರ ಶೇಷಭೂತಳೆಂದು ತಿಳಿಸುವುದಕ್ಕಾಗಿ ಈ ಯಾವತ್ಸ್ಯಾದಾ - ಎಂಬ ಶ್ಲೋಕವನ್ನು ಇಲ್ಲಿ ಉದಾಹರಿಸಿರುತ್ತಾರೆ" ಎಙ್ಗರಪಡಿಯೇ - ಎಂದು ಹೇಳಿರುವ ಹಾಗೆ, **ಪತ್ನಿಕ್ಕು** - ಹೆಂಡತಿಯಾದ ಲಕ್ಷ್ಮಿಗೆ, **ಪತಿಪಾರಾರ್ಥ್ಯತ್ತಾಲೆ** - ಪತಿಗೆ ಶೇಷಭೂತಳಾಗಿರುವದರಿಂದ, **ಯಾಗಕರ್ತೃತ್ತಿರ್ಪ್ಪೋಲೆ** - **ಯಜೇತಸ್ವರ್ಗಕಾಮಃ** - ಸ್ವರ್ಗಾಪೇಕ್ಷೆಯುಳ್ಳವನು ಯಜ್ಞ ಮಾಡತಕ್ಕದ್ದೆಂದು ಯಾಗಕರ್ಮಗಳಲ್ಲಿ ಹೇಳಿರುವ ಹಾಗೆ, **ಪತಿಪ್ರಧಾನಮಾಗ** - ಗಂಡನೇ ಮುಖ್ಯವಾದವನಾಗಿ, **ಶಾಸ್ತ್ರಙ್ಗಳಿಲ್ ವ್ಯಪದೇಶತ್ತುಕ್ಕು** - ಶ್ರುತಿ ಮೊದಲಾದ ಶಾಸ್ತ್ರಗಳಲ್ಲಿ ಹೇಳಿರುವದಕ್ಕೂ, **ಏಕ ಯಜಮಾನನೆನ್ರುಪ್ಪೋಲೆ** - ಒಬ್ಬನೇ ಯಜಮಾನನೆಂದು ಹೇಳುವಹಾಗೆ, **ಏಕತ್ವಪದೇಶತ್ತುಕ್ಕುಮ್** - ಇಲ್ಲಿಯೂ ಒಬ್ಬನಾದ ಯಜಮಾನನಾದ ನಾರಾಯಣನೇ ಶೇಷಿಯು ಎಂಬ ಹೇಳಿಕೆಗೆ, **ಕುರೈಯಿಲ್ಲೈ** - ನ್ಯೂನತೆ ಏನೂ ಇಲ್ಲವು, ವಿರೋಧವೇನೂ ಇಲ್ಲವೆಂಬ ಭಾವವು. "**ಪತ್ಯುರ್ನೋ ಯಜ್ಞಸಂಯೋಗೇ**" ಎಂದರೆ ಪತ್ನೀಶಬ್ದವು, ಯಜ್ಞಸಂಬಂಧ ಉಂಟಾದಾಗ ನಕಾರದಿಂದ ಕೂಡಿದ ಪತಿಶಬ್ದದಿಂದ ನಿಷ್ಪನ್ನವಾಗುವದರಿಂದ ಹೆಂಡತಿಗೆ ಯಜ್ಞದಲ್ಲಿ ಸಮಾನಾಧಿಕಾರವಿದ್ದರೂ, ಯಾಗಮಂತ್ರಗಳಲ್ಲಿ ಯಜಮಾನನೊಬ್ಬನನ್ನು ಹೇಳಿ ಹೆಂಡತಿಯನ್ನು ಹೇಳದಿದ್ದರೂ, ಹೇಗೆ ಆಕೆಗೂ ಸಹ ಅನ್ವಯಿಸುತ್ತದೋ ಹಾಗೆಯೇ ಇಲ್ಲಿಯೂ ನಾರಾಯಣನೊಬ್ಬನನ್ನೇ ಶ್ರುತಿಗಳೂ ಇತರ ಶಾಸ್ತ್ರಗಳೂ ಹೇಳಿದರೂ, ಇಬ್ಬರೂ ಹೇಳಲ್ಪಟ್ಟರೆಂದು ಭಾವಿಸತಕ್ಕದ್ದೆಂಬ ಭಾವವು **ಯಜೇತಸ್ವರ್ಗಕಾಮಃ** ಸ್ವರ್ಗಕಾಮನೆಯುಳ್ಳವನು ಯಾಗ ಮಾಡತಕ್ಕದ್ದೆಂದು ವಿಧಿಸಿದರೂ, ಪತ್ನಿಗೆ ಸ್ವರ್ಗಕಾಮನೆ ಇಲ್ಲವೇ ? ಹಾಗೆ ಯಜ್ಞಕಾಮನೆ ಇಷ್ಟದಾದರೆ ಆಕೆಯು ಬೇರೇ ಯಜ್ಞ ಮಾಡಬೇಕೇ ? ಎಂಬ ಸಂದೇಹದಲ್ಲಿ, ಪತಿಯೊಂದಿಗೇನೆ ಆಕೆಗೂ ಯಜ್ಞಾಧಿಕಾರವೇ ವಿನಾ ಪ್ರತ್ಯೇಕವಿಲ್ಲವೆಂಬುದು

ಸಿದ್ಧವು ಯಜಮಾನನು ಸ್ನಾನಮಾಡತಕ್ಕದ್ದೆಂದು ವಿಧಿ ಇದ್ದರೆ, ಹೆಂಡತಿಗೆ ಸ್ನಾನ ಬೇಡವೇ ? ಆಕೆಗೂ ಸ್ನಾನ ವಿಧಿ ಹೇಗೆ ಅನ್ವಯಿಸುತ್ತದೋ ಹಾಗೆ. ಆದುದರಿಂದ, ಪತ್ನಿ ಇಲ್ಲದಿದ್ದ ಪಕ್ಷದಲ್ಲಿ ಯಜಮಾನನಿಗೆ ಯಾವ ಯಜ್ಞ ರೂಪ ವಿಧಿಗೂ ಅಧಿಕಾರವೇ ಇಲ್ಲವು ದ್ವಿಜನ ಹೆಂಡತಿಗೆ ಯಜ್ಞದಲ್ಲಿ ಸಮಾನಾಧಿಕಾರವಿರುವದರಿಂದಲೇ ಪತ್ನೀ ಎಂಬ ಶಬ್ದವು ಶೂದ್ರನ ಹೆಂಡತಿಗೆ ಶೂದ್ರಪತ್ನೀ ಎಂಬ ವ್ಯವಹಾರವಿಲ್ಲವು, ಶೂದ್ರ ಭಾರ್ಯಾ ಎಂದು ಹೇಳತಕ್ಕದ್ದು. ಹಾಗೆಯೇ ಹೆಂಡತಿ ಇಲ್ಲದವನಿಗೆ ಔಪಾಸನ, ಬ್ರಹ್ಮಯಜ್ಞ, ವೈಶ್ವದೇವಾದಿಗಳಿಗೆ ಅಧಿಕಾರವಿಲ್ಲವು ಹೀಗೆ ಯಾಗ ವಿಧಿಗಳೆಲ್ಲಾ ಯಜಮಾನನೊಬ್ಬನನ್ನುದ್ದೇಶಿಸಿ ಹೇಳಿದರೂ ಪತ್ನಿಗೂ ಹೇಗೆ ಅನ್ವಯಿಸುತ್ತವೋ ಹಾಗೆಯೇ ಯಜ್ಞರೂಪವಾದ ಜಗತ್ತಿನ ಸೃಷ್ಟಿಸ್ಥಿತಿ ನಿಯಮನಾದಿಗಳಲ್ಲೆಲ್ಲಾ ಅಧಿಕಾರವು ನಾರಾಯಣನೊಬ್ಬನಿಗೇ ಎಂದು ಹೇಳಿದ್ದರೂ ಲಕ್ಷ್ಮಿಗೂ ಅನ್ವಯಿಸುತ್ತದೆ ಹಾಗೆಯೇ ಉಪಾಯೋಪೇಯತ್ವಗಳಲ್ಲೂ ಇಬ್ಬರಿಗೂ ಅಧಿಕಾರವುಂಟು ಆದುದರಿಂದ ಶೇಷಿತ್ವಕ್ಕೆ ಇಬ್ಬರಿಗೂ ಅಧಿಕಾರವಿದ್ದರೂ, ಲಕ್ಷ್ಮಿಯೂ ನಾರಾಯಣನಿಗೆ ಶೇಷಳಾದ ಪ್ರಯುಕ್ತ ವಿಶೇಷ್ಯನಾದ ನಾರಾಯಣನಿಗೆ ಸರ್ವ ಶೇಷಿತ್ವದಿಂದ ಪ್ರಾಧಾನ್ಯಭಾವನೆ ಇರುವದರಿಂದ ನಾರಾಯಣನೊಬ್ಬನನ್ನೇ ಕುರಿತೇ ಶಾಸ್ತ್ರಗಳಲ್ಲಿ ವ್ಯಪದೇಶವೆಂಬ ತಾತ್ಪರ್ಯವು ವಿಶೇಷಣವಾದ ಲಕ್ಷ್ಮಿಯನ್ನು ಹೇಳಬೇಕಾದುದಿಲ್ಲವು. ಇಬ್ಬರಿಗೂ ಶೇಷಿತ್ವ ಉಂಟೆಂದೂ, ಇಬ್ಬರಿಗೂ ಈಶಿತೃತ್ವ ಉಂಟೆಂದೂ "ತಥಾಪ್ಯನನ್ಯ ಸಾಧಾರಣ ಮಾಶಿತೃತ್ವಂ ಶ್ರೀ ಶ್ರೀಶಯೋ ದ್ವ್ಯ ಚ ಸದ್ಭಿಃ ಶೇಷೀ" ಎಂಬ ಅಹಿರ್ಬುಧ್ನ್ಯ ಸಂಹಿತಾವಾಕ್ಯವು ವ್ಯಕ್ತವಾಗಿ ಹೇಳಿರುತ್ತದೆ.

ಮುಂದೆ ಆಳ್ವಾರುಗಳೂ ಕೂಡ ಈ ಪ್ರಾಧಾನ್ಯಾಭಿಪ್ರಾಯದಿಂದ ಏಕವೆಂಬ ಪದಪ್ರಯೋಗವನ್ನೇ ಮಾಡಿರುತ್ತಾರೆಂದು ಪೊಯ್ಗೈಯಾಳ್ವಾರ್ ಸೂಕ್ತಿಯನ್ನು ಉದಾಹರಿಸುತ್ತಾರೆ.

ಪೆಯರುಮ್ ಕರುಙ್ಗಡಲೇ ನೋಕ್ಕುಮಾರು, ಓಣ್ ಪೂ
ವುಯರುಮ್ ಕದಿರವನೇ ನೋಕ್ಕುಮ್ - ಉಯುರುಮ್
ತರುಮನೈಯೇ ನೋಕ್ಕುಮ್, ಒಣ್ಡಾಮರೈಯಾಳ್ ಕೇಳ್ವ
ಒರುವನೈಯೇ ನೋಕ್ಕ ುಣರ್ವು. ಎಂಬುವದು ಪೂರಾ ಪಾಶುರವು

ಇದರರ್ಥವು—ಆರು - ನದಿಯು ಪೆಯರುಮ್ - ತುಂಬಿ ತುಳುಕುತ್ತಿರುವ, ಕರುಮ್ - ವಿಶಾಲವಾದ, ಕಡಲೇ - ಸಮುದ್ರವನ್ನೇ ನೋಕ್ಕುಮ್ - ಎದುರು ನೋಡುತ್ತದೆ. ಎಂದರೆ ಅದನ್ನು ಸೇರಿದಲ್ಲದೆ ತನಗೆ ಗತಿ ಇಲ್ಲವೆಂಬ

(೧) "ತಾಮರೈಯಾಳ್ ಕೇಳ್ವ ನೊರುವನೈಯೇ ನೋಕ್ಕು ಮುಣರ್ವು" ಎಙ್ಗಿರದರ್ಕುಮ್ ಇದುವೇ ತಾತ್ಪರ್ಯಮ್.

---

ಭಾವವು. ಕೆರೆ ಕುಂಟೆಗಳು ಪ್ರಯೋಜನವಿಲ್ಲವು. ಒಣ್ - ಸುಂದರವಾದ, ಪೂ - ತಾವರೇ ಪುಷ್ಪವು, ಮಯುರುಮ್ - ದೂರದಲ್ಲಿ, ಉದಯಿಸಿ ಮೇಲೆ ಬರುವ, ಕದಿರವನೇ - ಸೂರ್ಯನನ್ನೇ, ನೋಕ್ಕುಮ್ - ಎದುರುನೋಡುತ್ತದೆ ಅದಕ್ಕೆ ಅಗ್ನಿ ಮೊದಲಾದವುಗಳು ಪ್ರಯೋಜನವಿಲ್ಲವು, ಅವುಗಳಿಂದ ತಾವರೆ ಪುಷ್ಪವು ಅರಳುವದಿಲ್ಲವು. ಉಯಿರುಮ್ - ಜೀವಾತ್ಮರೂ, ತರುಮನೈಯೇ-ಯಮನನ್ನೇ, ನೋಕ್ಕುಮ್ - ನಿರೀಕ್ಷಿಸುವರು, ಉತ್ಕೃಷ್ಟ ಜನ್ಮ - ಉತ್ಕೃಷ್ಟ ಪದವಿ ಬೇಕಾದವರು ಮರಣವಿಲ್ಲದೆ ಹೊಂದಲಾರರೆಂಬ ಭಾವವು, ಹಾಗೆಯೇ ಉಣರ್ವು - ಜ್ಞಾನವು, ಒಣ್ - ಸುಂದರಳಾದ, ತಾಮರೈಯಾಳ್ - ಕಮಲ ವಾಸಿನಿಯಾದ ಲಕ್ಷ್ಮಿಯು, ಕೇಳ್ವನ್ - ವಲ್ಲಭನಾದ ನಾರಾಯಣನು, ಒರುವನೈಯೇ - ಒಬ್ಬನನ್ನೇ, ನೋಕ್ಕುಮ್ - ಹೊಂದಲು ಆಶೆ ಪಡುತ್ತದೆ. ಇಂತಹ ಜ್ಞಾನವೇ ಜ್ಞಾನವು, ಮಿಕ್ಕ ಜ್ಞಾನವೆಲ್ಲಾ ಅಜ್ಞಾನ ಸಮಾನವೆಂದು ವಿಷ್ಣು ಪುರಾಣದ ಈ ಅಮೋಘ ಶ್ಲೋಕದಲ್ಲಿ ಹೇಳಲ್ಪಟ್ಟಿರುತ್ತದೆ (೨) "ಸಂಜ್ಞಾಯತೇ ಯೇನ ತದಸ್ತ ದೋಷಂ ಶುದ್ಧಂ ಪರಂ ನಿರ್ಮಲ ಮೇಕರೂಪಂ। ಸಂದೃಶ್ಯತೇ ವಾ ಪ್ಯವಗಮ್ಯತೇ ವಾ ತಜ್ಜ್ಞಾನ ಮಜ್ಞಾನ ಮತೋನ್ಯದುಕ್ತಂ" ಯೇನ - ಯಾವ ಆಗಮೋತ್ಥ ಜ್ಞಾನದಿಂದ, ತತ್ - ಆ ಹೇಳಲ್ಪಟ್ಟ ಲಕ್ಷಣಗಳುಳ್ಳ ಪುರುಷೋತ್ತಮನು, ಸಂಜ್ಞಾಯತೇ - ಚೆನ್ನಾಗಿ ತಿಳಿಯಲ್ಪಡುತ್ತಾನೋ, ಆ ಪರಬ್ರಹ್ಮನು ಎಂತಹವನೆಂದರೆ, ಅಸ್ತದೋಷಂ- ಅಚಿತ್ತಿಗಿಂತಲೂ, ವಿಲಕ್ಷಣನಾಗಿ ಹೇಯಗಂಧವಿಲ್ಲದವನು, ಶುದ್ಧಂ - ಬದ್ಧಾತ್ಮರಿಗಿಂತಲೂ, ವಿಲಕ್ಷಣನಾಗಿ ಕರ್ಮವಶ್ಯತಾ ಇಲ್ಲದೆ ಪರಿಶುದ್ಧನು, ಪರಂ ನಿರ್ಮಲಂ - ಮುಕ್ತಾತ್ಮರಿಗಿಂತಲೂ ಒಂದು ಕಾಲದಲ್ಲೂ ಜ್ಞಾನಸಂಕೋಚವಿಲ್ಲದವನು, ಏಕರೂಪಂ - ನಿತ್ಯರಿಗಿಂತಲೂ ವಿಲಕ್ಷಣನಾಗಿ ಒಂದೇ ರೂಪದಲ್ಲಿರುವವನು, ಮತ್ತು, ಯೇನ - ಯಾವ ವಿವೇಕೋತ್ಥ ಜ್ಞಾನದಿಂದ, ಸಂದೃಶ್ಯತೇ - ಭಕ್ತಿಯೋಗಾದಿಗಳಿಂದ ಆ ಪರಬ್ರಹ್ಮನು ಸಾಕ್ಷಾತ್ಕರಿಸಲ್ಪಡುವನೋ, ಅಧಿಗಮ್ಯತೇವಾ - ಯಾವ ಪರಮಾತ್ಮನು ಹೊಂದಲ್ಪಡುವನೋ, ತತ್-ಅದೇ, ಜ್ಞಾನಂ ಜ್ಞಾನವೆನ್ನಲ್ಪಡುತ್ತದೆ, ವಾ ಎಂಬುದರಿಂದ ಮೂರು ಜ್ಞಾನದ ಸಮುಚ್ಚಯವು ಹೇಳಲ್ಪಟ್ಟಿತು,

---

(೧) ಮುದಲ್ ತಿರುವಂದಾದಿ ೬೭. (೨) ವಿ. ಪು ೬. ೫. ೮೭.

**ಶ್ರುತ್ಯಾದೌ ಲಕ್ಷ್ಮ್ಯಾಃ ಪೃಥಗನಭಿಧಾನಸ್ಯ ಕಾರಣಮ್.**

(೧) "**ತದಂತರ್ಭಾವಾತ್ ತ್ವಾಂ ನ ಪೃಥಗಭಿಧತ್ತೇ ಶ್ರುತಿರಪಿ**" **ಇತ್ಯಾಕಾರವಳಿಗಳುಮ್ ಕಣ್ಡುಕೊಳ್ವದು.**

---

ವಿಕಲ್ಪವಲ್ಲವು. **ಅತಃ** - ಆ ಕಾರಣದಿಂದ, **ಅನ್ಯತ್** - ಮಿಕ್ಕ ಜ್ಞಾನವೆಲ್ಲಾ, **ಅಜ್ಞಾನ ಮುಕ್ತಮ್** - ಅಜ್ಞಾನವೆಂದೇ ಹೇಳಲ್ಪಟ್ಟಿತು **ಇತ್ಯಾಕಾರದಲ್ಕುಮ್**- ಎಂದು ಹೇಳಿರುವದಕ್ಕೂ, **ಇದುವೇ ತಾತ್ಪರ್ಯಮ್** - ಇದೇ ತಾತ್ಪರ್ಯವು ಎಂದರೆ ಲಕ್ಷ್ಮೀವಿಶಿಷ್ಟನಾಗಿ ನಾರಾಯಣನು, **ಏಕಃ** – ಒಬ್ಬನು ಎಂಬುದು ತಾತ್ಪರ್ಯವು. ಇಲ್ಲಿಯೂ ತಾಮುರೈಯಾಳ್ ಎಂಬುದರಿಂದ ಲಕ್ಷ್ಮಿಯನ್ನೂ ಹೇಳಿ, ಆಕೆಯ ಕೇಳ್ವನೊರುವನ್ಯ - ಆಕೆಯ ವಲ್ಲಭನೆಂದು ಒರುವನ್ಯ – ಒಬ್ಬನೇ ಎಂದು ಹೇಳಿರುವದು, ಲಕ್ಷ್ಮಿಗೂ ಶೇಷಿಯಾದುದರಿಂದ ಪ್ರಾಧಾನ್ಯೇನ ಒಬ್ಬನೆಂದು ಹೇಳಲ್ಪಟ್ಟಿತು ವಿಶೇಷಣದೊಂದಿಗೆ ವಿಶೇಷ್ಯ ಒಂದು ಎಂದು ಹೇಳಿದ ನಂತರ ವಿಶೇಷ್ಯದ ಪ್ರಾಧಾನ್ಯವೂ ವಿಶೇಷಣದ ಆವಶ್ಯಕತೆಯೂ ಹೇಳಲ್ಪಟ್ಟವೆಂಬ ಭಾವವು ಹೀಗೆಯೇ ಶ್ರುತಿಯಲ್ಲೂ "**ಸ್ವಧಯಾತದೇಕಂ**" ಲಕ್ಷ್ಮಿಯೊಂದಿಗೆ ಪರಬ್ರಹ್ಮವೊಂದು ಎಂದು ಹೇಳಲ್ಪಟ್ಟಿರುತ್ತದೆ. ಹಾಗೆಯೇ ಶ್ರೀ ವ್ಯಾಸಮಹರ್ಷಿಯೂ ಮೋಕ್ಷಧರ್ಮದಲ್ಲಿ "**ಏಕಾಕೀ ವಿದ್ಯಯಾ ಸಾರ್ಧಂ ವಿಹರಿಷ್ಯೇ ದ್ವಿಜೋತ್ತಮ**" ಎಂದು ಸರ್ವೇಶ್ವರನೇ ಶ್ರೀ ನಾರದಭಗವಾನ್‌ರವರಿಗೆ ಹೇಳಿದರೆಂದು ಪ್ರಯೋಗಿಸಿರುತ್ತಾರೆ. ವಿಶೇಷಣದೊಂದಿಗೆ ವಿಶೇಷ್ಯಕ್ಕೆ ಏಕತ್ವವು ಸಿದ್ಧಿಸುತ್ತದೆಂಬ ತಾತ್ಪರ್ಯವು.

**ಶ್ರುತಿ, ಗೀತಾ ಮೊದಲಾದವುಗಳಲ್ಲಿ ಲಕ್ಷ್ಮಿಯನ್ನು ಬೇರೆ ಉದ್ದೇಶಿಸಿ ಹೇಳದಿರುವದಕ್ಕೆ ಕಾರಣವು.**

**ತದಂತರ್ಭಾವಾತ್** - ಭಗವಂತನಿಗೆ ವಿಶೇಷಣವಾಗಿ ಆತನಲ್ಲೇ ಯಾವಾಗಲೂ ಸೇರಿರುವದರಿಂದ, **ತ್ವಾಂ** - ಲಕ್ಷ್ಮಿಯಾದ ನಿನ್ನನ್ನು, **ಶ್ರುತಿರಪಿ** - ಶ್ರುತಿಯೂ ಕೂಡ, **ನ ಪೃಥಗಭಿಧತ್ತೇ** - ನಿನ್ನನ್ನು ಪ್ರತ್ಯೇಕಿಸಿ ಎಂದರೆ ನಿನ್ನನ್ನೇ ಬೇರೆಯಾಗಿ ಉದ್ದೇಶಿಸಿ ಹೇಳಲಿಲ್ಲವು", **ಇತ್ಯಾಕಾರ** – ಎನ್ನುವ, **ವಳಿಗಳುಮ್** - ಮಾರ್ಗ ಅಥವಾ ರೀತಿಗಳನ್ನೂ, **ಕಣ್ಡುಕೊಳ್ವದು** - ತಿಳಿದುಕೊಳ್ಳುವದು. ಸನ್ನಿಯೋಗ ಶಿಷ್ಟನ್ಯಾಯದ ಪ್ರಕಾರ, ವಿಶೇಷಣಕ್ಕೆ ವಿಶೇಷ್ಯ

---

(೧) ತೈ ಗುಣ.

"ಲಕ್ಷ್ಮ್ಯಾ ಸಹ ಏಕಃ ಇತಿ ಶ್ರೀ ಭಾಷ್ಯಕಾರಾಭಿಪ್ರಾಯಃ.

"ಎಮ್ಪೆರುಮಾನ್ನೈ ಚ್ಚೊನ್ನವಿಡ ಮೆಙ್ಗುಮ್ ಪಿರಾಟ್ಟಿಯೈಯುಮ್ ಶೊಲ್ಲಿತ್ತಾ"ಮೆನ್ರು ತುಡಙ್ಗಿ ಉಡೈಯವರರುಳಿಚ್ಚೆಯ್ದ ವಾರ್ತ್ತೈಯೈ ಆಚ್ಚಾರ್ ಪಕ್ಕಲಿಲೇ ಕೇಟ್ಟು ನಞ್ಜೀಯರ್ ಸಙ್ಗ್ರಹಿತ್ತಾರ್.

---

ದೊಂದಿಗೆ, ಸಹ ವಾ ಪ್ರವೃತ್ತಿಃ, ಸಹವಾ ನಿವೃತ್ತಿಃ–ಎಂದು ಹೇಳಿರುವ ಹಾಗೆ ಪ್ರವೃತ್ತಿ ನಿವೃತ್ತಿಗಳು ಒಟ್ಟಿಗೆಯಾದುದರಿಂದ ಪತಿಪಾರಾರ್ಥ್ಯ ಮೂಲಕವಾದ ಪ್ರಾಧಾನ್ಯೇನ ವಿಶೇಷ್ಯವನ್ನು ಮಾತ್ರವೇ ಹೇಳುವ ವಾಡಿಕೆಯಾದುದರಿಂದ ವಿಶೇಷಣವಾದ ಲಕ್ಷ್ಮಿಯು ಶ್ರುತಿಗಳಲ್ಲಿ ಹೇಳಲ್ಪಡದೆ ವಿಶೇಷ್ಯನಾದ ಭಗವಂತನೊಬ್ಬನೇ ಹೇಳಲ್ಪಟ್ಟಿರುತ್ತಾನೆಂಬ ಭಾವವು ಸೀತೆಯು "ಅನನ್ಯಾ ರಾಘವೇಣಾಹಂ ಭಾಸ್ಕರೇಣ ಪ್ರಭಾಯಥಾ" ಎಂಬದಾಗಿ ಶ್ರೀರಾಮನೊಂದಿಗೆ ತನಗೆ ನಿತ್ಯಯೋಗವನ್ನು ಹೇಳಿಕೊಂಡಿರುತ್ತಾಳೆ. ಲೋಕ ವ್ಯವಹಾರವು ಹಾಗೆಯೇ, ಸೂರ್ಯನೂ ಸೂರ್ಯ ಕಿರಣಗಳೂ ಉದಯಿಸಿದರೂ, ವಿಶೇಷಣಗಳಾದ ಸೂರ್ಯಕಿರಣಗಳನ್ನು ಬಿಟ್ಟು, ಸೂರ್ಯನು ಉದಯಿಸಿದನು ಎಂಬ ವ್ಯವಹಾರ ಉಂಟು. ಗರ್ಭಿಣೀ ಸ್ತ್ರೀಯಾದವಳು ಬಂದಳು ಎಂದು ಹೇಳುವಾಗ, ಗರ್ಭಸ್ಥ ಶಿಶುವೂ ಬಂತು ಎಂದು ಹೇಳುವಾವಶ್ಯಕವಿಲ್ಲವು ಹಾಗೆಯೇ ಶ್ರುತಿಗಳಲ್ಲೂ ಎಂಬ ಭಾವವು ಪ್ರಾಧಾನ್ಯದಿಂದ ನಾರಾಯಣನನ್ನು ಮಾತ್ರ ಹೇಳಿದರೆ ಲಕ್ಷ್ಮಿಯನ್ನೂ ಹೇಳಿದಂತಾಯಿತು. ಈ ಶ್ರೀಗುಣರತ್ನಕೋಶದ ಪೂರಾ ಶ್ಲೋಕಕ್ಕೂ ಅದರರ್ಥಕ್ಕೂ ಹಿಂದೆ ಇದೇ ಅಧಿಕಾರದ       ನೆಯ ಪುಟವನ್ನು ಪರಾಂಬರಿಸಿ.

ಈ ಅಭಿಪ್ರಾಯಕ್ಕೆ ಸಂಪ್ರದಾಯ ಬಲವುಂಟೋ? ಎಂದರೆ ನಮ್ಮ ಸಿದ್ಧಾನ್ತ ಸ್ಥಾಪಕರ ಅಭಿಪ್ರಾಯವೂ ಹಾಗೆಯೇ ಎಂದು ಹೇಳುವದಕ್ಕಾಗಿ ಒಂದು ನಡೆದ ವೃತ್ತಾಂತವನ್ನು ತಿಳಿಸುತ್ತಾರೆ

"ಲಕ್ಷ್ಮ್ಯಾ ಸಹ ಏಕಂ" ಎಂಬುದೇ ಶ್ರೀ ಭಾಷ್ಯಕಾರರಭಿಪ್ರಾಯವು.

"ಎಮ್ಪೆರುಮಾನ್ನೈ ಚ್ಚೊನ್ನವಿಡಮ್ - ಭಗವಂತನನ್ನು ಬೋಧಿಸುವ ಸ್ಥಳವು, ಎಙ್ಗುಮ್ - ಎಲ್ಲಾ ಕಡೆಯಲ್ಲೂ, ಪಿರಾಟ್ಟಿಯೈಯುಮ್ ಶೊಲ್ಲಿತ್ತಾಮ್ – ಲಕ್ಷ್ಮಿಯನ್ನು ಬೋಧಿಸುತ್ತದೆ," ಎನ್ರು - ಎಂಬದಾಗಿ, ತುಡಙ್ಗಿ - ಪ್ರಾರಂಭಿಸಿ, ಉಡೈಯವರರುಳಿಚ್ಚೆಯ್ದ - ಶ್ರೀ ಭಾಷ್ಯಕಾರರು ಅಪ್ಪಣೆ ಕೊಡಿಸಿದ, ವಾರ್ತ್ತೈಯೈ - ಉಪದೇಶವನ್ನು, ಆಚ್ಚಾರ್ ಪಕ್ಕಲಿಲೇ -

ಶ್ರೀ ಭಾಷ್ಯಕಾರರ ಮಹಾನಸ ಕೈಙ್ಕರ್ಯಪರರಾದ ಶ್ರೀ ಕಿಡಾಂಬಿ ಆಚ್ಚಾನ್ರವರ ಮೂಲಕ, ಕೇಟ್ಟು - ಕೇಳಿ ತಿಳಿದು, ನಞ್ಜೀಯರ್ ಸಙ್ಗ್ರಹಿತ್ತಾರ್ - ಪರಾಶರ ಭಟ್ಟರ ಶಿಷ್ಯರಾದ ನಂಜೀಯರು ಸಙ್ಗ್ರಹಿಸಿ ಹೇಳಿರುತ್ತಾರೆ. ಕಿಡಾಂಬಿ ಆಚ್ಚಾನ್ರವರ ವಿಷಯದ ಇತಿಹಾಸಕ್ಕೆ ಗುರುಪರಂಪರಾಸಾರದ ೮ನೆಯ ಪುಟವನ್ನು ಪರಾಂಬರಿಸಿ. ಶಾಸ್ತ್ರಗಳಲ್ಲಿ ಭಗವಂತನೊಬ್ಬನನ್ನು ಕುರಿತು ಹೇಳಿದ ಎಲ್ಲಾ ಸ್ಥಳಗಳಲ್ಲೂ ಲಕ್ಷ್ಮಿಯೂ ಕೂಡ ಹೇಳಲ್ಪಟ್ಟಳೆಂದು ಭಾವಿಸತಕ್ಕದ್ದೆಂಬುದೇ ಶ್ರೀ ಯತಿರಾಜರವರುಪದೇಶವಾಗುದರಿಂದ ಅದನ್ನು ತುಂಬಾ ಉಪಾದೇಯವಾಗಿ ಭಾವಿಸತಕ್ಕದ್ದೆಂಬ ಭಾವವು. ಗೀತೋಪದೇಶದಲ್ಲಿ ಶ್ರೀ ಕೃಷ್ಣನೇ ಅರ್ಜುನನಿಗೆ ಉಪದೇಶಿಸಿದರೂ ಲಕ್ಷ್ಮೀಯುಕ್ತನಾದ ಭಗವಂತನೇ ಉಪದೇಶಿಸಿದನೆಂದೇ ಭಾವಿಸತಕ್ಕದ್ದೆಂದು ತಿಳಿಸುವದಕ್ಕಾಗಿ "ಶ್ರೀ ಭಗವಾನುವಾಚ" ಲಕ್ಷ್ಮೀಯುಕ್ತನಾದ ಭಗವಂತನು ಬೋಧಿಸಿದನೆಂದು ವ್ಯಾಸಮಹರ್ಷಿಯು ಪದೇ ಪದೇ ಪ್ರಯೋಗಿಸಿರುತ್ತಾರೆ ಇದು ಶ್ರೀ ಭಾಷ್ಯಕಾರರಭಿಪ್ರಾಯವೆಂಬುದನ್ನು ಅವರೇ ಶ್ರೀ ಭಾಷ್ಯದ ಮಙ್ಗಳ ಶ್ಲೋಕದಲ್ಲಿ "ಬ್ರಹ್ಮಣಿ ಶ್ರೀನಿವಾಸೇ" ಎಂದು ಪ್ರಯೋಗಿಸಿರುವದರಿಂದ ಎಲ್ಲೆಲ್ಲಿ ಪರತತ್ವವು ಹೇಳಲ್ಪಟ್ಟಿತೋ ಅಲ್ಲೆಲ್ಲಾ ಶ್ರೀನಿವಾಸನೇ ಎಂದರೆ ಲಕ್ಷ್ಮಿಗೆ ನಿವಾಸನಾದ ನಾರಾಯಣನೇ ಹೇಳಲ್ಪಟ್ಟನೆಂದು ತಿಳಿಸಿರುತ್ತಾರೆ.

ಹೀಗೆ ಸರ್ವಾವಸ್ಥೆಗಳಲ್ಲೂ ಲಕ್ಷ್ಮಿಯು ನಾರಾಯಣನಿಗೆ ವಿಶೇಷಣವಾಗಿ ಅವಿನಾಭೂತಿಯಾಗಿಯೇ ಸದಾ ಇರುವದರಿಂದ ಭಗವದಾಲಯಗಳಲ್ಲಿ ಬೇರೆಯಾಗಿ ಅಮ್ಮನವರ ಸನ್ನಿಧಿಯನ್ನು ಏರ್ಪಡಿಸಿ, ಅಲ್ಲಿ ಪ್ರತಿಷ್ಠಾರ್ಚನಾದಿಗಳನ್ನು ನಡೆಸುವದು, ಶಾಸ್ತ್ರವಿರುದ್ಧವಲ್ಲವೋ ಎಂದರೆ, ದೇವಾಲಯದ ಏಳಿಗೆಗಾಗಿ ಕಾಮ್ಯವಾಗಿ ಭಗವಚ್ಛಾಸ್ತ್ರ ವಿಹಿತವಾದುದಾದುದರಿಂದ ಆಗಬಹುದು ಎಂದರೆ, ಪ್ರಪನ್ನನಾದ ಅನನ್ಯಪ್ರಯೋಜನನಾದ ಅಧಿಕಾರಿಗೆ ಅದ, ಅನುದ್ದೇಶ್ಯವಾದುವರಿಂದ ಪ್ರಣಾಮ ಮೊದಲಾದವುಗಳು ಲಕ್ಷ್ಮಿಗೆ ಯುಕ್ತವೋ, ಎಂದರೆ, ಲಕ್ಷ್ಮಿಯ ಅರ್ಚನೆಯು ಲಯಾರ್ಚನೆ, ಭೋಗಾರ್ಚನೆ, ಅಧಿಕಾರಾರ್ಚನೆ ಎಂದು ಮೂರು ವಿಧಗಳಾಗಿ ಅವುಗಳಲ್ಲಿ ಅಧಿಕಾರಾರ್ಚನೆ ಮಾತ್ರ ಕಾಮ್ಯವಾದುದರಿಂದ ಪ್ರಪನ್ನನಿಗೆ ನಿಷಿದ್ಧವಾದುದೆಂದೂ, ಲಯಾರ್ಚನೆ ಭೋಗಾರ್ಚನೆಗಳು ಮಾತ್ರ ಉಪಾದೇಯವೆಂದೂ, ಭಗವಚ್ಛಾಸ್ತ್ರಗಳಲ್ಲಿ ಹೇಳಲ್ಪಟ್ಟಿದ್ದರೂ, ಕಾಮ್ಯಪ್ರಧಾನವಾದ ಈ ಲಕ್ಷ್ಮಿಯ ರೂಪದ ಪ್ರಣಾಮಾದಿ ಅರ್ಚನೆಗಳೂ ಪ್ರಪನ್ನನಿಗೂ ಕೂಡ ನಿಷಿದ್ಧವಲ್ಲವೆಂದು ಮುಂದಿನ ವಾಕ್ಯದಿಂದುಪದೇಶಿಸುತ್ತಾರೆ ಆಕೆಗೂ,ಮೋಕ್ಷೋಪಾಯತ್ವ ಮೋಕ್ಷಪ್ರದತ್ವ ಶಕ್ತಿ ಇರುವದರಿಂದ ಅಂತಹ ಪ್ರಣಾಮಾದಿಗಳೇನೂ ಪ್ರಪನ್ನನಿಗೆ ವಿರುದ್ಧವಾದುವಲ್ಲವು.

**ಆಗ್ಗೈಯಾಲ್ ಕಾಮ್ಯಪ್ರಧಾನಮಾನ ಅಧಿಕಾರಾರ್ಚನ ರೂಪತ್ತಿಲುಮ್ ವಿಷ್ಣುಶಕ್ತಿತ್ವಂ ಸುಪ್ರತಿಷ್ಠಿತ ಮಾಗ್ಗೈಯಾಲೇ ಲಯಭೋಗಾರ್ಚನಙ್ಗಳಿಲೆ ಪ್ರವೃತ್ತರಾಯ್ ಅನನ್ಯಪ್ರಯೋಜನರಾನ ಮುಮುಕ್ಷುಕ್ಕಳುಕ್ಕುಮ್ ಕಾಮ್ಯಪ್ರಧಾನಮಾನ ಭಗವದ್ರೂಪತ್ತಿಲ್ಪೋಲೆ ಮಾತೃತ್ವಾದ್ಯುಪಾಧಿಕಮಾನ ಪ್ರಣಾಮಾದ್ಯಾಚಾರಙ್ಗಳುಕ್ಕುಮ್ ಕುಱೈ ಯಿಲ್ಲೈ.**

---

**ಆಗ್ಗೈಯಾಲ್** - ಹೀಗೆ ಸರ್ವಾವಸ್ಥೆಗಳಲ್ಲಿಯೂ ಲಕ್ಷ್ಮಿಯು ನಾರಾಯಣನಿಗೆ ವಿಶೇಷಣಭೂತೆಯಾಗಿ ಅವಿನಾಭೂತಳಾದುದರಿಂದ, **ಕಾಮ್ಯ ಪ್ರಧಾನಮಾನ** - ಭಕ್ತರ ಇಷ್ಟಾರ್ಥವನ್ನು ಅನುಗ್ರಹಿಸುವದೇ ಮುಖ್ಯವಾಗಿರುವ, **ಅಧಿಕಾರಾರ್ಚನ ರೂಪತ್ತಿಲುಮ್** - ದೇವಸ್ಥಾನದ ಅಮ್ಮನವರ ಸನ್ನಿಧಿಯಲ್ಲಿ ಪ್ರತಿಷ್ಠಿತವಾಗಿರುವ ರೂಪದಲ್ಲೂ, **ವಿಷ್ಣುಶಕ್ತಿತ್ವಂ** - ವಿಷ್ಣು ಶಕ್ತಿಯಾಗಿರುವ ಭಾವವು, ಅದರಿಂದ, ವಿಷ್ಣುಸಾನ್ನಿಧ್ಯವು, **ಸುಪ್ರತಿಷ್ಠಿತ ಮಾಗ್ಗೈಯಾಲೇ** - ಆಗಮೋಕ್ತಪ್ರಕಾರ ಸುಪ್ರತಿಷ್ಠಿತವಾಗಿರುವದರಿಂದ, **ಲಯಭೋಗಾರ್ಚನಙ್ಗಳಿಲೆ** - ಲಯಾರ್ಚನೆಯು ವಕ್ಷಸ್ಥಳದಲ್ಲಿರುವ ಲಕ್ಷ್ಮೀರೂಪಾರ್ಚನೆಯು, ಭೋಗಾರ್ಚನೆಯು ಸ್ವಾಮಿಯ ಪಕ್ಕದಲ್ಲಿರುವ ಲಕ್ಷ್ಮೀರೂಪಾರ್ಚನೆಯು, ಇವುಗಳಲ್ಲಿ, **ಪ್ರವೃತ್ತರಾಯ್** - ಪ್ರವೃತ್ತಿಸಿರುವ, **ಅನನ್ಯ ಪ್ರಯೋಜನರಾನ** - ಮೋಕ್ಷವಲ್ಲದೆ ಬೇರೆ ಪುರುಷಾರ್ಥಗಳನ್ನಪೇಕ್ಷಿಸದ, **ಮುಮುಕ್ಷುಕ್ಕಳುಕ್ಕುಮ್**- ಮೋಕ್ಷಾರ್ಥಿಗಳಿಗೂ ಕೂಡ, **ಕಾಮ್ಯಪ್ರಧಾನಮಾನ ಭಗವದ್ರೂಪತ್ತಿಲ್ಪೋಲೆ** - ಕಾಮ್ಯ ಫಲಗಳನ್ನು ಕೊಡುವದೇ ಮುಖ್ಯವಾಗಿರುವ ಮದನಗೋಪಾಲಮೂರ್ತಿ ಮೊದಲಾದ ಭಗವದ್ರೂಪಗಳ ಹಾಗೆ ಎಂದರೆ ಈ ಭಗವದ್ರೂಪಗಳೂ ಮುಮುಕ್ಷುವಿಗೂ ಕೂಡ ಹೇಗೆ ಉಪಾದೇಯವೋ ಹಾಗೆ ಎಂಬ ಭಾವವೂ, **ಮಾತೃತ್ವಾದ್ಯುಪಾಧಿಕಮಾನ** - ಲೋಕಮಾತೆ ಎಂಬ ವ್ಯಾಜರೂಪದಿಂದ, **ಪ್ರಣಾಮಾದ್ಯಾಚಾರಙ್ಗಳುಕ್ಕುಮ್** - ನಮಸ್ಕಾರವೇ ಮೊದಲಾದ ಆಚಾರಗಳಿಗೂ, ಇಲ್ಲಿ ಆದಿಪದದಿಂದ ಪ್ರದಕ್ಷಿಣ ಅರ್ಚನೆ ಕೈಙ್ಕರ್ಯಾದಿಗಳು ಹೇಳಲ್ಪಟ್ಟವು, **ಕುಱೈ ಇಲ್ಲೈ** - ನ್ಯೂನತೆ ಏನೂ ಇಲ್ಲವು ಎಂದರೆ ವಿರೋಧವೇನೂ ಇಲ್ಲವೆಂಬ ತಾತ್ಪರ್ಯವು ದೇವಾಲಯದ ತನಿಯನಾಚ್ಚಿಯಾರ್ರವರ ರೂಪವು ಕಾಮ್ಯವಿಗ್ರಹವಾದರೂ, ವಿಷ್ಣುಶಕ್ತಿಯಾಗಿ ವಿಷ್ಣುಸಾನ್ನಿಧ್ಯದಲ್ಲಿರುವ ರೂಪಕ್ಕೂ ಮೋಕ್ಷಾರ್ಥಿಯೂ ಕೂಡ ಪ್ರದಕ್ಷಿಣ ನಮಸ್ಕಾರಾದಿಗಳನ್ನು ಮಾಡುವದು ಯುಕ್ತಮಾದುದೇ ಎಂಬಭಿಪ್ರಾಯವು. ಪತಿಯು ಇಂಗಿತವನ್ನರಿತು ಮೋಕ್ಷ

**ಪ್ರಾಮಾಣಿಕಾರ್ಥಪ್ರತೀತೌ ಗೃಹೀತಗ್ರಾಹಿತ್ವಂ ನಿಂದಾವಹಂ.**

**ಇಪ್ಪಡಿ ಮಧ್ಯಸ್ಥ ದೃಷ್ಟಿಯಾಲೆ ಪ್ರಾಮಾಣಿಕಾರ್ಥಙ್ಗಳ್ ತೋತ್ತ್ರ**

---

ಪ್ರದತ್ವ ಶಕ್ತಿಯೂ ಇರುವದರಿಂದ ಲಕ್ಷ್ಮಿಯನ್ನು ಆಶ್ರಯಿಸುವದರಲ್ಲಿ ಏನೂ ವಿರುದ್ಧವಾದುದಿಲ್ಲವು "ವಿಮುಕ್ತಿ ಫಲದಾಯಿನೀ" ಎಂಬ ಪರಾಶರೋಕ್ತಿಯೂ ಇದನ್ನನುಸರಿಸಿಯೇ ಶ್ರೀ ಆಳವಂದಾರ್ರವರು "ಶ್ರೇಯೋನಹ್ಯರವಿಂದ ಲೋಚನಮನಃಕಾಂತಾ ಪ್ರಸಾದಾದೃತೇ । ಸಂಸೃತ್ಯಕ್ಷರ ವೈಷ್ಣವಾಧ್ವಸು ನೃಣಾಂ ಸಂಭಾವ್ಯತೇ ಕರ್ಹಿಚಿತ್" ಲಕ್ಷ್ಮಿಗೆ ಮೋಕ್ಷಪ್ರದತ್ವ ಉಂಟೆಂಬುದಾಗಿ ಉಪದೇಶಿಸಿರುತ್ತಾರೆ ಹಾಗೆಯೇ ಶ್ರೀ ಪರಾಶರ ಭಟ್ಟರವರೂ "ಐಶ್ವರ್ಯಮಕ್ಷರ ಗತಿಂ ಪರಮಂ ಪದಂವಾ" ಎಂಬ ಶ್ಲೋಕದಲ್ಲಿ ಉಪಪಾದಿಸಿರುತ್ತಾರೆ ಇವರುಗಳೆಲ್ಲಾ "ಶ್ರಿಯಂ ವಸಾನಾ ಅಮೃತತ್ವಮಾಯನ್" ಎಂಬ ಶ್ರುತಿಯಲ್ಲಿ ಹೇಳಿರುವ ಹಾಗೆ ಮೋಕ್ಷಪ್ರದಳೆಂಬ ಅರ್ಥವನ್ನೇ ವ್ಯಕ್ತಗೊಳಿಸಿರುತ್ತಾರೆ ಆದುದರಿಂದ ಅಧಿಕಾರಾರ್ಚನೆಯೂ ಕೂಡ ಯುಕ್ತವಾದುದೇ ಮೋಕ್ಷಾರ್ಥಿಯಾಗಲಿ ಪ್ರಪನ್ನನಾಗಲಿ, ಹಾಗೆ ಲಕ್ಷ್ಮಿಯನ್ನು ಸೇವಿಸುವಾಗ ತನಗೆ ದ್ರವ್ಯವನ್ನು ಕೊಡು, ಮಕ್ಕಳನ್ನು ಕೊಡು ಎಂದು ಎಂದಿಗೂ ಪ್ರಾರ್ಥಿಸುವದಿಲ್ಲವಷ್ಟೆ ಆದುದರಿಂದ ಅಂತಹ ಸೇವೆಯೂ ಕೂಡ ಪ್ರಪನ್ನನ ಸ್ವರೂಪಕ್ಕೆ ಯುಕ್ತವಾದುದೇ ಎಂಬಭಿಪ್ರಾಯವು

**ಪ್ರಾಮಾಣಿಕಾರ್ಥತೋರಿದರೂ ಹಿಡಿದುದರ ಹಟವು ನಿಂದ್ಯವು.**

---

ಹೀಗೆ ಇಷ್ಟು ವಿಶದವಾಗಿ ಸಪ್ರಮಾಣವಾಗಿ ಲಕ್ಷ್ಮಿಯು ವಿಶೇಷಣವೇ ಸರಿ, ಉಪಲಕ್ಷಣವಲ್ಲವೆಂದೂ, ಆದುದರಿಂದ ಆಕೆಗೆ ಜಗತ್ಸೃಷ್ಟಿ, ಸ್ಥಿತಿ ಲಯಾದಿಗಳಲ್ಲೂ, ಚೇತನನಿಗೆ ಮೋಕ್ಷೋಪಾಯದಲ್ಲೂ, ಪ್ರಾಪ್ತಿಯಲ್ಲೂ, ಅನ್ವಯ ಉಂಟೆಂದೂ ವಿಶದಗೊಳಿಸಿ, ಈ ಅಭಿಪ್ರಾಯವೇ ಆಳ್ವಾರ್ ಪೂರ್ವಾಚಾರ್ಯರುಗಳಿಗೆ ಸಾಂಪ್ರದಾಯಿಕವಾಗಿ ಬಂದುದು ಎಂದು ವ್ಯಕ್ತಗೊಳಿಸಿದರೂ, ನಮ್ಮಲ್ಲೇ ಒಬ್ಬ ಮಹನೀಯರು ಉಪಲಕ್ಷಣವೆಂದು ಭಾವಿಸಿದುದರಿಂದ ಮೊಂಡತನದಿಂದ ಉಪಲಕ್ಷಣವೆಂದೇ ನಾವೂ ಭಾವಿಸುವೆವು ಎಂದರೆ ಅದು ಸರಿಯಾದ ವಾದವಲ್ಲವೆಂದು ಸದೃಷ್ಟಾಂತವಾಗಿ ನಿಂದಿಸುತ್ತಾರೆ:—**ಇಪ್ಪಡಿ** - ಹೀಗೆ ಮೇಲೆ ಉಪಪಾದಿಸಿದ ರೀತಿಯಲ್ಲಿ, **ಮಧ್ಯಸ್ಥದೃಷ್ಟಿಯಾಲೆ**-ಎರಡಭಿಪ್ರಾಯಗಳಲ್ಲಿ ಯಾವುದು ಪ್ರಾಮಾಣಿಕವಾದುದೆಂದು ವಿಮರ್ಶಿಸಿ ನೋಡುವ ಸಂದರ್ಭದಲ್ಲಿ, ಎರಡಭಿಪ್ರಾಯಕ್ಕೂ ಸಂಬಂಧಪಟ್ಟವನೆಂದು ಭಾವಿಸದೆ, ಮಧ್ಯಸ್ಥದೃಷ್ಟಿಯಿಂದ **ಪ್ರಾಮಾಣಿಕಾರ್ಥ**

**ಚ್ಚಿಯನ್ದೆ ಪತ್ತಿನದು ವಿಡಾದೊಳಿಯಲ್** (೧) "**ದೃಢಪೂರ್ವಶ್ರುತೋ**

**ಜ್ಞಳ್ ತೇತ್ತ ಚ್ಚಿಯನ್ದೆ** - ಶಾಸ್ತ್ರಾದಿಗಳಿಂದ ಯಥಾರ್ಥವಾದ ಅಭಿಪ್ರಾಯಗಳು ಚೆನ್ನಾಗಿ ವಿಶದವಾಗಿ ತೋರಿಬಂದರೂ ಕೂಡ, **ಪತ್ತಿನದು ವಿಡಾದೊಳಿಯಲ್** – ಹಿಂದೆ ಏನೋ ಒಂದು ಕಾರಣದಿಂದ ಮನಸ್ಸಿಗೆ ತೋರಿದ ಅಭಿಪ್ರಾಯವನ್ನು ತ್ಯಜಿಸದೇ ಇದ್ದರೆ, ನಿಂದ್ಯವಾದ ದಶೆಯನ್ನು ಹೊಂದುವನು ಎಂಬದಾಗಿ ಭಾರತ ಕರ್ಣಪರ್ವದಲ್ಲಿ ಕರ್ಣನನ್ನು ಕೊಲ್ಲುವನೆಂಬ ಅರ್ಜುನನ ಸಙ್ಕಲ್ಪಕ್ಕೆ ವಿರೋಧವಾಗಿ ಯುಧಿಷ್ಠಿರನು ಎಷ್ಟು ಉಪದೇಶಿಸಿದರೂ ಕೇಳದೇ ಇದ್ದುದರಿಂದ ಕೋಪಿಸಿದುದಕ್ಕಾಗಿ, ತನ್ನ ಅಣ್ಣನನ್ನೇ ಕೊಂದುಬಿಡುವನೆಂದು ಉದ್ಯುಕ್ತನಾದ ಅರ್ಜುನನನ್ನು ಕಂಡು ಶ್ರೀಕೃಷ್ಣನು ಹೇಗೆ ಈ ಗೃಹೀತ ಗ್ರಾಹಿತ್ವವನ್ನು ನಿಂದಿಸಿದನೋ ಅಂತಹ ದುಸ್ಥಿತಿಯಲ್ಲಿರುವವನಾಗುವನೆಂದು ಹೇಳುತ್ತಾರೆ.—ವಾದದಲ್ಲಿ ಎರಡಭಿಪ್ರಾಯವಿರುವಾಗ ಯಾವ ಪಂಗಡವನ್ನೂ ವಹಿಸದೆ ಮಧ್ಯಸ್ಥದೃಷ್ಟಿಯಿಂದಿದ್ದುಕೊಂಡು, ಯಾವ ಅಭಿಪ್ರಾಯವು ಪ್ರಮಾಣಗಳಿಂದ ಸಮಂಜಸವೆಂದು ಜಿಜ್ಞಾಸಮಾಡಿ ತಿಳಿದು ಪ್ರಾಮಾಣಿಕಾಭಿಪ್ರಾಯವು ತನ್ನ ಪೂರ್ವಾಭಿಪ್ರಾಯಕ್ಕೆ ವಿರೋಧವಾದರೂ ಆ ಪೂರ್ವಾಭಿಪ್ರಾಯವನ್ನು ತ್ಯಜಿಸಿ ಪ್ರಾಮಾಣಿಕಾರ್ಥವನ್ನು ಗ್ರಹಿಸತಕ್ಕದ್ದು. ಹಿಡಿದಿದ್ದ ವಿಷಯದಲ್ಲಿ ಹಠಮಾಡಕೂಡದೆಂಬ ಭಾವವು ಒಂದೇ ಆತ್ಮವೇ ಇರುವದೆಂದೂ, ಮಿಕ್ಕಿದ್ದೆಲ್ಲಾ ಪರಿದೃಶ್ಯಮಾನವಾದುದೆಲ್ಲಾ ಮಿಥ್ಯಾ ಎಂದೂ, ಆ ಆತ್ಮವು ನಿರ್ಗುಣನೆಂದೂ, ಅವಿದ್ಯಾಗೃಹೀತನಾಗಿ ಸಂಸಾರ ಬಂಧವನ್ನನುಭವಿಸುವನೆಂದೂ ಇತ್ಯಾದ್ಯಭಿಪ್ರಾಯಗಳು ಪ್ರಾಮಾಣಿಕವೇ, ಅಥವಾ ಪರಮಾತ್ಮನು ಕಲ್ಯಾಣಗುಣಾಕರನೆಂದೂ, ಹೇಯಗಂಧವೇ ಇಲ್ಲದವನೆಂದೂ, ಜಗತ್ತಿನ ಚಿದಚಿತ್ತುಗಳನ್ನೆಲ್ಲಾ ವ್ಯಾಪಿಸಿ ಅವುಗಳಿಗೆ ಆತ್ಮಾವಾಗಿರುವದರಿಂದ ಜಗತ್ತು ಮಿಥ್ಯೆಯಲ್ಲವೆಂದೂ, ಆದರೆ ನಶ್ವರವೆಂದೂ, ಜೀವಾತ್ಮರುಗಳು ಅನೇಕರೆಂದೂ ಸರ್ವೇಶ್ವರನಿಗೆ ಶೇಷಭೂತರೆಂದೂ ಹೇಳುವ ವಿಶಿಷ್ಟಾದ್ವೈತಾಭಿಪ್ರಾಯಗಳು ಪ್ರಾಮಾಣಿಕವೇ ಎಂದು ಶಾಸ್ತ್ರಜ್ಞಾನಬಲದಿಂದ ಪರ್ಯಾಲೋಚಿಸಿ, ಯಾವುದು ಪ್ರಾಮಾಣಿಕವಾಗಿ ತೋರುತ್ತದೋ ಅದನ್ನು ನಿರ್ಭಯವಾಗಿ ಅವಲಂಬಿಸತಕ್ಕದ್ದೂ ಸಹ ಯುಕ್ತವೆಂದು ಹೇಳಿದಂತಾಯಿತು

(೧) ಇದು ಶ್ರೀ ಕೃಷ್ಣನು ಅರ್ಜುನನಿಗೆ ಹೇಳುವ ವಾಕ್ಯವು. **ದೃಢಪೂರ್ವಶ್ರುತಃ** – ಹಿಂದೆ ಶ್ರುತವಾದುದು ಎಷ್ಟೋ ಅಷ್ಟರಲ್ಲೇ ದೃಢಮನಸ್ಕನಾಗಿರುವ, ಆದುದರಿಂದ, **ಮೂರ್ಖಃ**-ಮೂಢನಾಗಿರುವವನಾಗಿ, **ಧರ್ಮಾಣಾಂ-**

(೧) ಭಾರ. ಕರ್ಣ. ೭೨. ೫೪.

ಮೂರ್ಖೋ ಧರ್ಮಾಣಾ ಮವಿಶಾರದಃ । ವೃದ್ಧಾನ ಪೃಚ್ಛನ್ ಸಂದೇಹಾನಂಧ ಶ್ವಭ್ರಮಿವರ್ಚ್ಛತಿ" ॥

(೧) ಅನ್ಯಥಾ ಮಂದ ಬುದ್ಧೀನಾಂ ಪ್ರತಿಭಾತಿ ದುರಾತ್ಮನಾಂ ।

---

ಶಾಸ್ತ್ರಗಳಲ್ಲಿ ವಿಧಿಸಿರುವದಕ್ಕೂ ನಿಷೇಧಿಸಿರುವದಕ್ಕೂ ಧರ್ಮಗಳೆಂದು ಹೆಸರು, ಅವುಗಳಲ್ಲಿ, ಅವಿಶಾರದಃ - ಪಾಂಡಿತ್ಯವಿಲ್ಲದಿರುವವನಾಗಿ, ಸಂದೇಹಾನ್ - ಸಂದೇಹಗಳನ್ನು ಕುರಿತು, ವೃದ್ಧಾನ್ - ವಯೋವೃದ್ಧತೆ ಜ್ಞಾನವೃದ್ಧತೆ, ಇರುವವರನ್ನು, ಇಲ್ಲಿ ವೃದ್ಧ ಶಬ್ದವು ಜ್ಞಾನವಿರುವ ವೃದ್ಧರನ್ನೇ ಹೇಳುತ್ತದೆ, ಅಪೃಚ್ಛನ್ - ಕೇಳಿ ತಿಳಿಯದೆ, ಅಂಧಃ - ಕುರುಡನಾದವನು, ಶ್ವಭ್ರಮಿವ-ಹಳ್ಳವನ್ನೋಪಾದಿಯಲ್ಲಿ, ದುರವಸ್ಥೆಯನ್ನು, ಋಚ್ಛತಿ - ಹೊಂದುವನು ಈಗ ಧರ್ಮರಾಜನು ಅರ್ಜುನನ ಸಜ್ಜಲಕ್ಕೆ ಪ್ರತಿಯಾಗಿ ಹೇಳಿದನು, ನೀನು ಕರ್ಣನನ್ನು ವಧಿಸಲಾರೆ, ಗಾಂಡೀವವನ್ನು ಕೃಷ್ಣನಿಗೆ ಕೊಟ್ಟುಬಿಡು ಎಂದನು ತನ್ನಭಿಪ್ರಾಯದಲ್ಲೇ ಹಟಹಿಡಿದು, ವಿರುದವಾಗಿ ಹೇಳಿದನಲ್ಲಾ ಎಂಬ ಕೋಪದಿಂದ ಅಣ್ಣನನ್ನು ಕೊಂದುಬಿಡುತ್ತೇನೆಂದು ಉದ್ಯೋಗಿಸಿ ಭ್ರಾತೃವಧರೂಪದೋಷ ಹೇಗೆ ಪ್ರಾಪ್ತವಾಗುತ್ತಿತ್ತೋ ಹಾಗೆ ಎಂಬ ಭಾವವು. ಆದುದರಿಂದ ಜ್ಞಾನಿಯ ಆಗಮೋಕ್ತಜ್ಞಾನವನ್ನು ಜ್ಞಾನಿಗಳ ಉಪದೇಶಮೂಲಕ ಸಂಪಾದಿಸಿ, ವಿವೇಕೋತ್ಥಜ್ಞಾನಮೂಲಕ ಸರ್ವಸಮಂಜಸಾರ್ಥಗಳನ್ನು ಗ್ರಹಿಸತಕ್ಕದ್ದು ಯುಕ್ತವೇ ವಿನಾ ಮೊಂಡತನ ಕೂಡದೆಂದು ಪರಮ ಹಿತೋಪದೇಶವನ್ನು ಮಾಡುತ್ತಾರೆ ಧರ್ಮಾಣಾಂ ಅವಿಶಾರದಃ ಎಂದು ನಿಂದಿಸಿದುದರಿಂದ ಧರ್ಮಗಳಲ್ಲಿ ವಿಶಾರದತೆಯು ಆವಶ್ಯಕವೆಂದು ಆಗಮೋತ್ಥಜ್ಞಾನದಾವಶ್ಯಕತೆಯು ಹೇಳಲ್ಪಟ್ಟಿತು. ವೃದ್ಧಾನಪೃಚ್ಛನ್ ಸಂದೇಹಾನ್ ಎಂದು ಹೇಳಿರುವದರಿಂದ ವಿವೇಕೋತ್ಥಜ್ಞಾನದ ಆವಶ್ಯಕತೆಯು ಹೇಳಿದಂತಾಯಿತು. ಹೀಗೆ ನಡೆಸದಿದ್ದರೆ ಕುರುಡನು ಹಳ್ಳದಲ್ಲಿ, ಬಿದ್ದು ಅನರ್ಥವನ್ನು ಹೊಂದಿದಹಾಗೂ, ಭ್ರಾತೃವಧೆಯಲ್ಲಿ ಉದ್ಯುಕ್ತನಾದ ಅರ್ಜುನನ ಹಾಗೂ, ಮಹಾ ದೋಷಯುಕ್ತನು ಆಗುವನೆಂಬ ಭಾವವು. ಹೀಗೆ ಪರಮ ಹಿತವನ್ನು ಬೋಧಿಸಿದ್ದರೂ, ಲಕ್ಷ್ಮಿಯು ಉಪಲಕ್ಷಣವೆಂದು ಭಾವಿಸುವವರು ತಮ್ಮ ತಪ್ಪನ್ನು ತಿದ್ದಿಕೊಳ್ಳುವದಿಲ್ಲವೇ ಎಂದು ಪರಿತಾಪ ಪಡುತ್ತಾರೆ.

ಪ್ರಮಾಣಕಾರ್ಥ ಬೋಧೆ ಇದ್ದರೂ ಹಟದಿಂದ ಹಿಡಿದುದನ್ನು ಬಿಡದೇ ಇರುವದು ಏತಕ್ಕೆ ಎಂಬುದಕ್ಕೆ ಕಾರಣವನ್ನು ಇತಿಹಾಸ ಸಮುಚ್ಚಯ ವಾಕ್ಯದಿಂದ

---

(೧) ಇತಿಹಾಸ ಸಮುಚ್ಚಯ. ೩೩. ೧೦೮.

**ಕುತರ್ಕ (ವ್ಯಾಳದಷ್ಟಾನಾಂ) ಜ್ಞಾನದುಷ್ಟಾನಾಂ ವಿಭ್ರಾಂತೇಂದ್ರಿಯ (ವಾಜಿನಾಂ) ವಾದಿನಾಂ । " ಎಙ್ಗರ ದಶೈಯಾಮ್.**

**ಅತಶ್ಶ್ರೀಮಚ್ಛಬ್ದೋ ಸಿದ್ಧೋಪಾಯ ಸೂಚಕ ವಿಶೇಷಣ ಮೇವೇತಿ ನಿಗಮಯತಿ.**

---

**ಆಗೈಯಾಲ್ ಸಿದ್ಧೋಪಾಯ ಶಬ್ದವಾಚ್ಯ ವಿಮರ್ಶತ್ತಿಲ್**

---

ಉದಾಹರಿಸುತ್ತಾರೆ.—ಮಂದಬುದ್ಧೀನಾಂ - ಅಲ್ಪವಾದ ಬುದ್ಧಿಯುಳ್ಳವರಿಗೂ **ದುರಾತ್ಮನಾಂ** – ರಾಜಸ ತಾಮಸಸ್ವಭಾವಯುಕ್ತರಿಗೂ, **ಕುತರ್ಕ ವ್ಯಾಳದಷ್ಟಾನಾಂ** - ಕುತರ್ಕವೆಂಬ ಸರ್ಪದಿಂದ ಕಚ್ಚಲ್ಪಟ್ಟವರಿಗೂ, **ಕುತರ್ಕ ಜ್ಞಾನ ದುಷ್ಟಾನಾಂ** ಎಂಬ ಪಾಠವಾದರೆ, ಕುತರ್ಕದ ಜ್ಞಾನದಿಂದ ದುಷ್ಟರಾದವರಿಗೆ ಎಂಬರ್ಥವು, **ವಿಭ್ರಾಂತೇಂದ್ರಿಯ ವಾಜಿನಾಂ** - ವಿಷಯೋಪಭೋಗಗಳಿಂದ ಭ್ರಾಂತಿ ಹೊಂದಿದ ಎಂದರೆ ಸಿಕ್ಕಿದ ಹಾಗೆ ಸಂಚರಿಸುತ್ತಿರುವ, ಇಂದ್ರಿಯಗಳೆಂಬ ತುಂಟ ಕುದುರೆಗಳುಳ್ಳವರಿಗೂ, **ವಾದಿನಾಂ** ಎಂಬ ಪಾಠವಾದರೆ, ಭ್ರಾಂತಿ ಹೊಂದಿದ ಇಂದ್ರಿಯಗಳಿಂದ ವಾದಿಸುವವರಿಗೂ, **ಅನ್ಯಥಾ** - ಪ್ರಾಮಾಣಿಕವಲ್ಲದೆ ಬೇರೆಯಾಗಿ ಅಭಿಪ್ರಾಯವು, **ಪ್ರತಿಭಾತಿ** - ತೋರಿಬರುತ್ತದೆ. ಸಮಂಜಸಗಳಾದ ಪ್ರಮಾಣ ಸಂಪ್ರದಾಯಗಳನ್ನೆಲ್ಲಾ ಬೋಧಿಸಿದರೂ ತಿದ್ದಿಕೊಳ್ಳದಿರುವುದು ಕರ್ಮಬಲಿಷ್ಠವಾದುದಾಗಿ ಮಂದಬುದ್ಧಿಗಳಾಗಿ ರಾಜಸ ತಾಮಸ ಸ್ವಭಾವಯುಕ್ತರಾಗಿ, ಕುತರ್ಕಗಳಿಗೆ ವಶರಾಗಿ, ದುಷ್ಟೇಂದ್ರಿಯಗಳಿಂದ ವಂಚಿತರಾಗಿರುವವರೀಗ ವಿರುದ್ಧಾರ್ಥಗಳನ್ನು ಗ್ರಹಿಸುವರು (ಎಂದು ಇತಿಹಾಸ ಸಮುಚ್ಚಯ ವಾಕ್ಯದಲ್ಲಿ) **ಎಙ್ಗರ ದಶೈಯಾಮ್** - ಎಂದು ಹೇಳಿರುವ ಅವಸ್ಥೆಯಾಗುತ್ತದೆ, ಎಂದರೆ ಅಂತಹ ಅನರ್ಥಗಳಿಗೆ ಗುರಿಯಾಗುವನೆಂಬ ಭಾವವು.

**ಆದುದರಿಂದ ಶ್ರೀಮಚ್ಛಬ್ದವು ಸಿದ್ಧೋಪಾಯವನ್ನು ಸೂಚಿಸುವ ವಿಶೇಷಣವೆಂದು ಪೂರ್ಣಮಾಡುತ್ತಾರೆ.**

---

**ಆಗೈಯಾಲ್** – ಆದುದರಿಂದ, **ಸಿದ್ಧೋಪಾಯೇತ್ಯಾದಿ**-ಸಿದ್ಧೋಪಾಯ ಶಬ್ದದಿಂದ ಹೇಳಲ್ಪಟ್ಟವರು ಯಾರು ? **"ಯಮೇವೈಷ ವೃಣುತೇ ತೇನ ಲಭ್ಯಃ"** ಎಂದು ಹೇಳಿರುವ ಹಾಗೆ ನಾರಾಯಣನೊಬ್ಬನೆಯೋ ? ಅಥವಾ **"ಶ್ರದ್ಧಯಾ ದೇವೋ ದೇವತ್ವಮಶ್ನುತೇ"** ಎಂದೂ, **"ಲಕ್ಷ್ಮ್ಯಾ ಸಹ ಹೃಷೀಕೇಶೋ ದೇವ್ಯಾ ಕಾರುಣ್ಯರೂಪಯಾ । ರಕ್ಷಕಸ್ಸರ್ವಸಿದ್ಧಾನ್ತೇ ವೇದಾಂ**

(೧) "ನಾನಯೋರ್ವಿದ್ಯತೇ ಪರಂ," (೨) "ಯಥಾಸರ್ವಗತೋ ವಿಷ್ಣು ಸ್ತಥೈವೇಯಂ ದ್ವಿಜೋತ್ತಮ"

---

ತೇಷು ಚ ಗೀಯತೇ" ಎಂದೂ ಹೇಳಿರುವ ಹಾಗೆ ಲಕ್ಷ್ಮೀ ವಿಶಿಷ್ಟನಾದ ನಾರಾಯಣನೇ ಸಿದ್ಧೋಪಾಯನೇ ? ಎಂಬ ವಿಮರ್ಶೆಯಲ್ಲಿ (೧)" ಅನಯೋಃ-ಈ ಲಕ್ಷ್ಮೀ ನಾರಾಯಣರಿಗಿಂತ, ಪರಂ-ಬೇರೆಯಾಗಿ ಶ್ರೇಷ್ಠವಾದುದು, ನವಿದ್ಯತೇ-ಇರುವದಿಲ್ಲವು. ಈ ಲೀಲಾವಿಭೂತಿಯಲ್ಲಿ ಎಲ್ಲವೂ ಇಬ್ಬರ ನಿಯಾಮ್ಯ ವರ್ಗಕ್ಕೆ ಸೇರಿದವಾದರೂ, ಕೆಲವುಗಳಲ್ಲಿ ನಾರಾಯಣನಿಗೆ ಅಭಿಮಾನವನ್ನೂ, ಇನ್ನು ಕೆಲವುಗಳಲ್ಲಿ ಲಕ್ಷ್ಮಿಗೆ ಅಭಿಮಾನವನ್ನೂ ಮೈತ್ರೇಯರಿಗೆ ಶ್ರೀ ಪರಾಶರರು ಉಪದೇಶಿಸಿದವರಾಗಿ ಹೇಳುತ್ತಾರೆ.—"ದೇವ ತಿರ್ಯಙ್ಮನುಷ್ಯೇಷು ಪುನ್ನಾಮಾ ಭಗವಾನ್ ಹರಿಃ । ಸ್ತ್ರೀನಾಮ್ನೀ ಶ್ರೀಶ್ಚ ವಿಜ್ಞೇಯಾ ನಾನಯೋರ್ವಿದ್ಯತೇ ಪರಂ" ದೇವತೆ, ಮನುಷ್ಯ, ಇತರ ಪ್ರಾಣಿಗಳು, ಇವುಗಳಲ್ಲಿ ಪುರುಷ ವಾಚಕವಾದವುಗಳೆಲ್ಲಾ ಹರಿಯೆಂದೂ, ಸ್ತ್ರೀ ವಾಚಕವಾದುದೆಲ್ಲಾ ಲಕ್ಷ್ಮಿ ಎಂದೂ, ಹೀಗೆ ಇವರಿಬ್ಬರಲ್ಲದೆ ಬೇರೆ ಯಾವುದೂ ಇಲ್ಲವೆಂದೂ ಹೇಳಲ್ಪಟ್ಟಿತು. ಮನೆಯಲ್ಲಿರುವ ಪದಾರ್ಥಗಳ ವಿಷಯದಲ್ಲಿ ಸ್ವಾಮಿತ್ವವು ದಂಪತಿಗಳಿಬ್ಬರಿಗೂ ಸೇರಿದುದಾದರೂ, ಸೀರೆ, ಕುಂಕುಮ ಆಭರಣಾದಿಗಳಲ್ಲಿ ಮನೆಯ ಹೆಂಗಸಿಗೆ ಹೇಗೆ ಅಭಿಮಾನವೋ ಹಾಗೆಯೇ ಧೋತ್ರ, ಅಂಗಿಗಳು, ದೇವರ ಪೂಜಾ ಸಾಮಗ್ರಿಗಳು ಮೊದಲಾದವುಗಳಲ್ಲಿ ಮನೆಯ ಯಜಮಾನನಿಗೆ ಹೇಗೆ ಅಭಿಮಾನವೋ ಹಾಗೆ ಎಂಬ ಭಾವವು. ಇವರಿಂದ ಇಬ್ಬರೂ ಸೇರಿ ಏಕಶೇಷಿತ್ವವುಂಟೆಂದು ಉಪಪಾದಿಸಲ್ಪಟ್ಟಿತು.

(೨) "ವಿಷ್ಣುವು, ಯಥಾ-ಹೇಗೆ, ಸರ್ವಗತಃ-ಸಮಸ್ತ ಚಿದಚಿತ್ತುಗಳನ್ನೂ ವ್ಯಾಪಿಸಿರುವನೋ, ಹೇ ದ್ವಿಜೋತ್ತಮ - ಓ ಬ್ರಾಹ್ಮಣಶ್ರೇಷ್ಠರಾದ ಮೈತ್ರೇಯರೇ, ತಥೈವ - ಹಾಗೆಯೇ, ಅಯಂ - ಈ ಲಕ್ಷ್ಮಿಯೂ" ಹೀಗೆ ಎಲ್ಲಾ ಚಿದಚಿತ್ತುಗಳಿಗೂ ಲಕ್ಷ್ಮೀ ನಾರಾಯಣರೂ ಅವಿನಾಭೂತರಾಗಿ ಆತ್ಮರು; ಆದುದರಿಂದ ಸಮಸ್ತಕ್ಕೂ ಸ್ವಾಮಿತ್ವವುಂಟಾಗಿ, ಇಬ್ಬರೂ ಲೋಕಗಳಿಗೆಲ್ಲಾ ಈಶ್ವರೇಶ್ವರಿಗಳು ಎಂದು ಹೇಳಲ್ಪಟ್ಟಿರುವದರಿಂದ ಸರ್ವ ಶೇಷಿತ್ವವೂ ಇಬ್ಬರಿಗೂ ಉಂಟೆಂದು ಹೇಳಲ್ಪಟ್ಟಿತು. ಹಾಗೆಯೇ ಇನ್ನೊಂದು ಕಡೆಯಲ್ಲೂ "ತ್ವಯೈತ ದ್ವಿಷ್ಣುನಾಚಾಂಬ ಜಗದ್ವ್ಯಾಪ್ತಂಚರಾಚರಮ್" ಓ ಲಕ್ಷ್ಮಿಯೇ ನಿನ್ನಿಂದಲೂ ವಿಷ್ಣುವಿನಿಂದಲೂ ಈ ಚರಾಚರದಿಂದ ಕೂಡಿದ ಜಗತ್ತೆಲ್ಲವೂ ವ್ಯಾಪಿ

---

(೧) ವಿ. ಪು ೧ ೮ ೩೫ (೨, ವಿ. ಪು. ೧. ೮. ೧೭

(೩) "ಅಸ್ಯಾ ದೇವ್ಯಾ ಮನಸ್ತಸ್ಮಿನ್ ತಸ್ಯ ಚಾಸ್ಯಾಂ ಪ್ರತಿಷ್ಠಿತಂ। ತೇನೇಯಂ ಸ ಚ ಧರ್ಮಾತ್ಮಾ ಮುಹೂರ್ತಮಪಿ ಜೀವತಿ" (೪) "ವ್ಯಾಪಕಾವತಿಸಂಶ್ಲೇಷಾದೇಕತತ್ತ್ವಮಿವೋದಿತಂ"

---

ಸಲ್ಪಟ್ಟಿರುತ್ತದೆ ಎಂದು ಹೇಳಲ್ಪಟ್ಟಿರುತ್ತದೆ. ಹಾಗೆಯೇ ವಿಷ್ವಕ್ಸೇನ ಸಂಹಿತೆಯಲ್ಲೂ, "ಯಥಾಮಯಾ ಜಗದ್ವ್ಯಾಪ್ತಂ ಸ್ವರೂಪೇಣ ಸ್ವಭಾವತಃ। ತಥಾವ್ಯಾಪ್ತಂ ತಯಾಸರ್ವಂ ನಿಯನ್ತ್ರೀಚ ತಥೇಶ್ವರೀ ॥" ಸರ್ವೇಶ್ವರನಾದ ನನ್ನಿಂದ ಜಗತ್ತು ಹೇಗೆ ವ್ಯಾಪಿಸಲ್ಪಟ್ಟಿರುತ್ತದೋ, ಹಾಗೆಯೇ ಸಮಸ್ತವೂ ನನ್ನ ಪತ್ನಿಯಾದ ಲಕ್ಷ್ಮಿಯಿಂದ ವ್ಯಾಪಿಸಲ್ಪಟ್ಟಿರುತ್ತದೆ. ನಾನು ಹೇಗೆ ಸಮಸ್ತಕ್ಕೂ ನಿಯಾಮಕನಾಗಿ ಈಶ್ವರನೋ ಹಾಗೆಯೇ ಆಕೆಯೂ ಸಮಸ್ತಕ್ಕೂ ನಿಯಾಮಕಳು ಮತ್ತು ಈಶ್ವರಿಯು. ಹೀಗೆಲ್ಲಾ ಪ್ರಮಾಣಗಳಿರುವದರಿಂದ ಸರ್ವ ಶೇಷಿತ್ವವು ಇಬ್ಬರಿಗೂ ಏರ್ಪಟ್ಟಿತು

(೩) ಅಸ್ಯಾಃ ದೇವ್ಯಾಃ-ಇದು ಆಂಜನೇಯನ ಸೀತಾರಾಮರ ಪ್ರಶಂಸಾರೂಪವಾಕ್ಯವು, ಈ ದೇವಿಯಾದ ಸೀತೆಯ, ಮನಸ್ಸು, ತಸ್ಮಿನ್-ಆ ಶ್ರೀರಾಮನಲ್ಲಿ, ಪ್ರತಿಷ್ಠಿತಂ - ಸ್ಥಿರವಾಗಿ ಇಡಲ್ಪಟ್ಟಿರುತ್ತದೆ. ತೇನ - ಆ ಕಾರಣದಿಂದ ಇಯಂ - ಈಕೆಯು, ಮುಹೂರ್ತಮಪಿಜೀವತಿ - ಒಂದು ಮುಹೂರ್ತವಾದರೂ ಜೀವಿಸಿರುವಳು. ತಸ್ಯಚ - ಆ ಶ್ರೀರಾಮನ, ಮನಸ್ಸು, ಅಸ್ಯಾಂ - ಈಕೆಯಲ್ಲಿ ಪ್ರತಿಷ್ಠಿತಂ - ಸ್ಥಿರವಾಗಿ ನೆಲಗೊಂಡಿರುತ್ತದೆ. ತೇನ - ಆ ಕಾರಣದಿಂದ, ಸಚ ಧರ್ಮಾತ್ಮಾ - ಆ ಧರ್ಮಿಷ್ಠನಾದ ಶ್ರೀರಾಮನೂ ಕೂಡ, ಮುಹೂರ್ತಮಪಿ ಜೀವತಿ - ಒಂದು ಮುಹೂರ್ತವಾದರೂ ಜೀವಿಸಿರುತ್ತಾನೆ. ಹೀಗೆ ಪರಸ್ಪರಾನುರಾಗದಿಂದ ಒಬ್ಬರ ಮನಸ್ಸು ಇನ್ನೊಬ್ಬರಲ್ಲಿ ಇಟ್ಟಿರುವದರಿಂದಲೇ ಇಬ್ಬರೂ ಬದುಕಿರುವದು, ಎಂಬ ಭಾವವು. ಇದರಿಂದ ಇಬ್ಬರೂ ಪ್ರಾವಣ್ಯಾತಿಶಯವುಳ್ಳವರೆಂದು ಹೇಳಲ್ಪಟ್ಟಿತು.

(೪) ವ್ಯಾಪಕೌ-ಲಕ್ಷ್ಮೀನಾರಾಯಣರಿಬ್ಬರೂ ಸರ್ವವನ್ನೂ ವ್ಯಾಪಿಸಿರುವವರು, ಅತಿಸಂಶ್ಲೇಷಾತ್ - ಒಬ್ಬರನ್ನೊಬ್ಬರನ್ನು ಎಂದಿಗೂ ಬಿಡದಿರುವ ವಿಶೇಷ ಸಂಶ್ಲೇಷವಿರುವದರಿಂದ, ಏಕತತ್ತ್ವಮಿವ-ಇಬ್ಬರೂ ಸೇರಿ ಒಂದೇ ತತ್ತ್ವವೋ ಎಂದು, ಉದಿತೌ - ಹೇಳಲ್ಪಟ್ಟಿರುತ್ತಾರೆ. ಇದರಿಂದ "ಪಿರಿವತ್ತು" ಅನ್ವಯ ವಿಶೇಷವು ಹೇಳಲ್ಪಟ್ಟಿತು.

---

(೩) ರಾಮಾ, ಸುಂ ೧೫ ೫೨. (೪) ಅಹಿ. ೪. ೭೮.

**ಎಙ್ಗರ ಪಡಿಯೇ ಏಕ ಶೇಷಿತ್ವತ್ತಾಲುಮ್, ಏಕಾಭಿಪ್ರಾಯತ್ವೈಯಾಲುಮ್, ಪರಸ್ಪರ ಪ್ರಾವಣ್ಯಾತಿಶಯತ್ತಾಲುಮ್, ಸ್ವರೂಪರೂಪಾದಿಗಳಿಲ್ ಪಿರಿವತ್ತ ಅನ್ವಯ ವಿಶೇಷತ್ತಾಲುಮ್, (೧) ಗಾಢೋಪಗೂಢಾನಿತೇ" ಎನ್ರಪ್ಪಡಿ ಸುಶ್ಲಿಷ್ಟಮಾನ ವಿಶಿಷ್ಟ ತತ್ವಮ್ ನಿರ್ಕಿರ ನಿಲೈ ಕುಲೈಯಾದಪಡಿ ಸವಿಶೇಷಣಮಾನ ನಾರಾಯಣ ಶಬ್ದಮ್, ಪ್ರತಿಪಾದಿಕ್ಕಿರ ಪಡಿಯೈ ಅನುಸಂಧಿಕ್ಕೈ, ಸತ್ವಸ್ಥರ್ಕ್ಕು ಪ್ರಾಪ್ತಮ್.**

---

**ಎಙ್ಗರಪಡಿಯೇ** - ಎಂದು ಹೇಳಿರುವ ಹಾಗೆ, ಮೇಲೆ ಉದಾಹರಿಸಿರುವ ಪ್ರಮಾಣಗಳು ಕ್ರಮವಾಗಿ ಏನು ಬೋಧಿಸುತ್ತವೆ ಎಂದರೆ ತಿಳಿಸುತ್ತಾರೆ:—**ಏಕ ಶೇಷಿತ್ವತ್ತಾಲುಮ್** - ಇಬ್ಬರೂ ಸಮಸ್ತ ಜಗತ್ತಿಗೂ ಈಶ್ವರೇಶ್ವರಿಗಳಾಗಿ ಶೇಷಿಯಾಗಿರುವದರಿಂದಲೂ, **ಏಕಾಭಿಪ್ರಾಯತ್ತಾಲುಮ್** - ಇಬ್ಬರಿಗೂ ಅಭಿಪ್ರಾಯಗಳ ಎಂದಿಗೂ ಪರಸ್ಪರ ವಿರೋಧವಾಗದೆ ಒಂದೇ ಅಭಿಪ್ರಾಯದಿಂದಲೂ, **ಪರಸ್ಪರ ಪ್ರಾವಣ್ಯಾತಿಶಯತ್ತಾಲುಮ್**-ಪರಸ್ಪರಾನುರಾಗದ ಅತಿಶಯದಿಂದಲೂ, ಸ್ವರೂಪರೂಪಾದಿಗಳಲ್ಲಿ, **ಪಿರಿವತ್ತ**-ವಿಶ್ಲೇಷೆಯೇ ಇಲ್ಲದಿರುವ, **ಅನ್ವಯ ವಿಶೇಷತ್ತಾಲುಮ್** - ಸಂಬಂಧ ವಿಶೇಷದಲ್ಲಿರುವದರಿಂದಲೂ, ಇಲ್ಲಿ ಆದಿ ಪದದಿಂದ ಗುಣವಿಭವೈಶ್ವರ್ಯಗಳು ಹೇಳಲ್ಪಟ್ಟವು. **"ಗಾಢೋಪಗೂಢಾನಿ ತೇ"** **ತೇ** - ನಿನ್ನ, ಹಿಂದೆ ಅನುರೂಪ ರೂಪ ವಿಭವೈಃ ಎಂದು ಇದೆ, ಅನುಗುಣವಾದ ಸ್ವರೂಪರೂಪ ವಿಭವಗಳಿಂದ ಧೃಡವಾದ ಸಂಶ್ಲೇಷವುಳ್ಳವುಗಳು ಎಂದರೆ ನಿತ್ಯಯೋಗವುಳ್ಳವುಗಳು, **ಎನ್ರುಮ್ ಪಡಿ** - ಎಂದು ಶ್ರೀ ಯಾಮುನೇಯರು ಚತುಶ್ಲೋಕಿಯಲ್ಲಿ ಉಪಪಾದಿಸಿರುವ ಹಾಗೆ, **ಸುಶ್ಲಿಷ್ಟಮಾನ** - ಚೆನ್ನಾಗಿ ನಿತ್ಯಯೋಗವನ್ನು ಹೊಂದಿರುವ **ವಿಶಿಷ್ಟತತ್ವಮ್** - ವಿಶೇಷಣವಾದ ಲಕ್ಷ್ಮಿಯಿಂದ ಕೂಡಿದ ವಿಶೇಷ್ಯವಾದ ನಾರಾಯಣನೆಂಬ ತತ್ವವು, **ನಿರ್ಕಿರ ನಿಲೈ** - ಇರುವ ಸ್ಥಿತಿಯು, **ಕುಲೈಯಾದಪಡಿ** - ವಿರೋಧವಾಗದಹಾಗೆ, **ಸವಿಶೇಷಣಮಾನ ನಾರಾಯಣ ಶಬ್ದಮ್**-ಶ್ರೀಮತ್ ಎಂಬ ವಿಶೇಷಣದಿಂದ ಕೂಡಿದ ನಾರಾಯಣ ಶಬ್ದವನ್ನು, **ಪ್ರತಿಪಾದಿಕ್ಕಿರ ಪಡಿಯೈ** - ದ್ವಯಪೂರ್ವಖಂಡದಲ್ಲಿ ಪ್ರತಿಪಾದಿಸುವ ರೀತಿಯನ್ನು, **ಅನುಸಂಧಿಕ್ಕೈ** - ಅನುಸಂಧಾನ ಮಾಡೋಣವು ಎಂದರೆ ಹಾಗೆ ಭಾವಿಸೋಣವು, **ಸತ್ವಸ್ಥರುಕ್ಕು** - ಸತ್ವಗುಣಾವಿಷ್ಟರಿಗೆ, **ಪ್ರಾಪ್ತಮ್** - ಉಚಿತವು ಇಷ್ಟು ದೂರ ಅನೇಕ ಶ್ರುತಿ ಸ್ಮೃತಿ ಇತಿಹಾಸ ಪುರಾಣಪ್ರಮಾಣ

---

(೧) ಚತುಶ್ಲೋಕೀ. ೪.

ಗಳು, ಸಾಂಪ್ರದಾಯಿಕವಾದ ಆಳ್ವಾರಾಚಾರ್ಯರುಗಳ ಅಭಿಪ್ರಾಯವೂ, ತದನುಗುಣವಾಗಿ ಮಾಡಿದ ಸತ್ತರ್ಕವೂ ಇವೂ ಪ್ರಯೋಜನಕಾರಿಯಾಗಿ ಸಮಂಜಸವಾದ ಅಭಿಪ್ರಾಯವನ್ನು ಗ್ರಹಿಸಬೇಕಾದರೆ ಅವರುಗಳು ಸತ್ತ್ವಸ್ಥರಾಗಿರಬೇಕೆಂಬ ಭಾವವು; ಮೇಲೆ ಉದಾಹರಿಸಿದ ನಾಲ್ಕು ಪ್ರಮಾಣಗಳೂ ನಾಲ್ಕು ಅಭಿಪ್ರಾಯಗಳನ್ನು ಸಮರ್ಥಿಸುತ್ತವೆ. ಅವುಗಳಿಂದ ಕ್ರಮವಾಗಿ ಇಬ್ಬರೂ ಸೇರಿ ಏಕಶೇಷಿಯೆಂದೂ, ಇಬ್ಬರಿಗೂ ಭಿನ್ನಾಭಿಪ್ರಾಯವಿಲ್ಲದೆ ಸರ್ವಜ್ಞರಾದುದರಿಂದ ಏಕಾಭಿಪ್ರಾಯ ಉಳ್ಳವರೆಂದೂ, ಪರಸ್ಪರಾನುರಾಗದಿಂದ ಯಾವಾಗಲೂ ಒಟ್ಟಿಗೇ ಇರುವವರೆಂದೂ, ಸ್ವರೂಪರೂಪಗುಣ ವಿಭವೈಶ್ವರ್ಯಗಳಲ್ಲೂ ನಿತ್ಯಯೋಗವುಳ್ಳವರೆಂದೂ, ಹೇಳಲ್ಪಟ್ಟವು. ಇವುಗಳನ್ನೆಲ್ಲಾ ಗರ್ಭೀಕರಿಸಿ ಶ್ರೀ ಯಾಮುನೇಯರವರು ಚತುಶ್ಲೋಕಿಯ ನಾಲ್ಕನೆಯ ಶ್ಲೋಕವಾದ "ಶಾನ್ತಾನಂತ" ವೆಂಬ ಶ್ಲೋಕ ಮೂಲಕ ಉಪಪಾದಿಸಿ, ಗಾಢೋಪಗೂಢಾನಿತೇ' ಎಂದು ನಿಗಮನವಾಡಿ ಹೇಳಿರುತ್ತಾರೆ. ದಾಸನು ಬರೆದಿರುವ ಚತುಶ್ಲೋಕಿಯ ವ್ಯಾಖ್ಯಾನದ ೭೨-೯೫ ಪುಟಗಳಲ್ಲಿ ಈ ಶ್ಲೋಕದ ಅರ್ಥವು ವಿವರಿಸಲ್ಪಟ್ಟಿರುತ್ತದೆ. ಅದನ್ನು ಪರಾಂಬರಿಸಬಹುದು.

ಜಗತ್ತೆಲ್ಲವೂ ಇಬ್ಬರಿಗೂ ಶೇಷಿಯಾದರೆ, ಇಬ್ಬರೂ ಈಶ್ವರೇಶ್ವರಿಗಳು ಎಂದು ಏರ್ಪಟ್ಟವು. ಹಾಗಾದ ಪಕ್ಷದಲ್ಲಿ (೧) ಪರಸ್ಪರ ವೈಮನಸ್ಯದಿಂದ ವ್ಯಾಘಾತ ಉಂಟಾಗಲಾರದೋ ಎಂದರೆ ಅದಕ್ಕೇನೂ ಕಾರಣವಿಲ್ಲವು. ಮಹಾಸತ್ತ್ವಗುಣಾವಿಷ್ಟರಾಗಿ, ವೈಮನಸ್ಯಕ್ಕೆ ಬೇಕಾದ ರಜಸ್ತಮೋಗುಣಗಳ ಗಂಧವೇ ಇಲ್ಲದೆ, ಪರಸ್ಪರ ಇಂಗಿತಗಳನ್ನು ಚೆನ್ನಾಗಿ ತಿಳಿದವರಾಗಿ ಏಕಾಭಿಪ್ರಾಯವುಳ್ಳವರಾಗಿ, ಪರಸ್ಪರಾನುರಾಗವುಳ್ಳವರಾಗಿರುವದರಿಂದ, ಪರಸ್ಪರ ವೈಮನಸ್ಯ ಮೂಲಕ ವ್ಯಾಘಾತಕ್ಕೆ ಕಾರಣವೇ ಇಲ್ಲವು. "ಮದ್ಧರ್ಮ ಧರ್ಮಿಣೀ ನಿತ್ಯಂ" ಎಂದು ಸರ್ವೇಶ್ವರನೇ ಹೇಳಿಕೊಂಡಿರುವದರಿಂದ ಏನೊಂದೂ ತೊಂದರೆ ಇಲ್ಲವು.

(೨) ಇಬ್ಬರೂ ಈಶ್ವರೇಶ್ವರಿಗಳು ಎಂದರೆ "ನತತ್ಸಮಶ್ಚಾಭ್ಯಧಿಕಶ್ಚ ದೃಶ್ಯತೇ" ಎಂದರೆ ಸರ್ವೇಶ್ವರನಿಗೆ ಸಮರಾಗಲಿ ಅಧಿಕರಾಗಲಿ ಇಲ್ಲವೆಂದು ಹೇಳುವ ಶ್ರುತಿಗೆ ವಿರೋಧವಾಗಿ ಇಬ್ಬರೂ ಸಮರೆಂದು ಹೇಳಬೇಕಾಗುತ್ತದೆಯಾದುದರಿಂದ ಸರಿಯಲ್ಲವೆಂದರೆ, ಅದು ಸರಿಯಾದ ಆಕ್ಷೇಪವಲ್ಲವು. ಏಕೆಂದರೆ ತಾನು ಪತಿಗೆ ಶೇಷಭೂತಳೆಂದು ಅಸಂದೇಶಾತ್ತು ರಾಮಸ್ಯ ತಪಸಶ್ಚಾನುಪಾಲನಾತ್ । ನತ್ವಾಂ ಕುರ್ಮಿ ದಶಗ್ರೀವ ಭಸ್ಮ ಭಸ್ಮಾರ್ಹತೇಜಸಾ" (ರಾಮಾ. ಸುಂ ೨೨. ೨೦ ) ಎಂಬಲ್ಲಿ ಹೇಳಿಕೊಂಡಿರುವದರಿಂದಲೂ, "ಮಚ್ಛೇಷಭೂತಾ ಸರ್ವೇಷಾಂ ಈಶ್ವರೀ ವಲ್ಲಭಾಮಮ" ಎಂಬ ಸರ್ವೇಶ್ವರೋಕ್ತಿಯಿಂದಲೂ, ಪತಿಪಾರಾರ್ಥ್ಯಯುಳ್ಳವಳೆಂಬುದು ತೋರಿಬರುವದರಿಂದ ಆಕ್ಷೇಪಕ್ಕೆ ಕಾರಣವೇ

ಇಲ್ಲವು. ಹೀಗೆಯೇ ಐಕಾಂತ್ಯಕ್ಕೆ ಕುಂದಕವೆಂಬ ಮತ್ತು ಲಕ್ಷ್ಮಿಗೆ ವಿಭುತ್ವ ಕೊಡುವದಿಲ್ಲವೆಂಬಿವೇ ಮೊದಲಾದ ಆಕ್ಷೇಪಗಳಿಗೂ ಸಮಾಧಾನಗಳನ್ನು ದಾಸನು ಬರೆದಿರುವ ಶ್ರೀ ಸ್ತುತಿ ಚತುಶ್ಶ್ಲೋಕಿ ವ್ಯಾಖ್ಯಾನಗಳಲ್ಲಿ ಕಾಣಬಹುದು

ಗಾಢೋಪ ಗೂಢಾನಿತೇ ಎಂಬಲ್ಲಿ ನಿತ್ಯಯೋಗವು ಲಕ್ಷ್ಮೀನಾರಾಯಣ ರಿಗೆ ಹೇಳಲ್ಪಟ್ಟಿತು. ನಮ್ಮಲ್ಲೇ ಕೆಲವರು ಈ ನಿತ್ಯಯೋಗವು ದಿವ್ಯಮಙ್ಗಳ ವಿಗ್ರಹದಲ್ಲಿ ಮಾತ್ರವೇ ಎಂದೂ, ಸ್ವರೂಪವಿಭವಾದಿಗಳಲ್ಲಿ ಇಬ್ಬರಿಗೂ ನಿತ್ಯಯೋಗವಿಲ್ಲವೆಂದೂ ಹೇಳುವರು. ನಿತ್ಯಯೋಗ ವಿಷಯವು ಪುರಾಣ ರತ್ನವಾದ ವಿಷ್ಣುಪುರಾಣದಲ್ಲಿ ಬಹು ಸ್ವಾರಸ್ಯವಾಗಿ ಉಪಪಾದಿತವಾಗಿರು ತ್ತದೆ. ಮೈತ್ರೇಯರ ಪ್ರಶ್ನೆಯು ದಿವ್ಯಮಙ್ಗಳವಿಗ್ರಹ ವಿಷಯವಾಗಿ ದ್ದರೂ, ರಾಘವತ್ವೇ ಭವೇತ್ಸೀತಾ ರುಕ್ಮಿಣೀ ಕೃಷ್ಣಜನ್ಮನಿ ಎಂದು ಇಷ್ಟು ಮಾತ್ರ ನಿತ್ಯಯೋಗವನ್ನು ಹೇಳಿಬಿಟ್ಟರೆ, ಎಲ್ಲಿ ತಪ್ಪು ಅಭಿಪ್ರಾಯವುಳ್ಳವರಾಗು ತ್ತಾರೋ ಎಂಬ ಸಂದೇಹದಿಂದ, ಶ್ರೀ ಪರಾಶರರು "ನಿತ್ಯೈವೈಷಾ ಜಗ ನ್ಮಾತಾ ವಿಷ್ಣೋಃ ಶ್ರೀರನಪಾಯಿನೀ" ಎಂದು ನಿತ್ಯಯೋಗ ಪ್ರತಿಜ್ಞಾ ವಾಕ್ಯವನ್ನು ಹೇಳಿ, ಒಡನೆಯೇ ಉತ್ತರಾರ್ಧದಿಂದ, "ಯಥಾ ಸರ್ವಗತೋ ವಿಷ್ಣುಸ್ತಥೈವೇಯಂ ದ್ವಿಜೋತ್ತಮ" ಎಂದು ಸ್ವರೂಪತಃ ನಿತ್ಯಯೋಗ ವನ್ನೂ, ವಿಭುತ್ವವನ್ನೂ, ಉಪದೇಶಿಸಿರುತ್ತಾರೆ ಅದಕ್ಕೆ ಮುಂದಿನ ಶ್ಲೋಕ ಗಳಿಂದ ಅಧ್ಯಾಯ ಸಮಾಪ್ತಿಯವರೆಗೂ ವಿಭವದಲ್ಲಿ ನಿತ್ಯಯೋಗವನ್ನು ಹೇಳಿ, ಸ್ವರೂಪತಃ ನಿತ್ಯಯೋಗ ಹೇಳಿದುದನ್ನು ಇಂದ್ರಸ್ತುತಿಯಲ್ಲಿ ಪುನಃ "ತ್ವಯೈತ ದ್ವಿಷ್ಣುನಾಚಾಂಬ ಜಗದ್ವ್ಯಾಪ್ತಂ ಚರಾಚರಂ" ಎಂದು ಜ್ಞಾಪಿಸಿ, ಹೀಗೆ ಸ್ವರೂಪ ರೂಪ ವಿಭವೈಶ್ವರ್ಯಗಳಲ್ಲಿಯೂ ಉಂಟೆಂದು ಸ್ಥಾಪಿಸಿರುತ್ತಾರೆ ಹೀಗಿ ದ್ದರೂ ಕೆಲವರು ಯಾವ ಕಾರಣದಿಂದ ವಿಭುತ್ವವಿಲ್ಲವೆಂದೂ, ಆದರಿಂದ ಸ್ವರೂಪತಃ ನಿತ್ಯಯೋಗವಿಲ್ಲವೆಂದೂ ಹೇಳುವರೋ ತಿಳಿಯದು. ಕೆಲವು ಮಹನೀಯರು ಲಕ್ಷ್ಮಿಗೆ ಅಂತರ್ಯಾಮಿತ್ವವನ್ನೂ ಜಗತ್ಕಾರಣವನ್ನೂ ವಿಭುತ್ವ ವನ್ನೂ ಅಙ್ಗೀಕರಿಸುವದು ಕೇವಲ ಕುತರ್ಕಗಳೆಂದೂ ಕಲ್ಪಿತಗಳೆಂದೂ, ಹೇಳು ವರು. ಜಗತ್ಕಾರಣತ್ವವನ್ನು "ಆನೀತವಾದಗ್ಂ ಸ್ವಧಯಾತದೇಕಂ' ಎಂಬ, ಶ್ರದ್ಧಯಾದೇವೋ ದೇವತ್ವ ಮಶ್ನುತೇ ಎಂಬ ಶ್ರುತಿ ಮತ್ತು ವ್ಯಾಸೋಕ್ತಿಗಳೂ, ಶ್ರೀ ಪರಾಶರಭಟ್ಟರ ದಿವ್ಯ ಸೂಕ್ತಿಗಳೂ ಎಲ್ಲಾ ಬೋಧಿಸು ತ್ತವೆ. ಇವೆಲ್ಲಾ ಕುತರ್ಕಗಳೇ? ಲಕ್ಷ್ಮಿಗೆ ವಿಭುತ್ವವನ್ನು ಶ್ರೀ ಪರಾಶರರು ಬೋಧಿಸುತ್ತಾರೆ; ಇದು ಕುತರ್ಕವೇ, ಕಲ್ಪಿತವೇ? ಭಗವಚ್ಛಾಸ್ತ್ರವೂ ವಿಭುತ್ವವನ್ನು ಬೋಧಿಸುತ್ತದೆ, ಅದೂ ಕುತರ್ಕವೇ? ಕಲ್ಪಿತವೇ? ಇಂತಹ ಅಭಿಪ್ರಾಯಗಳ

## ಸಿದ್ಧೋಪಾಯ ಸಾಧ್ಯೋಪಾಯ ಶಬ್ದಯೋರರ್ಥ ನಿರ್ಧಾರಣಂ.

ಸಮಸ್ತ ಪುರುಷಾರ್ಥಾನಾಂ ಸಾಧಕಸ್ಯ ದಯಾನಿಧೇಃ ।
ಶ್ರೀಮತಃ ಪೂರ್ವಸಿದ್ಧತ್ವಾತ್ಸಿದ್ಧೋಪಾಯ ಮಿಮಂ ವಿದುಃ ॥೨೬॥

---

ಸತ್ವಸ್ಥರಿಗೆ ಉಂಟಾಗಲಾರದೆಂಬುದು ಶ್ರೀ ದೇಶಿಕರವರಭಿಪ್ರಾಯವು.

ಹಿಂದೆ ಅನುಗ್ರಹಿಸಿದ "ಇತ್ಥಂ ಪ್ರಪತ್ತಿ ವಿದ್ಯಾಯಾಂ" ಎಂಬ ಕಾರಿಕೆಯಲ್ಲಿ ಶ್ರೀ ದೇಶಿಕರವರು ವಿಶೇಷಣಗಳಾದ ಕಲ್ಯಾಣಗುಣಗಳೂ, ದಿವ್ಯ ಮಙ್ಗಳ ವಿಗ್ರಹ, ಅನುಗ್ರಹಮಯಳಾದ ಪ್ರಿಯಪತ್ನೀ ಇವರುಗಳಿಂದ ವಿಶಿಷ್ಟನಾದ ನಾರಾಯಣನೇ ಸಿದ್ಧೋಪಾಯನೇ ವಿನಾ ಈ ವಿಶೇಷಣಗಳಿಂದ ಪೃಥಕ್ಕಾದ ನಾರಾಯಣನು ಸಿದ್ಧೋಪಾಯನಲ್ಲವೆಂದು ಸ್ಥಾಪಿಸಿದರು. ಹಾಗಾದರೆ ಸಿದ್ಧೋಪಾಯನೆಂದರೇನು ? ಫಲಸಿದ್ಧಿಗೆ ಪೂರ್ವಭಾವಿಯಾಗಿ ಸಿದ್ಧವಾಗಿರುವ ಉಪಾಯವೆಂದಾದರೆ ಆಗ ಸಾಧ್ಯೋಪಾಯಗಳಾದ ಭಕ್ತಿ ಪ್ರಪತ್ತಿಗಳೂ ಕೂಡ ಸಿದ್ಧೋಪಾಯಗಳೆಂದಾಗುತ್ತದೆ ಆದುದರಿಂದ ಸಿದ್ಧೋಪಾಯನು ಶ್ರೀಮನ್ನಾರಾಯಣನೆಂದೂ, ಈ ಭಕ್ತಿ ಪ್ರಪತ್ತಿಗಳು ಸಿದ್ಧೋಪಾಯಗಳಲ್ಲವು, ಸಾಧ್ಯೋಪಾಯಗಳೆಂದೂ ತಿಳಿಸುತ್ತಾರೆ : ಹೀಗೆ ಕೆಲವು ಪೂರ್ವ ಪಕ್ಷಗಳು ಉಂಟಾಗಬಹುದು. ಅವುಗಳಿಗೆಲ್ಲಾ ನಿಷ್ಕರ್ಷಾಭಿಪ್ರಾಯಗಳನ್ನೂ ಸಮಾಧಾನಗಳನ್ನೂ ಕಾರಿಕೆಗಳ ಮೂಲಕ ದಯಪಾಲಿಸುತ್ತಾರೆ :—

### ಸಿದ್ಧೋಪಾಯ ಸಾಧ್ಯೋಪಾಯ ಶಬ್ದಗಳ ಅರ್ಥ ವ್ಯವಸ್ಥೆಯು.

ಸಮಸ್ತ ಪುರುಷಾರ್ಥಗಳಾದ ಎಂದರೆ ಧರ್ಮಾರ್ಥಕಾಮ ಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥಗಳನ್ನು, ಸಾಧಕಸ್ಯ-ಸಾಧಿಸಿಕೊಡುವ, ಇದರಿಂದ ಸರ್ವೇಶ್ವರನು ಸಿದ್ಧೋಪಾಯನಾಗಿರುವದರ ಪ್ರಯೋಜನವು ಹೇಳಲ್ಪಟ್ಟಿತು. ಹೀಗೆ ಬೇಡಿದ ಪುರುಷಾರ್ಥಗಳನ್ನು ಸಾಧಿಸಿಕೊಡಬೇಕಾದರೆ, ಎರಡು ಗುಣಗಳು ಸರ್ವೇಶ್ವರನಲ್ಲಿರಬೇಕು :—(೧) ಅಘಟಿತ ಘಟನಾರೂಪ ಸಾಮರ್ಥ್ಯವು (೨) ದಯೆಯು ; ಸಾಧಕಸ್ಯ ಎಂಬುದರಿಂದ ಸಾಮರ್ಥ್ಯವುಂಟೆಂದು ಹೇಳಲ್ಪಟ್ಟಿತು. ದಯೆಯುಂಟೆಂದು ದಯಾನಿಧೇಃ - ಕರುಣಾಸಾಗರನಾದ ಎಂಬುದರಿಂದ ಹೇಳಲ್ಪಟ್ಟಿತು. ಎರಡೂ ಆವಶ್ಯಕವು. ದಯೆ ಇಲ್ಲದ ಸಾಮರ್ಥ್ಯವೂ, ಸಾಮರ್ಥ್ಯವಿಲ್ಲದ ಬರೀ ದಯೆಯೂ ಕಾರ್ಯಕಾರಿಯಲ್ಲವು. ಹೀಗೆ ಸಾಮರ್ಥ್ಯವನ್ನೂ ದಯೆಯನ್ನೂ ಹೊಂದಿದ, ಶ್ರೀಮತಃ - ಲಕ್ಷ್ಮಿಯಿಂದ ಯುಕ್ತನಾದ ನಾರಾಯಣನ

ಭಕ್ತಿ ಪ್ರಪತ್ತಿ ಪ್ರಮುಖಂ ತದ್ವಶೀಕಾರ ಕಾರಣಮ್ ।
ತತ್ತತ್ಫಲಾರ್ಥಿ ಸಾಧ್ಯತ್ವಾ ತ್ಸಾಧ್ಯೋಪಾಯಂ ವಿದುರ್ಬುಧಾಃ ॥೨೮॥

---

(ನು), ಪೂರ್ವಸಿದ್ಧತ್ವಾತ್ - ಎಲ್ಲಾದಕ್ಕಿಂತ ಮುಂದೆಯೇ, ಅನುಷ್ಠಿಸಿದ ಸಾಧ್ಯೋಪಾಯಗಳಿಗಿಂತ ಮುಂಚಿತವಾಗಿರುವದರಿಂದ ಇಮಂ - ಈ ಶ್ರಿಯಃಪತಿಯನ್ನು, ಸಿದ್ಧೋಪಾಯನೆಂದು, ವಿದುಃ - ತಿಳಿಯುತ್ತಾರೆ. ಇದರಿಂದ ಸಿದ್ಧೋಪಾಯ ವೆಂಪರೆ ಫಲಪೂರ್ವಭಾವಿಯಾಗಿ ಸಿದ್ಧವಾದ ಉಪಾಯವೆಂಬರ್ಥವಲ್ಲವು. ಎಲ್ಲಾದಕ್ಕೂ ಪೂರ್ವಭಾವಿಯಾಗಿ ಸನಾತನನಾಗಿ ಇರುವವನೇ ಉಪಾಯವೆಂಬರ್ಥವು ಆದುದರಿಂದ ಶ್ರಿಯಃಪತಿಯೇ ವಿನಾ, ಭಕ್ತಿಪ್ರಪತ್ತಿಗಳಲ್ಲವು. ಭಕ್ತಿಪ್ರಪತ್ತಿಗಳು ಅಚೇತನರೂಪಕರ್ಮಗಳು,ಜ್ಞಾನರೂಪವಾದವು ಅವುಗಳೇ ಸ್ವತಂತ್ರಿಸಿ ಪುರುಷಾರ್ಥಗಳನ್ನು ಕೊಡಲಾರವು. ಅವುಗಳ ಪ್ರಯೋಜನವೇನೆಂದರೆ, ನಮ್ಮಗಳ ಸಹಸ್ರಾಪರಾಧಗಳಿಂದ ನಿಗ್ರಹಿಸಬೇಕೆಂದುದ್ಯುಕ್ತನಾದ ಶ್ರೀಮನ್ನಾರಾಯಣನ ಕೋಪವನ್ನು ಶಾಂತಿಗೊಳಿಸಿ, ಆತನ ಅನುಗ್ರಹವನ್ನು ಸಂಪಾದಿಸಿ ಕೊಡುವುವು; ಪುರುಷಾರ್ಥಗಳನ್ನು ಕೊಡುವವನೂ, ಸಾಧ್ಯೋಪಾಯಗಳನ್ನವಲಂಬಿಸುವಹಾಗೆ ಮಾಡುವುವನೂ, ಶ್ರೀ ವಿಶಿಷ್ಟನಾದ ನಾರಾಯಣನೇ. ತಾನೇ ದಯಾನಿಧಿಯಾಗಿದ್ದರೂ, ಅನುಗ್ರಹಮಯಳಾಗಿ, ವಾಲ್ಲಭ್ಯಾತಿಶಯವನ್ನು ಹೊಂದಿದವಳಾಗಿರುವ ಪ್ರಿಯಪತ್ನಿಯ ಸಾನ್ನಿಧ್ಯವೂ ಇರುವುದರಿಂದ, ದಯಾನಿಧಿ ಎಂಬ ಬಿರುದು ತನ್ನ ಪತಿಗೆ ಸಲ್ಲುವ ಹಾಗೆ ಮಾಡುವಳಾದುದರಿಂದ ಶ್ರೀಮತಿ-ಎಂದು ಪ್ರಯೋಗಿಸಿರುತ್ತಾರೆ. ಆದುದರಿಂದ ಲಕ್ಷ್ಮೀ ವಿಶಿಷ್ಟನಾರಾಯಣನೇ ಸನಾತನನಾಗಿ ಪೂರ್ವಸಿದ್ಧನಾದುದರಿಂದ ಸಿದ್ಧೋಪಾಯನು, ಭಕ್ತಿಪ್ರಪತ್ತಿಗಳು ಅಲ್ಲವು ಎಂಬಭಿಪ್ರಾಯವು ಇಲ್ಲಿ ವಿದುಃ - ತಿಳಿದರು ಎಂದು ಹೇಳಿರುತ್ತದೆ, ಯಾರೆಂದು ಹೇಳಲಿಲ್ಲವು, ಸತ್ವಸ್ಥರಾದ ಜ್ಞಾನಿಗಳು ಎಂದು ಇಟ್ಟುಕೊಳ್ಳತಕ್ಕದ್ದು, ಬುಧಾಃ-ಎಂದು ಮುಂದಿನಶ್ಲೋಕದಲ್ಲಿದೆ. ಇದರಲ್ಲಿ ಆಳ್ವಾರಾಚಾರ್ಯರುಗಳೂ ಸೇರಿದರು.

ಮುಂದೆ ಭಕ್ತಿ ಪ್ರಪತ್ತಿಗಳು ಹೇಗೆ ಸಾಧ್ಯೋಪಾಯಗಳೆಂಬುದನ್ನು ತಿಳಿಸುತ್ತಾರೆ. ಭಕ್ತಿ ಪ್ರಪತ್ತಿಗಳಿಗೆ ಪೂರ್ವಸಿದ್ಧತ್ವವಿಲ್ಲದೆ ಪುರುಷನ ಕೃತಿಯಿಂದ ಸಾಧ್ಯವಾದವುಗಳಾದುದರಿಂದ ಸಿದ್ಧೋಪಾಯವಾಗಲಾರದೆಂದೂ ಅವುಗಳು ಸಾಧ್ಯೋಪಾಯಗಳೆನಿಸುವುವೆಂದೂ ಹೇಳುತ್ತಾರೆ.

ಭಕ್ತಿ ಪ್ರಪತ್ತಿ ಪ್ರಮುಖಂ - ಭಕ್ತಿಯೋಗ ಮತ್ತು ಪ್ರಪತ್ತಿ, ಪ್ರಮುಖಂ - ಮೊದಲಾದವನ್ನೂ, ಈ ಪ್ರಮುಖ ಶಬ್ದದಿಂದ ಉಪಾಸನದ ಮತ್ತು

ಪ್ರಪತ್ತಿಯ ಭೇದಗಳು ಹೇಳಲ್ಪಟ್ಟವು **ತದ್ವಶೀಕಾರ ಕಾರಣಮ್** - ಆ ಭಗವಂತನನ್ನು ವಶಮಾಡಿಕೊಳ್ಳಲು ನಿಮಿತ್ತಭೂತವಾದುದು, **ತತ್ಫಲಾರ್ಥಿ ಸಾಧ್ಯತ್ವಾತ್** - ಆಯಾಯಾ ಫಲಗಳನ್ನು ಅಪೇಕ್ಷಿಸುವವರುಗಳ ವ್ಯಾಪಾರವೂಲಕ ಸಾಧಿಸಲು ಯೋಗ್ಯವಾದವುಗಳಾದುದರಿಂದ, **ಬುಧಾಃ** - ಪಂಡಿತರು, **ಸಾಧ್ಯೋಪಾಯಂ ವಿದುಃ** ಸಾಧ್ಯೋಪಾಯವೆಂದು ತಿಳಿದರು, ಇಲ್ಲಿ ಪ್ರಮುಖ ಶಬ್ದದಿಂದ ೩೨ ವಿಧ ಉಪಾಸನಾ ಭೇದಗಳೂ,ಉಕ್ತಿನಿಷ್ಠೆ ಆಚಾರ್ಯ ನಿಷ್ಠೆ ಎಂಬ ಪ್ರಪತ್ತಿಭೇದಗಳೂ ಹೇಳಲ್ಪಟ್ಟವು, ತದ್ವಶೀಕಾರಕಾರಣಂ ಎಂದು ಹೇಳಿರುವದರಿಂದ ಈ ಸಾಧ್ಯೋಪಾಯಗಳೇ ಸ್ವತಃ ಫಲದಾಯಕಗಳಲ್ಲವು ಅವು ಭಗವಂತನನ್ನು ವಶಮಾಡಿಕೊಳ್ಳಲು ಸಹಾಯಭೂತವಾದುವು, ಫಲಪ್ರದನು ಶ್ರೀ ಲಕ್ಷ್ಮೀನಾರಾಯಣನೇ ವಿನಾ ಇವುಗಳಲ್ಲವು ಆದುದರಿಂದ ತದ್ವಶೀಕಾರಕಾರಣಂ ಎಂದು ಹೇಳಲ್ಪಟ್ಟವು. ವಶೀಕಾರ ಪರಂಪರೆಯನ್ನು ಉಪಪಾದಿಸುವ ಸಂದರ್ಭದಲ್ಲಿ ಶ್ರೀ ಭಾಷ್ಯಕಾರರು ತಸ್ಯ ಚ ವಶೀಕರಣಂ ತಚ್ಛರಣಾಗತಿರೇವ ಎಂದು ಹೇಳಿರುವದರಿಂದ ಸಾಧ್ಯೋಪಾಯದ ಪ್ರಯೋಜನವು ಭಗವಂತನನ್ನು ಫಲಪ್ರದೋನ್ಮುಖನಾಗಿ ವಶಮಾಡಿಕೊಳ್ಳಲು ಸಹಕಾರಿಯಾಗಿರೋಣವು ಇವು ನಿಮಿತ್ತ ಭೂತವು, ವ್ಯಾಜರೂಪವಾದುವು. ಹಾಗಾದರೆ ಅವುಗಳ ಆವಶ್ಯಕತೆಯೇನು? ಕೃಪಾಸಾಗರನಾದ ಸಿದ್ಧೋಪಾಯನೇ ಇರುವಾಗ ಇವುಗಳು ನಿರರ್ಥಕವಲ್ಲವೋ ? ಎಂದರೆ, ಅವುಗಳೂ ಭಗವತ್ಕೃಪೋತ್ತಂಭಕಗಳಾಗಿ ಆವಶ್ಯಕವೆಂದು ಹೇಳುವದಕ್ಕಾಗಿಯೂ, ಅವುಗಳು ಬೇಕಾಗಿಲ್ಲವೆಂದು ಹೇಳುವ ವಾದದ ಖಂಡನಕ್ಕಾಗಿಯೂ ತತ್ತತ್ಫಲಾರ್ಥಿ ಸಾಧ್ಯತ್ವಾತ್ ಎಂಬ ಹೇತುವು ಪ್ರಯೋಗಿಸಲ್ಪಟ್ಟಿರುತ್ತದೆ. ಫಲಾಪೇಕ್ಷೆಯುಳ್ಳವರ ಕೃತಿಯಿಂದ ಸಾಧ್ಯವಾದುದರಿಂದ ಸಿದ್ಧೋಪಾಯವಲ್ಲವೆಂದೂ ಹೇಳಲ್ಪಟ್ಟಿತು. ಸಾಧ್ಯೋಪಾಯ ಬೇಡವೆಂದರೆ ಸರ್ವೇಶ್ವರನಿಗೆ ವೈಷಮ್ಯವೂ ಏರ್ಪಟ್ಟಿತು.

ಹೀಗೆ ಹೇಳಿದುದರಿಂದ ಎರಡು ಶಙ್ಕೆಗಳು ಉತ್ಪನ್ನವಾಗುತ್ತವೆ. ಹೇಗೆಂದರೆ:—(೧) ಭಕ್ತಿಪ್ರಪತ್ತಿ ಮೊದಲಾದ ಸಾಧ್ಯೋಪಾಯಗಳೇನೋ ಭಗವಂತನನ್ನು ವಶೀಕಾರಮಾಡಿಕೊಳ್ಳಲು ಸಾಧನಗಳೆಂದು ಹೇಳಲ್ಪಟ್ಟವು. ಆದರೆ ಲೀಲಾವಿಭೂತಿಯೂ ಆತನಿಗೆ ತುಂಬಾ ಇಷ್ಟವಾದುದಾಗಿರುವಾಗ ಭಕ್ತಿಪ್ರಪತ್ತಿಗಳು ಭಗವಂತನ ಲೀಲಾರಸವನ್ನು ಹೇಗೆ ನಿರೋಧಮಾಡೀತು ? (೨) ಸ್ವತಂತ್ರನಾಗಿ ಸತ್ಯಸಙ್ಕಲ್ಪನಾಗಿರುವ ಭಗವಂತನಿಗೆ ಲೀಲಾ ವಿಭೂತಿಯಲ್ಲಿ ಚೇತನರಿರುವದೂ ಇಷ್ಟವಾಗಿರುವಾಗ ಈ ಲೀಲಾವಿಭೂತಿಯ ಶೃಙ್ಖಲವು ಹೇಗೆ ಭಕ್ತಿಪ್ರಪತ್ತಿಗಳಿಂದ ಭಗ್ನವಾಗುತ್ತದೆ ? ಈ ಎರಡು ಶಙ್ಕೆಗಳನ್ನೂ ಮುಂದಿನ ಎರಡು ಕಾರಿಕೆ

ಸಾಧ್ಯೋಪಾಯೋತ್ಥರಂಗೇಣ ಸಿದ್ಧೋಪಾಯಸ್ಯ ಶೇಷಿಣಃ ।
ಲೀಲಾಪ್ರವಾಹಃ ಕಾರುಣ್ಯ ಪ್ರವಾಹೇಣ ನಿರುಧ್ಯತೇ ॥ ೩೯ ॥
ತೇನೈವ ಸರ್ವೇ ಲೀಯಂತೇ ಸಿಕತಾ ಸೇತು ಬಂಧವತ್ ।
ಸ್ವತಂತ್ರಸ್ಯಾಪಿ ಸಙ್ಕಲ್ಪಾ ಸ್ವಕೈಙ್ಕರ್ಯ ನಿರೋಧಕಾಃ ॥ ೪೦ ॥

---

ಗಳಿಂದ ಪರಿಹರಿಸುತ್ತಾರೆ :—

**ಅರ್ಥ**—**ಸಿದ್ಧೋಪಾಯಸ್ಯ ಶೇಷಿಣಃ** - ಶೇಷಿಯಾದ ಸಿದ್ಧೋಪಾಯನಾದ ಭಗವಂತನ, **ಲೀಲಾಪ್ರವಾಹಃ** - ಲೀಲಾಪ್ರವಾಹವು, **ಸಾಧ್ಯೋಪಾಯೋತ್ಥರಂಗೇಣ** - ಭಕ್ತಿಪ್ರಪತ್ತ್ಯಾದಿ ಸಾಧ್ಯೋಪಾಯಾನುಷ್ಠಾನದಿಂದ ಉತ್ಪನ್ನವಾದ ಪ್ರಬಲ ತರಂಗಗಳುಳ್ಳ, **ಕಾರುಣ್ಯ ಪ್ರವಾಹೇಣ** - ಕಾರುಣ್ಯಸಮುದ್ರದ ಪ್ರವಾಹದಿಂದ, **ನಿರುಧ್ಯತೇ** - ತಡೆಯಲ್ಪಡುತ್ತದೆ, ಪೌರ್ಣಮಿಯಲ್ಲಿ ಪೂರ್ಣಚಂದ್ರನಿಂದ ಸಮುದ್ರ ತರಂಗಗಳು ಹೆಚ್ಚಿ ಸಮುದ್ರಪ್ರವಾಹವು ನದೀಪ್ರವಾಹವನ್ನು ಹೇಗೆ ತಡೆಯುತ್ತದೋ, ಹಾಗೆ ಸಾಧ್ಯೋಪಾಯಾನುಷ್ಠಾನದಿಂದ ಉತ್ಪನ್ನಗಳಾದ ತರಂಗಗಳುಳ್ಳ ಭಗವಂತನ ಕರುಣಾಸಮುದ್ರದ ಪ್ರವಾಹವು ಲೀಲಾರಸ ರೂಪ ನದಿಯ ಪ್ರವಾಹವನ್ನು ತಡೆಯುತ್ತದೆ ಎಂಬ ಭಾವವು

ಎರಡನೆಯ ಶಙ್ಕೆಗೆ ಸಮಾಧಾನವನ್ನು ಹೇಳುತ್ತಾರೆ.— **ತೇನೈವ** - ಆ ಕರುಣಾ ಪ್ರವಾಹದಿಂದಲೇನೆ, **ಸ್ವಕೈಙ್ಕರ್ಯ ನಿರೋಧಕಾಃ**, **ಸ್ವ** - ಭಗವಂತನಾದ ತನ್ನ, **ಕೈಂಕರ್ಯ** – ನಿತ್ಯವಿಭೂತಿಯಲ್ಲಿ ಮಾಡತಕ್ಕ ಕೈಙ್ಕರ್ಯಗಳಿಗೆ, **ನಿರೋಧಕಾಃ** - ಪ್ರತಿಬಂಧಕಗಳಾದ, ಎಂದರೆ, ಮೋಕ್ಷವನ್ನು ಹೊಂದುವದಕ್ಕೆ ಅಡ್ಡಿಯಾಗಿರುವ, **ಸ್ವತಂತ್ರಸ್ಯ** - ಯದ್ಯಪಿ ಭಗವಂತನು ಸ್ವತಂತ್ರನಾಗಿದ್ದರೂ, ಅಂತಹ ಸ್ವತಂತ್ರನ, **ಸಙ್ಕಲ್ಪಾಃ ಅಪಿ** – ಸಙ್ಕಲ್ಪಗಳೂ ಕೂಡ, **ಲೀಯಂತೇ**-ನಷ್ಟವಾಗುತ್ತವೆ ಹೇಗೆ ಎಂದರೆ ಒಂದು ದೃಷ್ಟಾಂತವನ್ನು ಕೊಟ್ಟಿರುತ್ತಾರೆ, **ಸಿಕತಾ ಸೇತುಬಂಧವತ್** - ಮರಳಿನಲ್ಲಿ ಕಟ್ಟಿದ ಸೇತುಬಂಧದಹಾಗೆ, ನಷ್ಟವಾಗುತ್ತವೆ. ಇದರಭಿಪ್ರಾಯವು ಇಷ್ಟೇ. ಸರ್ವೇಶ್ವರನು ಉಭಯವಿಭೂತಿನಾಯಕನು. ಇಷ್ಟು ದಿವಸವೂ ಒಬ್ಬ ಚೇತನನನ್ನು ಲೀಲಾವಿಭೂತಿಯಲ್ಲಿರುವ ಹಾಗೆ ಸಙ್ಕಲ್ಪಿಸಿದ್ದನು ಚೇತನನು ಸಾಧ್ಯೋಪಾಯವನ್ನನುಷ್ಠಿಸಿದರೆ ನಿತ್ಯವಿಭೂತಿಗೆ ಸೇರಿಸುವನಾಗಿಯೂ ಸಙ್ಕಲ್ಪಿಸಿದ್ದನು ಅಂತಹ ಭಗವಂತನ ಕರುಣೆಯ ಪ್ರವಾಹವು ಬಲವತ್ತರವಾಗಿ ಆತನು ಸ್ವತಂತ್ರನಾಗಿದ್ದರೂ ತನ್ನ ಹಿಂದಿನ ಸಙ್ಕಲ್ಪವನ್ನು ತ್ಯಜಿಸಿ, ಮೋಕ್ಷಪ್ರಾಪ್ತಿಯಿಂದ ಆತನ ಕೈಙ್ಕರ್ಯ ದೊರೆಯುವಹಾಗೆ ಮಾಡು

**ಪ್ರಸಾದನಸ್ಯೋಪಾಯತ್ವೇ ಶಾಸ್ತ್ರೀಯೇಽಪಿ ಫಲಂ ಪ್ರತಿ ।**
**ಕರ್ತೃತ್ವಾ ವ್ಯವಧಾನಾದ್ಯೈಸ್ಸಿದ್ಧೋಪಾಯ ಪ್ರಧಾನತಾ ॥ ೩೧ ॥**

---

ತ್ತವೆ. ಹೇಗೆಂದರೆ ಒಬ್ಬ ಬಾಲನು ಸಮುದ್ರದ ದಡದಲ್ಲಿ ಒಂದು ಮರಳು ಸೇತುವೆಯನ್ನು ಲೀಲೆಗೋಸ್ಕರ ಕಟ್ಟಿದರೆ, ಸಮುದ್ರವು ಉಕ್ಕಿಬಂದು ಆ ಮರಳು ಸೇತುಬಂಧನ್ನು ಹೇಗೆ ನಾಶಮಾಡುತ್ತದೋ, ಹಾಗೆಯೇ ಈ ಕೃಪಾಸಾಗರನ ಕೃಪಾಪ್ರವಾಹವೇ ಆ ಲೀಲಾರಸಪೂರ್ಣ ಸಙ್ಕಲ್ಪಗಳಿಗೆ ಪ್ರತಿಬಂಧಕವಾಗಿ ಅವುಗಳನ್ನು ಹೋಗಲಾಡಿಸಿ, ಮೋಕ್ಷಪ್ರಾಪ್ತಿಯನ್ನುಂಟುಮಾಡುತ್ತದೆಂಬ ಭಾವವು. ಇದೂ ಲೀಲೆಯೇ ಪಙ್ಕಲ್ಪ ಸೂರ್ಯೋದಯದಲ್ಲಿ "ಮಿಥಃ ಕಲಹ ಕಲ್ಪನಾ ವಿಷಮ ವೃತ್ತಿ ಲೀಲಾದಯಾ" ಎಂಬ ಶ್ಲೋಕದಲ್ಲಿ ಭಗವಂತನ ಲೀಲೆಗೂ ದಯೆಗೂ ಪರಸ್ಪರ ಕಲಹವೆಂದೂ, ಕೊನೆಗೆ ಸ್ವಾಮಿದಯೆಯೇ ಜಯವನ್ನು ಹೊಂದುತ್ತದೆಂದೂ. ವರ್ಣಿಸಿರುತ್ತಾರೆ

ಇನ್ನೊಂದು ಶಙ್ಕೆಯು ತೋರಿಬರುತ್ತದೆ, ಏನೆಂದರೆ-ಭಗವಂತನು ಸಿದ್ಧೋಪಾಯನೆಂದು ಸ್ಥಾಪಿಸಲ್ಪಟ್ಟಿತು, ಆತನು ಭಕ್ತಿ, ಪ್ರಪತ್ತಿರೂಪಸಾಧ್ಯೋಪಾಯಗಳಿಲ್ಲದೆ, ಚೇತನನಿಗೆ ತನ್ನ ಕೃಪಾಪ್ರವಾಹವು ಈ ಲೀಲಾವಿಭೂತಿಯನ್ನು ತಪ್ಪಿಸಿ ನಿತ್ಯವಿಭೂತಿಯನ್ನು ಸೇರಿಸದು ಎಂದೂ ಸ್ಥಾಪಿಸಲ್ಪಟ್ಟಿತು ಹೀಗೆ ಸಾಧ್ಯೋಪಾಯವು ಆವಶ್ಯಕವೆಂದಾದನಂತರ, ಸಾಧ್ಯೋಪಾಯವೇ ಪ್ರಧಾನೋಪಾಯವಾಯಿತು, ಸಿದ್ಧೋಪಾಯನಾದ ಭಗವಂತನು ಸಾಮಾನ್ಯೋಪಾಯನು ಎಂದು ಹೇಳಬೇಕಾಗುತ್ತದೆ, ಎಂದರೆ ಹಾಗಲ್ಲವೆಂದೂ, ಸಿದ್ಧೋಪಾಯಕ್ಕೇ ಪ್ರಧಾನತೆ ಎಂದೂ ಉಪದೇಶಿಸುತ್ತಾರೆ

**ಅರ್ಥ**—**ಫಲಂಪ್ರತಿ** - ಮೋಕ್ಷವೇ ಮೊದಲಾದ ಫಲವನ್ನು ಕುರಿತು, **ಪ್ರಸಾದನಸ್ಯ** - ಭಗವದನುಗ್ರಹವನ್ನುಂಟುಮಾಡುವ ಭಕ್ತಿ ಪ್ರಪತ್ತಿಯ, **ಉಪಾಯತ್ವೇ** - ಉಪಾಯ ಭಾವವು, **ಶಾಸ್ತ್ರೀಯೇಽಪಿ** - ಶಾಸ್ತ್ರದಲ್ಲಿ ಹೇಳಲ್ಪಟ್ಟಿದ್ದರೂ ಕೂಡ, ಎಂದರೆ ಮೋಕ್ಷ ಮೊದಲಾದ ಪುರುಷಾರ್ಥ ಪ್ರಾಪ್ತಿಗೆ, ಭಗವದನುಗ್ರಹವನ್ನು ಸಂಪಾದಿಸಿಕೊಡುವ ಉಪಾಯಗಳು ಭಕ್ತಿಪ್ರಪತ್ತಿಗಳೇದೂ, ಹೀಗೆ ಉಪಾಯಾನುಷ್ಠಾನ ಮಾಡದವರಿಗೆ ಫಲಸಿದ್ಧಿ ಇಲ್ಲವೆಂದೂ ಶಾಸ್ತ್ರದಲ್ಲಿ ವಿಹಿತವಾಗಿದ್ದರೂ, ಸಿದ್ಧೋಪಾಯನಾದ ಭಗವಂತನೇ ಪ್ರಧಾನೋಪಾಯವೆಂದು ಉತ್ತರಾರ್ಧದಿಂದ ಸಕಾರಣವಾಗಿ ಹೇಳುತ್ತಾರೆ. **ಕರ್ತೃತ್ವಾ ವ್ಯವಧಾನಾದ್ಯೈಃ** - ಈ ಚೇತನನು ಸಾಧ್ಯೋಪಾಯವನ್ನನುಷ್ಠಿಸುವ

ಹಾಗೆ ತಾನೇ ಸಙ್ಕಲ್ಪಿಸಿ ಮಾಡುವ ಕರ್ತೃತ್ವದಿಂದಲೂ, ಮತ್ತು ಅವ್ಯವಧಾನ - ಸಾಧ್ಯೋಪಾಯಾನುಷ್ಠಾನ ಹಿಡಿದು ಫಲಪ್ರಾಪ್ತಿಯು ವರೆಗೂ ವ್ಯವಧಾನವಿಲ್ಲದಹಾಗೆ ಕಾರಣನಾಗಿರುವದರಿಂದಲೂ, ಆದ್ಯೈಃ - ಇವೇ ಮೊದಲಾದವುಗಳಿಂದಲೂ, ಇಲ್ಲಿ ಆದಿ ಶಬ್ದದಿಂದ, ಉಪಾಯಾನುಷ್ಠಾನ ಕಾಲದಲ್ಲೂ ಸಹ ನಿರ್ವಿಘ್ನವಾಗಿ ನೆರವೇರುವ ಹಾಗೆ ಮಾಡುವಿಕೆಯೇ ಮೊದಲಾದವು ಹೇಳಲ್ಪಟ್ಟವು, ಈ ಕಾರಣಗಳಿಂದ, ಸಿದ್ಧೋಪಾಯ ಪ್ರಧಾನತಾ - ಸಿದ್ಧೋಪಾಯಕ್ಕೇ ಪ್ರಧಾನತೆಯು, ಎಂದರೆ ಅದರ ಪ್ರಧಾನತೆಯು ಸಿದ್ಧವು ಎಂಬ ತಾತ್ಪರ್ಯವು. ಸಾಧ್ಯೋಪಾಯವೇನೋ ಅವಶ್ಯಕವೆಂದು ಶಾಸ್ತ್ರದಲ್ಲಿ ಹೇಳಿರುವದರಿಂದಲೇ, ಪ್ರಪನ್ನಾದನ್ಯೇಷಾಂ ನದಿಶತಿಮುಕುಂದೋ ನಿಜಪದಂ ಎಂದೂ, ಪ್ರಪನ್ನಶ್ಚ ದ್ವೇಧಾ ಎಂದೂ ಹಿಂದೆ ಅಧಿಕಾರಿವಿಭಾಗಾಧಿಕಾರದಲ್ಲಿ ಹೇಳಿರುತ್ತಾರೆ (ಟಿಪ್ಪಣಿಯ ಪುಟವನ್ನು ನೋಡಿ) ಈ ಸಾಧ್ಯೋಪಾಯಗಳೇ ತಾವೇ ಅಚೇತನವಾದುದರಿಂದ ಫಲವನ್ನು ಕೊಡಲಾರವು. ಶ್ರೀ ಯತಿವರ್ಯರು, "ನಹ್ಯಚೇತನಂ ಕರ್ಮ ಕ್ಷಣಧ್ವಂಸಿ ಕಾಲಾನ್ತರ ಭಾವಿ ಫಲಸಾಧನಂ ಭವಿತುಮರ್ಹತಿ" ಈ ಅಚೇತನ ಕರ್ಮವು ಅಲ್ಪ ಕಾಲದಲ್ಲೇ ನಾಶವಾಗಿ, ಕಾಲಾಂತರದಲ್ಲುಂಟಾಗುವ ಫಲವನ್ನು ತಾನೇ ಸಾಧಿಸಿಕೊಡಲಾರದೆಂದು ಹೇಳಿರುತ್ತಾರೆ. ಇವು ಭಗವಂತನ ಅನುಗ್ರಹವನ್ನುಂಟುಮಾಡುತ್ತವೆ. ಭಗವಂತನು ಫಲ ಕೊಡುತ್ತಾನೆ. ಇಷ್ಟುಮಾತ್ರದಿಂದ ಸಾಧ್ಯೋಪಾಯಕ್ಕೆ ಪ್ರಧಾನತಾ ಸಲ್ಲುವದಿಲ್ಲವು ಅವು ವ್ಯಾಜಮಾತ್ರವು. ಸಿದ್ಧೋಪಾಯನಾದ ಭಗವಂತನೇ ಪ್ರಧಾನೋಪಾಯವು ಈತನು ಜನಿಸುವಾಗಲೇ ಈತನನ್ನು ತನ್ನ ದಿವ್ಯ ಕಟಾಕ್ಷದಿಂದ ಈಕ್ಷಿಸುವದೂ, ಸಾತ್ವಿಕ ಸಂಭಾಷಣೆಯನ್ನುಂಟುಮಾಡುವದೂ, ತನ್ಮೂಲಕವಾಗಿ ಗುರೂಪಸದನವನ್ನುಂಟುಮಾಡುವದೂ, ದಿವ್ಯಜ್ಞಾನಚಕ್ಷುಸ್ಸನ್ನು ಕೊಟ್ಟು ಅವರನ್ನಾಶ್ರಯಿಸಿ ಅವರ ಉಪದೇಶವನ್ನು ಹೊಂದುವ ಹಾಗೆ ಮಾಡುವದೂ, ಅವರ ಮೂಲಕವಾಗಿ ಉಪಾಯಾನುಷ್ಠಾನವನ್ನು ಮಾಡುವ ಹಾಗೆ ಪ್ರೇರಿಸುವದೂ, ಅದು ನಿರ್ವಿಘ್ನವಾಗಿ ನಡೆಯುವ ಹಾಗೆ ಮಾಡುವದೂ, ಅರ್ಚಿರಾದಿ ಮಾರ್ಗವನ್ನು ತೋರಿಸುವದೂ,ಹೀಗೆ ನಾನಾವಿಧವಾದ ಸಾಧ್ಯೋಪಾಯ ವಿಷಯದಲ್ಲಿ ಸಾಧನರೂಪ ಕರ್ತೃತ್ವವು ಭಗವಂತನಿಗೆ ಇರುವದರಿಂದಲೂ ಅದು ಸಾಂಗವಾಗಿ ನಡೆದ ಫಲಪ್ರಾಪ್ತಿಯುವರೆಗೂ ಅವ್ಯವಧಾನದಿಂದ ಸಾಧ್ಯವಾಗುವ ಹಾಗೆ ಮಾಡುವದರಿಂದಲೂ, ಸಿದ್ಧೋಪಾಯನಾದ ಭಗವಂತನೇ ಪ್ರಧಾನೋಪಾಯವು ಎಂಬ ಭಾವವು.

ಭಕ್ತ್ಯುಪಾಯನಿಷ್ಠರಿಗೆ ಸಿದ್ಧೋಪಾಯನ ಆಶ್ರಯಣವು ಪ್ರಧಾನವೆಂದೇನೋ ಒಪ್ಪಬಹುದು. ಭರನ್ಯಾಸ ನಿಷ್ಠರ ವ್ಯಾಪಾರವು ಒಂದು ಕ್ಷಣಕಾಲ

ಸ್ವತಂತ್ರನ್ಯಾಸ ನಿಷ್ಠಾನಾಂ ಸಿದ್ಧೋಪಾಯೇ ವಿಭೌ ಸ್ಥಿತಿಃ ।
ಕ್ಷಣಾತ್ಸ್ವಯತ್ನ ವಿರತಿ ವ್ಯಕ್ತ್ಯೈ ಪ್ರೋಕ್ತಾ ವಿಶೇಷತಃ ॥ ೪೩ ॥
ಅತೋ ಯದರ್ಥಂ ಸ್ವಭರಸ್ಸಿದ್ಧೋಪಾಯೇ ನಿವೇಶಿತಃ ।
ತದರ್ಥಂ ಶಾಂತಯತ್ನೋ ಸೌ ಸಿದ್ಧೋಪಾಯಂ ಪ್ರತೀಕ್ಷತೇ ॥ ೪೪ ॥

---

ಮಾತ್ರ ಅನುಷ್ಠಿಸತಕ್ಕದ್ದು. ಸರ್ವ ಭರವನ್ನೂ ಅವನಲ್ಲಿ ಸಮರ್ಪಿಸಿಬಿಟ್ಟು ಅನಂತರ ಸ್ವಯತ್ನವೇನೂ ಬೇಕಾಗದಿರುವಾಗ, ಸಿದ್ಧೋಪಾಯತ್ವದ ಆವಶ್ಯಕತೇ ಏನಿದೆ? ಆಳ್ವಾರಾಚಾರ್ಯರುಗಳು ಭರನ್ಯಾಸನಿಷ್ಠರಿಗೂ ಭಗವದೇಕನಿಷ್ಠತ್ವವನ್ನು ವಿಶೇಷಿಸಿ ಹೇಳಿರುವದಕ್ಕೆ ಕಾರಣವೇನು ? ಎಂದರೆ ಹೇಳುತ್ತಾರೆ.

ಸ್ವತಂತ್ರ ನ್ಯಾಸನಿಷ್ಠಾನಾಂ - ಭರನ್ಯಾಸನಿಷ್ಠರಿಗೆ, ಇವರಿಗೆ ಸ್ವತಂತ್ರ ನ್ಯಾಸನಿಷ್ಠರೆಂದು ಹೇಳಲು ಕಾರಣವು ಹಿಂದೆಯೇ ಹೇಳಿರುತ್ತದೆ ಭಕ್ತ್ಯುಪಾಯಕ್ಕೆ ನ್ಯಾಸವು ಎಂದರೆ ಶರಣಾಗತಿಯು ಅಙ್ಗವು, ಭರನ್ಯಾಸದಲ್ಲಾದರೋ ಅಙ್ಗತ್ವೇನವಿಲ್ಲದೆ ಸ್ವತಂತ್ರವಾದುದಾಗಿರುತ್ತದೆ, ಆದ್ದರಿಂದ ಸ್ವತಂತ್ರನ್ಯಾಸ ನಿಷ್ಠಾನಾಂ ಎಂದರೆ ಭಕ್ತ್ಯುಪಾಯವಲ್ಲದೆ ಪ್ರಪತ್ತ್ಯುಪಾಯನಿಷ್ಠರಿಗೆ ಎಂಬರ್ಥವು, ಸಿದ್ಧೋಪಾಯೇ - ಸಿದ್ಧೋಪಾಯನಾದ, ವಿಭೌ - ಸ್ವಾಮಿಯಾಗಿ ಸರ್ವಶೇಷಿಯಾದ ಭಗವಂತನಲ್ಲಿ, ಸ್ಥಿತಿಃ - ನಿಷ್ಠೆಯು, ಕ್ಷಣಾತ್ - ಭರನ್ಯಾಸ ಮಾಡಿದ ಒಂದು ಕ್ಷಣ ಮೊದಲುಗೊಂಡು, ಸ್ವಯತ್ನ ವಿರತಿವ್ಯಕ್ತ್ಯೈ - ಪ್ರಪನ್ನನಾದ ತನ್ನ ಯಾವ ಪ್ರಯತ್ನದ ಅನಾವಶ್ಯಕತೆಯನ್ನು ಪ್ರಕಟಿಸುವದಕ್ಕಾಗಿ, ವಿಶೇಷತಃ ಪ್ರೋಕ್ತಾ - ವಿಶೇಷಿಸಿ ಆಳ್ವಾರು ಆಚಾರ್ಯರುಗಳಿಂದ ಹೇಳಲ್ಪಟ್ಟಿತು ಸರ್ವಭರವನ್ನು ಸರ್ವೇಶ್ವರನಲ್ಲಿರಿಸಿ ಅನಂತರ ಪ್ರಪನ್ನನ ಯಾವ ಯತ್ನವು ಬೇಕಾಗಿಲ್ಲದೆ, ಎಲ್ಲವನ್ನೂ ಭಗವಂತನೇ ವಹಿಸುವದರಿಂದಲೂ, ಸಿದ್ಧೋಪಾಯ ನಿಷ್ಠತ್ವವನ್ನು ಪ್ರಪನ್ನನಿಗೂ ಅತ್ಯಾವಶ್ಯಕವೆಂದು ವಿಶೇಷಿಸಿ ಹೇಳಿರುತ್ತಾರೆಂಬ ಭಾವವು.

ಮೇಲಿನ ಶ್ಲೋಕದಲ್ಲಿ ಸ್ವತಂತ್ರ ಪ್ರಪತ್ತಿನಿಷ್ಠನಿಗೆ ಸ್ವಯತ್ನವಿರತಿಯು ಎಂದರೆ ಆತನು ಮಾಡತಕ್ಕ ವ್ಯಾಪಾರವು ಯಾವುದೂ ಇಲ್ಲವೆಂದು ಹೇಳಲ್ಪಟ್ಟಿತು. ಹಾಗಾದರೆ ಭಗವದಾರಾಧನ ಗುರುಶುಶ್ರೂಷಾ ಇವೇ ಮೊದಲಾದ ವ್ಯಾಪಾರಗಳಿಂದಲೂ ನಿತ್ಯನೈಮಿತ್ತಿಕಾನುಷ್ಠಾನಗಳಿಂದಲೂ ಮತ್ತು ಇವರ ಕೈಂಕರ್ಯಾದಿಗಳಿಂದಲೂ ಏಕೆ ವಿರಾಮವನ್ನು ಹೊಂದಕೂಡದು ಎಂದರೆ ಹೇಳುತ್ತಾರೆ—

ಅತಃ - ಪ್ರಪತ್ತಿನಿಷ್ಠನಿಗೂ ಕೂಡ ವಿಶೇಷವಾಗಿ ಭಗವದೇಕನಿಷ್ಠತ್ವವು ಆವಶ್ಯಕ

**ಪ್ರಪತ್ತೇರ್ಲಕ್ಷಣೇ ಮಂತ್ರೇ ವಿಧೌ ವಾಕ್ಯಾಂತರೇಷು ಚ ।**
**ಭಾಷ್ಯಾದೌ ಸಂಪ್ರದಾಯೇ ಚೋಪಾಯತ್ವಂ ಬ್ರಹ್ಮಣಿ ಸ್ಥಿತಂ ॥೩೪॥**

---

ವೆಂದು ಪೂರ್ವಾಚಾರ್ಯರುಗಳು ಹೇಳಿರುವದರಿಂದ, **ಯದರ್ಥಂ** - ಯಾವ ಮೋಕ್ಷ ಪ್ರಾಪ್ತಿಗಾಗಿ, **ಸ್ವಭರಃ** - ತನ್ನ ರಕ್ಷಾಭಾರವು, **ಸಿದ್ಧೋಪಾಯೇ** - ಸಿದ್ಧೋಪಾಯನಾದ ಭಗವಂತನಲ್ಲಿ **ನಿವೇಶಿತಃ** - ಇಡಲ್ಪಟ್ಟಿತೋ, **ತದರ್ಥಂ** - ಅಂತಹ ಮೋಕ್ಷಪ್ರಾಪ್ತಿಗೋಸ್ಕರ, **ಶಾಂತಯತ್ನಃ** - ಅವಶ್ಯಾಗಿ ಮಾಡತಕ್ಕ ಪ್ರಯತ್ನವು ಇನ್ನು ಯಾವುದೂ ಇಲ್ಲದವನಾಗಿ, **ಅಸೌ** - ಈ ಮೋಕ್ಷಾರ್ಥಿಯಾದ ಪ್ರಪನ್ನನು **ಸಿದ್ಧೋಪಾಯಂ ಪ್ರತೀಕ್ಷತೇ** - ಸಿದ್ಧೋಪಾಯನಾದ ಭಗವಂತನನ್ನು ನಿರೀಕ್ಷಿಸುತ್ತಾನೆ, ಎಂದರೆ, ಆತನು ರಕ್ಷಿಸುವ ಸಮಯವನ್ನು ನಿರೀಕ್ಷಿಸುತ್ತಿರುವನ. ಇದರಿಂದ ಆತನು ಆಜ್ಞಾನುಜ್ಞಾ ಕೈಂಕರ್ಯಗಳನ್ನು ಮಾಡುವ ಅನುಕೂಲ ಪ್ರಯತ್ನದಿಂದಲೂ ಪರಾಙ್ಮುಖನಾಗಿರಬಹುದೆಂದು ಹೇಳಲಿಲ್ಲವು ಸರ್ವೇಶ್ವರನಿಂದ ರಕ್ಷಣೆಯನ್ನು ಎದುರುನೋಡುತ್ತಿರುವವನು ಆತನ ಆಜ್ಞಾನುಜ್ಞಾಕೈಂಕರ್ಯಗಳನ್ನು ತ್ಯಜಿಸಿ ಆತನ ಕೋಪಕ್ಕೆ ಪಾತ್ರನಾಗಬಹುದೋ? ಅದು ತನ್ನ ಸ್ವರೂಪಕ್ಕೆ ವಿರುದ್ಧವಾದುದೆಂಬ ಭಾವವು

ಆಗಲಿ ಭಗವಂತನಿಗೆ ಪ್ರಧಾನೋಪಾಯತ್ವವಿದ್ದುದಾದರೆ, ಪ್ರಪನ್ನನು ಭಗವದೇಕನಿಷ್ಠನಾಗಿದ್ದುಕೊಂಡು, ಮೋಕ್ಷಪ್ರಾಪ್ತಿಯನ್ನು ನಿರೀಕ್ಷಿಸಿಕೊಂಡೇನೋ ಇರತಕ್ಕದ್ದು ನ್ಯಾಯವು ಹಾಗೆ ಭಗವಂತನು ಪ್ರಧಾನೋಪಾಯನೆಂಬುದಕ್ಕೆ ಏನಾದರೂ ಪ್ರಮಾಣಗಳುಂಟೋ? ಎಂದರೆ ಉಂಟೆಂದು ತಿಳಿಸುತ್ತಾರೆ—ಎಲ್ಲೆಲ್ಲಿ ಭಗವಂತನು ಸಿದ್ಧೋಪಾಯನೆಂದು ಹೇಳಲ್ಪಟ್ಟಿದೆ ಎಂದರೆ- ಈ ಶ್ಲೋಕದಲ್ಲಿ **ಪ್ರಪತ್ತೇಃ**-ಎಂಬ ಪದವು, ಲಕ್ಷಣೇ, ಮಂತ್ರೇ, ವಿಧೌ **ವಾಕ್ಯಾಂತರೇಷು ಚ** ಎಂಬುದಕ್ಕೆಲ್ಲಾ ಅನ್ವಯಿಸುತ್ತದೆ **ಪ್ರಪತ್ತೇರ್ಲಕ್ಷಣೇ**-ಪ್ರಪತ್ತಿಯ ಲಕ್ಷಣ ವಾಕ್ಯದಲ್ಲಿ ಹೇಳಲ್ಪಟ್ಟಿರುತ್ತದೆ, ಇದು ಯಾವುದೆಂದರೆ "**ಅನನ್ಯಸಾಧ್ಯೇ ಸ್ವಾಭೀಷ್ಟೇ ಮಹಾವಿಶ್ವಾಸ ಪೂರ್ವಕಂ । ತದೇಕೋಪಾಯತಾ ಯಾಚ್ಞಾ ಪ್ರಪತ್ತಿಶ್ಶರಣಾಗತಿಃ**" ಎಂಬ ಭರತ ಮುನಿಯ ವಾಕ್ಯವು ಇದರರ್ಥಕ್ಕೆ ೧೦೫ನೆಯ ಪುಟ ನೋಡಿ. (೨) **ಪ್ರಪತ್ತೇಃ ಮಂತ್ರೇ** - ದ್ವಯಮಂತ್ರದಲ್ಲೂ, ಈ ಮಂತ್ರದ ಪೂರ್ವಖಂಡವು ಉಪಾಯವನ್ನು ಬೋಧಿಸುತ್ತದೆ ಅದರಲ್ಲಿರುವ ಶರಣ ಶಬ್ದವು ಉಪಾಯವನ್ನೇ ಬೋಧಿಸುತ್ತದೆಂದು ಹಿಂದೆಯೇ ಶ್ರೀ ದೇಶಿಕರವರು ಸ್ಥಾಪಿಸಿರುತ್ತಾರೆ ೧೦೩-೬ನೆಯ ಪುಟಗಳನ್ನು ನೋಡಿ (೩) **ಪ್ರಪತ್ತೇರ್ವಿಧೌ** - ಪ್ರಪತ್ತಿ

ವಿಧಿಸುವ ವಾಕ್ಯವಾದ ಚರಮ ಶ್ಲೋಕದಲ್ಲೂ, "ಮಾಮೇಕಂ ಶರಣಂ ವ್ರಜ" ಎಂಬ ವಾಕ್ಯದಲ್ಲಿ, ಶರಣ ಶಬ್ದವು ಉಪಾಯವನ್ನು ಬೋಧಿಸುತ್ತದೆ. "ಏಕಂ" ಎಂಬುದರಿಂದ ಪ್ರಾಧಾನ್ಯವೂ ತೋರಿಬರುತ್ತದೆ. (೪) **ಪ್ರಪತ್ತೇಃ ವಾಕ್ಯಾಂತರೇಷು ಚ** - ಪ್ರಪತ್ತಿಯನ್ನು ಬೋಧಿಸುವ ಇತರ ವಾಕ್ಯಗಳಲ್ಲೂ, ಇವುಗಳು ಯಾವುವೆಂದರೆ **ಸರ್ವಸ್ಯ ಶರಣಂ ಸುಹೃತ್," "ಶರಣ್ಯಂ ಶರಣಂ ಚ ತ್ವಾಮಾಹುರ್ದಿವ್ಯಾ ಮಹರ್ಷಯಃ" "ತಂಗಚ್ಛ ಶರಣಂಹರಿಂ", "ಶರಣಂ ತ್ವಾಂ ಪ್ರಪನ್ನಾಯೇಧ್ಯಾನಯೋಗ ವಿವರ್ಜಿತಾಃ । ತೇಪಿ ಮೃತ್ಯುಮತಿಕ್ರಮ್ಯ ಯಾನ್ತಿ ತದ್ವೈಷ್ಣವಂ ಪದಂ", "ಗಚ್ಛಧ್ವಮೇನಂ ಶರಣಂ" "ಕೃಷ್ಣಂ ಧರ್ಮಂ ಸನಾತನಂ"** ಇತ್ಯಾದ್ಯನೇಕ ವಾಕ್ಯಗಳಲ್ಲೂ ಸಿದ್ಧೋಪಾಯನೆಂಬುದು ತೋರಿಬರುತ್ತದೆ, (೫) **ಭಾಷ್ಯಾದೌ** - ಭಾಷ್ಯದಲ್ಲೂ ಉಪಪಾದಿಸಲ್ಪಟ್ಟಿರುತ್ತದೆ:— **"ಪ್ರಾಪ್ಯಸ್ಯ ಪರಮಪುರುಷಸ್ಯ ಸ್ವಪ್ರಾಪ್ತೌ ಸ್ವಸ್ಯೈವೋಪಾಯತ್ವೋಪಪತ್ತೇಃ, "ನಾಯಮಾತ್ಮಾ ಪ್ರವಚನೇನ ಲಭ್ಯೋ ನ ಮೇಧಯಾ ನಬಹುನಾಶ್ರುತೇನ । ಯಮೇವೈಷ ವೃಣುತೇ ತೇನ ಲಭ್ಯಸ್ತಸ್ಯೈಷ ಆತ್ಮಾ ವಿವೃಣುತೇ ತನೂಂ ಸ್ವಾಂ",** ಎಂದು ೩ ೨-೩೪ನೇ ಸೂತ್ರವಾದ **"ಉಪಪತ್ತೇಃ"** ಎಂಬುದರ ವ್ಯಾಖ್ಯಾನದಲ್ಲಿ ಹೇಳಲ್ಪಟ್ಟಿರುತ್ತದೆ. ಪ್ರಾಪ್ಯನಾದ ಪರಮಪುರುಷನಿಗೇನೇ ತನ್ನ ಪ್ರಾಪ್ತಿಯ ವಿಷಯದಲ್ಲಿ ಉಪಾಯತ್ವ ಉಂಟೆಂದು ನಾಯಮಾತ್ಮಾ ಎಂಬ ಕಠಶ್ರುತಿ ವಾಕ್ಯದಿಂದ (೧ ೨ ೨೩. ಮುಂ. ೩ ೨. ೩) ತೋರಿಬರುತ್ತದೆಂದು ಹೇಳಲ್ಪಟ್ಟಿರುತ್ತದೆ. ಈ ಶ್ರುತ್ಯರ್ಥವೇನೆಂದರೆ— "ಈ ಪರಮಾತ್ಮನು ಮನನ ನಿಧಿಧ್ಯಾಸನ ಶ್ರವಣಾದಿಗಳಿಂದ ಮಾತ್ರವೇ ಲಭ್ಯನಲ್ಲವು. ಈ ಪರಮಾತ್ಮನ ಇಂತಹ ಉಪಾಸಕರಲ್ಲಿ ಯಾವನನ್ನು ಯೋಗ್ಯನೆಂದು ಭಾವಿಸಿ ವರಿಸುವನೋ, ಅಂತವನಿಗೆ ಮಾತ್ರವೇ ಲಭ್ಯನು, ಅಂತಹ ಉಪಾಸಕನು ಈತನಲ್ಲಿ ನಿರತಿಶಯ ಭಕ್ತಿಯುಳ್ಳವನಾದುದರಿಂದ, ಆತನಲ್ಲಿ ಪರಮಾತ್ಮನಿಗೆ ಅನುಗ್ರಹ ಉಂಟಾಗಿ ಆತನಿಗೆ ಸ್ವಾನುಭವವನ್ನು ದಯಪಾಲಿಸುವನು." ಎಂಬರ್ಥವು. ಇದರಿಂದ ಮುಂಡಕ ಕಠಶ್ರುತಿಗಳು ಭಗವಂತನೇ ಸಿದ್ಧೋಪಾಯನೆಂದೂ ಇನ್ನು ಯಾರೂ ಸಿದ್ಧೋಪಾಯವಾಗಲಾರರೆಂದೂ ಹೇಳುತ್ತವೆಂಬುದು ವ್ಯಕ್ತವು. ಈ ಶ್ಲೋಕದಲ್ಲಿ **ಭಾಷ್ಯಾದೌ** ಎಂದು ಆದಿ ಶಬ್ದವನ್ನುಪಯೋಗಿಸಿರುವದರಿಂದ **"ತ್ವತ್ಪಾದಾರವಿಂದ ಯುಗಳಂ ಶರಣ ಮಹಂ ಪ್ರಪದ್ಯೇ"** ಎಂಬ ಶರಣಾಗತ್ಯನುಷ್ಠಾನವನ್ನು ಪ್ರಕಾಶಿಸುವ ಶ್ರೀ ಭಾಷ್ಯಕಾರರ ಶರಣಾಗತಿಗದ್ಯವಾಕ್ಯವೂ ಸೂಚಿತವು (೬) **ಸಂಪ್ರದಾಯೇ ಚ** - ಆಳ್ವಾರಾಚಾರ್ಯರುಗಳ ಸಂಪ್ರದಾಯ ಪರಂಪರಾ ಬೋಧಕವಾದ ದಿವ್ಯಸೂಕ್ತಿಗಳಿಂದಲೂ, **ಅಗಿಲಿಗಿಲ್ಲೇಲ** ಇತ್ಯಾದಿ

ಪೂರ್ವಸಿದ್ಧಸ್ಯ ದೇಶಾದೇರ್ಧರ್ಮತ್ವಂ ಯದ್ಯದಿಷ್ಯತೇ ।
ಏವಂ ತತ್ತ್ವವಿದಃ ಪ್ರಾಹುಃ ಕೃಷ್ಣಂ ಧರ್ಮಂ ಸನಾತನಂ । ೩೫ ॥

---

ನಮ್ಮಾಳ್ವಾರ್ ಪಾಶುರದಲ್ಲೂ ವ.ತ್ತು "ಉಪಾಯೋಪೇಯತ್ವೇ ತದಿಹ ತವ ತತ್ತ್ವಂ ನತುಗುಣೌ" ಎಂಬ ಶ್ರೀಪರಾಶರಭಟ್ಟರ ದಿವ್ಯಸೂಕ್ತಿಯಲ್ಲೂ (೨೪೭ ನೆಯ ಪುಟನೋಡಿ) "ತವ ಭರೋಹ ಮಕಾರಿಷಿ ಧಾರ್ಮಿಕೈ ಶರಣ ಮಿತ್ಯಪಿ ವಾಚಮುದೈರಿರಂ" (ಅಧಿಕಾರಿ ವಿಭಾಗಾಧಿಕಾರದ ೮೯ ನೆಯ ಪುಟ ನೋಡಿ) ಬ್ರಹ್ಮಣಿ - ಪರಬ್ರಹ್ಮನಲ್ಲಿ, ಶ್ರೀಮನ್ನಾರಾಯಣನಾದ ಪರತತ್ತ್ವದಲ್ಲಿ, ಉಪಾಯತ್ವಂ ಸ್ಥಿತಂ ಸಿದ್ಧೋಪಾಯತ್ವವು ಸ್ಥಾಪಿತವಾದುದು. ಇಲ್ಲಿ ಬ್ರಹ್ಮಣಿ ಎಂದು ಬ್ರಹ್ಮಶಬ್ದವನ್ನು ಪ್ರಯೋಗಿಸಿರುವದರಿಂದ ಕಲ್ಯಾಣಗುಣಾಕರತ್ವ ಮೊದಲಾದ ಸರ್ವೋತ್ಕರ್ಷವನ್ನು ಹೊಂದಿರುವ ಪರಬ್ರಹ್ಮವೇ ಉಪಾಯವೇ ವಿನಾ ಇತರ ಚೇತನಾಚೇತನದಲ್ಲಿ ಉಪಾಯತ್ವವನ್ನಾರೋಪಿಸುವದು ನಿಂದಾವಹವಾದ ಅಪಚಾರಪ್ರಾಪ್ತಿಗೆ ಹೇತುವೆಂದು ಹೇಳಿದಂತಾಯಿತು. ಆ ಸಿದ್ಧೋಪಾಯನಾದ ಪರಬ್ರಹ್ಮವು ಯಾವುದೆಂದರೆ ಶ್ರೀ ಭಾಷ್ಯಕಾರರು ಬ್ರಹ್ಮಣಿ ಶ್ರೀನಿವಾಸೇ (ಶ್ರೀ ಭಾಷ್ಯಮಙ್ಗಳ ಶ್ಲೋಕವು) ಎಂಬುದರಿಂದ ಶ್ರೀಮನ್ನಾರಾಯಣನೆಂದುಪದೇಶಿಸಿದರು.

ಇದರಮೇಲೆ ಒಂದು ಪ್ರಬಲವಾದ ಪೂರ್ವಪಕ್ಷ ಉಂಟಾಗಬಹುದು, ಹೇಗೆಂದರೆ—ಧರ್ಮಕ್ಕೇನೇ ಈ ಪಾರಲೌಕಿಕ ಫಲವನ್ನು ಕುರಿತು ಉಪಾಯತ್ವವು ಸಲ್ಲುತ್ತದೆ. "ಚೋದನಾ ಲಕ್ಷಣಾರ್ಥೋ ಧರ್ಮಃ" ಎಂದು ಹೇಳಿರುವ ಪ್ರಕಾರ ಧರ್ಮ ಶಬ್ದವು ಶ್ರುತಿಯಲ್ಲಿ ಹೀಗೆ ಮಾಡು ಎಂದು ವಿಧಿಸಿರುವ ಲಕ್ಷಣವುಳ್ಳ ಅರ್ಥವುಳ್ಳದ್ದು. ಈ ಧರ್ಮವು ಕೃತಿಸಾಧ್ಯವಾದುದು. ಇದಕ್ಕೆ ಉಪಾಯತ್ವವು ಕೂಡುತ್ತದೇ ವಿನಾ, ಸಿದ್ಧರೂಪನಾದ ಭಗವಂತನಿಗೆ ಕೃತಿಸಾಧ್ಯತ್ವವು ಸಲ್ಲುವದಿಲ್ಲವಾದುದರಿಂದ, ಭಗವಂತನನ್ನು ಸಿದ್ಧೋಪಾಯನೆಂದು ಹೇಳುವದು ಕೇವಲ ಔಪಚಾರಿಕವು ಎಂಬುದು ಪೂರ್ವಪಕ್ಷವು. ಪೂರ್ವಮೀಮಾಂಸಕರು ಧರ್ಮವೇ ಫಲವನ್ನು ಕೊಡುತ್ತದೆಂದು ಹೇಳುವರು; ಧರ್ಮಾನುಷ್ಠಾನದಿಂದ ಅಪೂರ್ವವೆಂಬುದುತ್ಪನ್ನವಾಗಿ ಇದ್ದುಕೊಂಡು, ಕೊನೆಗೆ ಫಲವನ್ನು ಕೊಡುತ್ತದೆಂದು ಹೇಳುವರು. ಆ ಅಭಿಪ್ರಾಯವನ್ನು ಖಂಡಿಸುತ್ತಾರೆ. ಇದಕ್ಕೆ ಸಮಾಧಾನ ಹೇಗೆಂದರೆ—ಪಾರಲೌಕಿಕ ಶ್ರೇಯಸ್ಸಿನ ಸಾಧನತ್ವವೇ ಧರ್ಮತ್ವವಾದುದರಿಂದ, "ದ್ರವ್ಯಕ್ರಿಯಾ ಗುಣಾದೀನಾಂ ಧರ್ಮತ್ವಂ ಸ್ಥಾಪಯಿಷ್ಯತೇ" ಎಂಬ

ಅಸ್ಯ ಸಿದ್ಧೋಪಾಯಸ್ಯ ರಹಸ್ಯತ್ರಯವಿತ್ ಶ್ರೀಭಟ್ಟಪಾದಾಃ ಸ್ವಾಸ ಜ್ಞಕಿರೀ ಅನುಸಂಧೇಯಮ್.

---

ಶ್ರೀ ಭಟ್ಟಾಚಾರ್ಯರವರ ದಿವ್ಯ ಸೂಕ್ತಿಗೆ ಅನುಸಾರವಾಗಿ, ದ್ರವ್ಯಕ್ರಿಯಾಗುಣಗಳಿಗೆ ಹೇಗೆ ಧರ್ಮತ್ವವುಂಟೋ ಹಾಗೆಯೇ ಸಿದ್ಧಸ್ವರೂಪನಾದ ಭಗವಂತನಿಗೆ ಧರ್ಮತ್ವವೂ ಮುಖ್ಯವೇ, ಆದುದರಿಂದ ಉಪಾಯತ್ವವು ಔಪಚಾರಿಕವಲ್ಲವೆಂದು ತಿಳಿಸುತ್ತಾರೆ. "ಸಮೇ ಯಜೇತ" ಸಮಪ್ರದೇಶದಲ್ಲಿ ಯಜ್ಞಮಾಡತಕ್ಕದ್ದು, "ಸಾಯಂ ಜುಹೋತಿ" "ಸಾಯಂಕಾಲದಲ್ಲಿ ಹೋಮ ಮಾಡುತ್ತಾನೆ" ಇತ್ಯಾದಿ ವಾಕ್ಯಗಳಿಂದ ಪೂರ್ವಸಿದ್ಧವಾದ ದೇಶಕಾಲ ಗುಣಾದಿಗಳಿಗೆ ಧರ್ಮತ್ವವು ಹೇಗೆ ಏರ್ಪಟ್ಟಿತೋ, ಹಾಗೆ ಅನಾದಿಸಿದ್ಧನಾದ ಶ್ರೀ ಕೃಷ್ಣನಿಗೆ ಧರ್ಮತ್ವವೂ, ತನ್ಮೂಲಕ ಸಿದ್ಧೋಪಾಯತ್ವವೂ ಸ್ಥಾಪಿತವಾದುದೆಂದು ತಿಳಿಸುತ್ತಾರೆ. ಪೂರ್ವಸಿದ್ಧಸ್ಯ- ಯಜ್ಞವೆಂಬ ಕೃತಿಗೆ ಮೊದಲೇ ಸಿದ್ಧವಾಗಿ ಕೃತಿ ಸಾಧ್ಯವಲ್ಲದ, ದೇಶಾದೇಃ- ದೇಶ ಕಾಲಗುಣ ಮೊದಲಾದವುಗಳಿಗೆ, ಯದ್ವತ್ - ಹೇಗೆ, ಧರ್ಮತ್ವಂ - ಕೇವಲ ಅಲೌಕಿಕ ಶ್ರೇಯಸ್ಸಾಧನರೂಪವಾದ ಮತ್ತು ಕೃತಿ ಸಾಧ್ಯವಲ್ಲದ ಧರ್ಮತ್ವವು, ಇಷ್ಯತೇ - ಅಪೇಕ್ಷಿಸಲ್ಪಟ್ಟಿರುತ್ತದೆಯೋ, ಏವಂ-ಮೇಲೆ ಹೇಳಿದ ರೀತಿಯಲ್ಲಿ ಎಂದರೆ, ಅಲೌಕಿಕವಾದ ಇಷ್ಟಸಾಧನರೂಪಧರ್ಮಲಕ್ಷಣವು ಇರುವದರಿಂದ, ತತ್ತ್ವವಿದಃ - ಕರ್ಮಮೀಮಾಂಸಕರಿಗೆ ವ್ಯತಿರಿಕ್ತರಾಗಿ, "ಅಥಾತೋ ಧರ್ಮಜಿಜ್ಞಾಸಾ" ಎಂಬ ಸೂತ್ರ ಮೊದಲುಗೊಂಡು "ನ ಚ ಪುನರಾವರ್ತತೇ ನ ಚ ಪುನರಾವರ್ತತೇ" ಎಂಬ ಬ್ರಹ್ಮಸೂತ್ರಾಂತ್ಯದವರೆಗೂ ಒಂದೇ ಶಾಸ್ತ್ರವೆಂದು ಭಾವಿಸಿರುವ ತತ್ತ್ವವನ್ನು ಯಥಾರ್ಥವಾಗಿ ತಿಳಿದವರು, ಸನಾತನಂ - ಅನಾದಿ ಸಿದ್ಧನಾದ, ಕೃಷ್ಣಂ-ಶ್ರೀ ಕೃಷ್ಣನನ್ನು, ಧರ್ಮಂ - ಅಲೌಕಿಕ ಇಷ್ಟಸಾಧನರೂಪ ಧರ್ಮವನ್ನಾಗಿ, ವಿದುಃ-ತಿಳಿಯುತ್ತಾರೆ. ಆದುದರಿಂದ ಇಷ್ಟಾಪೂರ್ತಾದಿಯು ಸಾಧ್ಯಧರ್ಮವು, ಸಾಧ್ಯೋಪಾಯವಲ್ಲವು. (ಇದು ಪೂರ್ವಮೀಮಾಂಸೆಯಲ್ಲಿ ಚರ್ಚಿಸಲ್ಪಟ್ಟಿತು. ಉತ್ತರ ಮೀಮಾಂಸೆಯಲ್ಲಿ ಶ್ರೀ ಕೃಷ್ಣನಾದ ಪರಬ್ರಹ್ಮವು ಸಾಧ್ಯೋಪಾಯಗಳಿಂದ ವಶೀಕೃತನಾದ ಸಿದ್ಧರೂಪಧರ್ಮವು ಎಂದು ಸ್ಥಾಪಿಸಲ್ಪಟ್ಟಿತು. ಹೀಗೆ ಸಿದ್ಧೋಪಾಯನಾದ ಶ್ರೀಯಃಪತಿಯು ಸಾಧ್ಯೋಪಾಯಗಳಿಂದ ವಶೀಕೃತನಾಗಿ ಪರಮ ಶ್ರೇಯಸ್ಸಾದ ಮೋಕ್ಷಫಲವನ್ನೀಯುವನೆಂದು ಸ್ಥಾಪಿತವಾಯಿತು. "ಕೃಷ್ಣಂ ಧರ್ಮಂ ಸನಾತನಂ" ಎಂಬ ಪ್ರಮಾಣಕ್ಕೆ ೨೦೪ನೆಯ ಪುಟವನ್ನು ನೋಡಿ. ಈಗ ಸ್ಥಾಪಿಸಿದಭಿಪ್ರಾಯವು ಇಷ್ಟೇ. ಧರ್ಮಶಬ್ದಕ್ಕೆ ಲಕ್ಷಣವು ಅಲೌಕಿಕ ಶ್ರೇಯಸ್ಸಾಧನತ್ವವು-

ಮನ್ನು ಮನ್ನೈತ್ತು ರವಾಯ್ ಮರುಳ್ ಮಾತ್ತು ರುಳಾಳಿಯುಮಾಯ್ ।
ತನ್ನಿನೈ ವಾಲನ್ನೈತ್ತುನ್ ತರಿತ್ತೋಙ್ಗುನ್ ತನಿಯಿರೈಯಾಯ್ ।
ಇನ್ನಮುತತ್ತಮುದಾಲಿರುಙ್ಗುಮ್ ತಿರುನಾರಣನೇ
ಮನ್ನಿಯವಣ್ ಶರಣ್ ಮತ್ತೋರ್ ಪತ್ತಿನ್ರಿವರಿಪ್ಪವರ್ಕ್ಕೇ ॥ ೩೦ ॥

---

ಭಗವಂತನಿಗೇನೇ ಇದು ಮುಖ್ಯವಾಗಿರುವದರಿಂದ, ಅತನೇ ಸಿದ್ಧೋಪಾಯನಾಗಿ ಮುಖ್ಯೋಪಾಯುವೆಂಬ ಭಾವವು. ಆದುದರಿಂದಲೇ "ಕೃಷ್ಣಂ ಧರ್ಮಂ ಸನಾತನಂ" ಎಂಬ ಪ್ರಯೋಗವು.

ಮುಂದೆ ಈ ಸಿದ್ಧೋಪಾಯತ್ವವು ರಹಸ್ಯತ್ರಯದಲ್ಲಿ ಎಲ್ಲಿ ತೋರಿಬರುತ್ತ ದೆಂಬುದನ್ನು ತಿಳಿಸುತ್ತಾರೆ. ಇಸ್ಸಿದ್ಧೋಪಾಯಂ-ಶ್ರಿಯಃಪತಿಯ ಸಿದ್ಧೋಪಾಯ ನೆಂಬುದು ರಹಸ್ಯತ್ರಯದಲ್ಲೂ, ಪ್ರಥಮಾಕ್ಷರಾದಿ ಸ್ಥಾನಙ್ಗಳಿಲೇ-ಮೂಲ ಮಂತ್ರದ ಅಕಾರದಲ್ಲೂ, ಆದಿಪದದಿಂದ, ಮೂಲಮಂತ್ರದ್ವಯಗಳ ನಾರಾಯಣ ಶಬ್ದದಲ್ಲೂ ಮತ್ತು ಚರಮಶ್ಲೋಕದ ಅಸ್ಮಚ್ಛಬ್ದಗಳಲ್ಲೂ, ಅನುಸಂಧೇಯವು.

ಅವತಾರಿಕೆ—ಈ ಅಧಿಕಾರದಲ್ಲಿ ಸ್ಥಾಪಿಸಲ್ಪಟ್ಟ ಅಭಿಪ್ರಾಯವು, ಶ್ರೀ ವಿಶಿಷ್ಟನಾದ ನಾರಾಯಣನೇ ಸಿದ್ಧೋಪಾಯನೆಂಬುದು, ಇದನ್ನೇ ಈ ಪಾಶುರ ದಲ್ಲಿ ಸಿದ್ಧಾಂತರೂಪದಲ್ಲಿ ಸ್ಥಾಪಿಸಿ ಅಧಿಕಾರ ಸಮಾಪ್ತಿಯನ್ನು ಮಾಡುತ್ತಾರೆ

ಅರ್ಥ—ಮನ್ನುಮ್-ದೃಢನಾದ, ಅನ್ನೈತ್ತುರುವಾಯ್-ಸರ್ವವಿಧ ಬಂಧು ವಾಗಿ, ಮರುಳ್ ಮಾತ್ತು - ಅಜ್ಞಾನನಾಶಕವಾದ, ಅರುಳಾಳಿಯುಮಾಯ್- ಕೃಪಾಸಮುದ್ರವಾಗಿ, ತನ್ನಿನೈವಾಲ್ - ತನ್ನ ಸಙ್ಕಲ್ಪದಿಂದ, ಅನೈತ್ತುಮ್- ಸಮಸ್ತ ಚಿದಚಿತ್ತುಗಳನ್ನೂ, ತರಿತ್ತು - ಧರಿಸಿ, ಓಙ್ಗುಮ್ - ಆಧಿಕ್ಯವನ್ನು ಹೊಂದಿರುವ ತನಿ - ಅದ್ವಿತೀಯನಾದ, ಇರೈಯನಾಯ್-ಸ್ವಾಮಿಯಾಗಿ, ಎಂದರೆ ನಿರತಿಶಯನಾಗಿ, ನಿಸ್ಸಮಾಭ್ಯಧಿಕನಾದ, ಇನ್ - ಭೋಗ್ಯವಾದ, ಅಮು ದತ್ತು - ಅಮೃತದಲ್ಲಿ ಹುಟ್ಟಿದ, ಕ್ಷೀರಾಬ್ಧಿಯಲ್ಲಿ ಹುಟ್ಟಿದ, ಅಮುದಾಲ್-ಲಕ್ಷ್ಮಿ ಯ ಮೂಲಕವಾಗಿ, ಇರಙ್ಗುಮ್ - ದಯೆಯನ್ನು ತೋರಿಸುವ, ತಿರುನಾರಣ ನೇ - ಲಕ್ಷ್ಮೀವಿಶಿಷ್ಟನಾರಾಯಣನೇ, ಮತ್ತೋರ್ ಪತ್ತಿನ್ರಿ - ಬೇರೆ ಇನ್ನು ಯಾವ ಅವಲಂಬನವೂ ಇಲ್ಲದ, ಭಕ್ತಿಯೋಗಾದಿಗಳವಲಂಬನವಿಲ್ಲದೆ ಅಕಿಂಚನ ರಾದ, ವರಿಪ್ಪವರ್ಕ್ಕು - ಆಶ್ರಯಿಸಿದವರಿಗೆ ಎಂದರೆ ಶರಣಾಗತಿಯನ್ನು ಮಾಡಿದ ವರಿಗೆ, ಮನ್ನಿಯ - ಪೂರ್ವಸಿದ್ಧವಾದ, ವಣ್ ಶರಣ್ - ಸುದೃಢವಾದ ಉಪಾ ಯನು ಎಂದರೆ ನಮಗೆ ಸಿದ್ಧೋಪಾಯನೆಂಬರ್ಥವು.

ತಾತ್ಪರ್ಯ—ಸರ್ವೇಶ್ವರನು ನಮಗೆ ಸರ್ವವಿಧಬಂಧುವು, "ಮಾತಾ ಪಿತಾ ಭ್ರಾತಾ ನಿವಾಸ ಶ್ಶರಣಂಸುಹೃದ್ಗತಿರ್ನಾರಾಯಣಃ" ಎಂಬ ಶ್ರುತಿಯು ಈ ಅಭಿಪ್ರಾಯಕ್ಕೆ ಪ್ರಮಾಣವು. ಈ ಶ್ರುತಿಯೇ ಅನೇಕ ಕಡೆಯಲ್ಲಿ ಉಪಪಾದಿತವಾಗಿರುತ್ತದೆ. "ಪಿತಾತ್ವಂ ಮಾತಾತ್ವಂ ದಯಿತ ತನಯಸ್ತ್ವಂ ಪ್ರಿಯಸುಹೃತ್ತ್ವಮೇವತ್ವಂ ಮಿತ್ರಂ ಗುರುರಸಿಗತಿಶ್ಚಾಸಿ ಜಗತಾಂ" ಎಂದು ಶ್ರೀಯಾಮುನೇಯರೂ, "ತ್ವಮೇವ ಮಾತಾಚ ಪಿತಾತ್ವಮೇವ ತ್ವಮೇವಬಂಧುಶ್ಚ ಗುರುಸ್ತ್ವಮೇವ। ತ್ವಮೇವ ವಿದ್ಯಾದ್ರವಿಣಂ ತ್ವಮೇವ ತ್ವಮೇವ ಸರ್ವಂ ಮಮ ದೇವದೇವ" ಎಂದು ಯತಿರಾಜರವರೂ ಈ ಶ್ರುತ್ಯರ್ಥವನ್ನೇ ಉಪಬೃಹ್ಮಣಮಾಡಿರುತ್ತಾರೆ ಐಹಿಕ ಪಿತಾ ಮೊದಲಾದವರೂ ಸರಿಯಾಗಿ ನೋಡಿದರೆ ಹಾಗೆ ಭಾವಿಸಲ್ಪಡಲು ಅರ್ಹರಲ್ಲವೆಂದೂ, ಲೋಕಕ್ಕೆಲ್ಲಾ ಪಿತಾ ಮಾತಾವಾಗಿರುವವನೇ ಸರಿಯಾದ ಸರ್ವವಿಧ ಬಂಧುವೆಂದೂ ಲಕ್ಷ್ಮಣನು ಹೇಳಿಕೊಂಡಿರುತ್ತಾನೆ.—"ಅಹಂ ತಾವನ್ಮಹಾರಾಜೇ ಪಿತೃತ್ವಂ ನೋಪಲಕ್ಷಯೇ। ಭ್ರಾತಾ ಭರ್ತಾ ಚ ಬಂಧುಶ್ಚ ಪಿತಾ ಚ ಮಮರಾಘವಃ" ಉಪಾಧಿಯಿಂದ ತಂದೆಯಾದ ದಶರಥನು ಮಹಾರಾಜನು ಮಾತ್ರವೇ ಎಂದು ಹೇಳಿ ನಿರುಪಾಧಿಕವಾದ ಸರ್ವವಿಧ ಬಂಧುವೂ ತನಗೆ ಶ್ರೀರಾಮನೇ ಎಂದು, ತನ್ನ ತಂದೆಯ ಎದುರಿಗೇನೇ ಹೇಳಿಕೊಂಡಿರುತ್ತಾನೆ.

ಶ್ರುತಿಗಳೂ ಸಮಸ್ತ ಪುರಾಣೇತಿಹಾಸಗಳೂ ನಮಗೂ ಶ್ರಿಯಃಪತಿಗೂ ನವವಿಧ ಸಂಬಂಧವನ್ನು ಪಪಾದಿಸುತ್ತವೆ

**ಪಿತಾ ಚ ರಕ್ಷಕಶ್ಶೇಷೀ ಭರ್ತಾ ಜ್ಞೇಯೋ ರಮಾಪತಿಃ।**
**ಸ್ವಾಮ್ಯಾಧಾರೋ ಮಮಾತ್ಮಾ ಚ ಭೋಕ್ತಾ ಚಾದ್ಯ ಮನೂದಿತಃ॥**

ಎಂಬಶ್ಲೋಕವು ಈ ನವವಿಧ ಸಂಬಂಧಗಳನ್ನು ತಿಳಿಸುತ್ತದೆ. (೧೭೩ನೆಯ ಪುಟವನ್ನು ನೋಡಿ ಉಪೋದ್ಘಾತಾಧಿಕಾರದಲ್ಲಿ) ಈ ನವವಿಧ ಸಂಬಂಧಗಳೂ ಮೂಲಮಂತ್ರದಲ್ಲೇ ಸುವ್ಯಕ್ತವು ಕಾರಣತ್ವವನ್ನು ಬೋಧಿಸುವ ಅಕಾರದಿಂದ (೧) ಪಿತೃತ್ವವೂ, ಅವರಕ್ಷಣೇ ಎಂಬ ಧಾತ್ವರ್ಥಮೂಲಕ ಅಕಾರದಿಂದಲೇ (೨) ರಕ್ಷಕತ್ವವೂ, ಲುಪ್ತ ಚತುರ್ಥಿಯಮೂಲಕ ನಮ್ಮಲ್ಲಿ ಶೇಷತ್ವವೂ ಅವನಲ್ಲಿ (೩) ಶೇಷಿತ್ವವೂ, ಉಕಾರದ ಅವಧಾರಣಾರ್ಥದಿಂದ (೪) ಭರ್ತೃತ್ವವೂ, ಮಕಾರವಾಚ್ಯನು ಜ್ಞಾತಾವಾದುದರಿಂದ ಶ್ರಿಯಃಪತಿಯಲ್ಲಿ (೫) ಜ್ಞೇಯತ್ವವೂ, ನಾರಾಯಣಪದದಲ್ಲಿ (೬) ಸ್ವಾಮಿತ್ವವೂ (೭) ಆಧಾರತ್ವವೂ ತತ್ಪುರುಷಸಮಾಸದಲ್ಲಿಯೂ, ಶರೀರ ಭಾವವೂ ಬಹುವ್ರೀಹಿಸಮಾಸದಲ್ಲಿಯೂ, ನಾರಾಯಣ ಶಬ್ದದಲ್ಲಿರುವ ಚತುರ್ಥಿಯಿಂದ ತೋರುವ ಕೈಙ್ಕರ್ಯಭಾವದಿಂದ (೯) ಭೋಕ್ತೃತ್ವವೂ, ತೋರ

ರುತ್ತದೆ. ಈ ಅಭಿಪ್ರಾಯಗಳನ್ನೆಲ್ಲಾ ಸಙ್ಗ್ರಹವಾಗಿ ಸೂಚಿಸುವದಕ್ಕಾಗಿ ಮುಕ್ಕುಮುನ್ನೈತ್ತುರವಾಯ್ ಎಂಬ ಪ್ರಯೋಗವು

ಮರುಳ್ ಸುರಾತ್ತುರುಳಾಳಿಯುಮವಾಯ್ – ಪ್ರಕೃತಿ ಸಂಬಂಧದಿಂದ ಈ ಜೀವನಜ್ಞಾನವು ತಿರೋಹಿತವಾಗಿರುತ್ತದೆ. ಶ್ರಿಯಃಪತಿಯು ತನ್ನನ್ನು ತಿಳಿಯಲು ತಾನೇ "ಯೇನಾಶ್ರುತಂ ಶ್ರುತಂ ಭವತಿ" ಎಂದು ಹೇಳಿರುವ ಪ್ರಕಾರ ತಾನೇ ದಯಪಾಲಿಸುವ ಜ್ಞಾನದಿಂದ ಈ ಚೇತನನು ತನ್ನನ್ನು ಹೊಂದುವ ಮಾರ್ಗವನ್ನು ಕೇಳಿ ತಿಳಿದು ಅವಲಂಬಿಸಬೇಕಾಗಿರುತ್ತದೆ. "ಅಜ್ಞಾನೇನಾವೃತಂ ಜ್ಞಾನಂ ತೇನ ಮುಹ್ಯಂತಿ ಜಂತವಃ" (ಗೀ. ೫-೧೫) ಹೀಗೆ ಜ್ಞಾನವು ಅಜ್ಞಾನದಿಂದ ತಿರೋಹಿತವಾಗಿರುವದರಿಂದ ಭ್ರಮಾದಿಗಳಿಗೆ ಕಾರಣಭೂತವಾಗಿರುತ್ತದೆ. ಇಂತಹ ಅಜ್ಞಾನವು ತೊಲಗಬೇಕಾದರೆ ಸ್ವಾಮಿ ಕೃಪೆಯಿಂದಲೇ ಆಗತಕ್ಕದ್ದೇ ವಿನಾ ಅನ್ಯಥಾ ಇಲ್ಲವು; "ಪ್ರೀತಿಪೂರ್ವಕಂ । ದದಾಮಿ ಬುದ್ಧಿಯೋಗಂ ತಂ ಯೇನ ಮಾಮುಪಯಾಂತಿ ತೇ" (ಗೀ ೧೦. ೧೧) ಎಂದು ಹೇಳಿರುವ ಹಾಗೆ ಸರ್ವೇಶ್ವರನೇ ತನ್ನ ಕೃಪಾಪೂರ್ವಕವಾಗಿ ಬುದ್ಧಿಯೋಗವನ್ನುಂಟು ಮಾಡುವನು.

"ತೇಷಾಮೇವಾನುಕಂಪಾರ್ಥ ಮಹಮಜ್ಞಾನಜಂ ತಮಃ ।
ನಾಶಯಾಮ್ಯಾತ್ಮಭಾವಸ್ಥೋ, ಜ್ಞಾನ ದೀಪೇನ ಭಾಸ್ವತಾ॥ (ಗೀ.೧೦ ೧೧)

ಯಾವಾಗಲೂ ಭಕ್ತಿಯೋಗದಲ್ಲಿದ್ದು ಆತನನ್ನು ಭಜಿಸುವವರಿಗೆ ಅನುಗ್ರಹ ಮಾಡುವದಕ್ಕಾಗಿ, ಅವರುಗಳ ಮನೋವೃತ್ತಿಗೆ ತಾನೇ ವಿಷಯಭೂತನಾಗಿ, ತನ್ನ ವಿಷಯವಾದ ಜ್ಞಾನವೆಂಬ ದೀಪದಿಂದ ಪ್ರಾಚೀನಕರ್ಮದಿಂದುಂಟಾದ ಅಜ್ಞಾನವೆಂಬ ಕತ್ತಲೆಯನ್ನು ನಾಶಗೊಳಿಸುವನೆಂದು ಶ್ರೀ ಕೃಷ್ಣನೇ ಹೇಳಿಕೊಂಡಿರುತ್ತಾನೆ. ಆದುದರಿಂದಲೇ ಮರುಳ್ ಸುರಾತ್ತುರುಳಾಳಿಯುಮವಾಯ್ ಎಂದು ಪ್ರಯೋಗಿಸಿರುತ್ತಾರೆ. ಹೀಗೆ ಎರಡು ವಿಶೇಷಣಗಳಿಂದ ಆತನೇ ನಮಗೆ ಸ್ವಾಮಿಯೂ ಶೇಷಿಯೂ ರಕ್ಷಕನೂ, ಆದುದರಿಂದ ನಮ್ಮನ್ನು ತನ್ನ ಇಷ್ಟಬಂದಂತೆ ವಿನಿಯೋಗಿಸಲು ಸ್ವಾತಂತ್ರ್ಯ ಉಂಟೆಂದೂ, ನಮ್ಮ ಅಜ್ಞಾನವನ್ನು ಹೋಗಲಾಡಿಸಿ ತನ್ನನ್ನೇ ನಂಬುವಹಾಗೆ ಮಾಡಿಕೊಳ್ಳುವ ಕೃಪಾಜಲನಿಧಿಯೆಂದೂ ಹೇಳಿರುವದರಿಂದ ನಮಗೆ ಸಿದ್ಧೋಪಾಯನಾಗಿರಲು ಬೇಕಾದ ಕಲ್ಯಾಣಗುಣಗಳು ಆತನಲ್ಲಿವೆ ಎಂದು ಹೇಳಲ್ಪಟ್ಟಿವೆ. ಆದರೆ ಸರ್ವಶಕ್ತತ್ವವಿಲ್ಲದೆ ಆತನ ಕೃಪೆಯು ಕಾರ್ಯಕಾರಿಯಾಗದೆಂದು ಭಾವಿಸಿ "ತನ್ನಿನ್ನೈಪಾಲನ್ನತ್ತುರವ್" ಇತ್ಯಾದಿ ವಿಶೇಷಣವನ್ನು ಕೊಟ್ಟಿರುತ್ತಾರೆ. ಸಙ್ಕಲ್ಪಮಾತ್ರದಿಂದಲೇ ಸರ್ವವನ್ನೂ ಧರಿಸುವ ಸರ್ವಶಕ್ತಿಯುಳ್ಳವನು ಸರ್ವೇಶ್ವರನು. "ದ್ಯೌಸ್ಸಚಂದ್ರಾರ್ಕ ನಕ್ಷತ್ರಂ ಖಂದಿಶೋ

ಭೂಮರ್ಹೋದಧಿಃ । ವಾಸುದೇವಸ್ಯ ವೀರ್ಯೇಣ ವಿಧೃತಾನಿ ಮಹಾತ್ಮನಃ" ಎಂದೂ, "ಭ್ರಾಮಯನ್ ಸರ್ವ ಭೂತಯಂತ್ರಾ ರೂಢಾನಿ ಮಾಯಯಾ" (ಗೀ. ೧೮.೬೧) ಎಂದೂ ಹೇಳಿರುವಹಾಗೆ ಸರ್ವವನ್ನೂ ಸ್ವಸಙ್ಕಲ್ಪದಿಂದಲೇ ಧರಿಸಿ ರುವನು ಹೀಗೆ ಸರ್ವಶಕ್ತಿಸ್ವಾತಂತ್ರ್ಯಕಾರುಣ್ಯಗಳನ್ನು ಹೊಂದಿರುವವನನ್ನು ಆಶ್ರಯಿಸಿದರೆ ನಮ್ಮ ಇಷ್ಟಾರ್ಥವು ಸಿದ್ಧಿಸುವದೇ.ವಿನಾ ಎಂದಿಗೂ ವಿಫಲವಾಗದು ಎಂಬ ಭಾವವು. ಓಙ್ಗುವರ್ ತನಿಯಿರ್ರೈಯಾರ್ ಎಂದು ಹೇಳಿರುವದರಿಂದ "ಸೋಽಕಾಮಯತ ಬಹುಸ್ಯಾಂ ಪ್ರಜಾಯೇಯ" ಎಂಬ ಶ್ರುತ್ಯನುಸಾರ ವಾಗಿ ಎಲ್ಲಕ್ಕೂ ತನ್ನ ಸಙ್ಕಲ್ಪಮಾತ್ರದಿಂದಲೇ ಸತ್ತೆಯನ್ನುಂಟುಮಾಡುವದರ ಮೂಲಕ ಎಲ್ಲವೂ ಅಭಿವೃದ್ಧಿಯನ್ನು ಹೊಂದೋಣ ಹೇಗೋ ಹಾಗೆ ಮಾಡಿದ ಅದ್ವಿತೀಯ ಸ್ವಾಮಿಯು ಎಂದು ಹೇಳಲ್ಪಟ್ಟಿತು.

ಇವೆಲ್ಲಕ್ಕೂ ಮಹತ್ತಾದ ಇನ್ನೊಂದು ಕಾರಣವೂ ಉಂಟು. ಇನ್ನಮುದ ತ್ತಮುದಾಲಿರುಙ್ಗುವರ್ ತಿರುನಾರಣ‌ನ್, ಆತನಿಗೆ ಪ್ರಿಯವಲ್ಲಭಳು ಅಮೃತ ಕ್ಷೀರಸಮುದ್ರದ ಕನ್ಯಕೆಯಾಗಿ,ಅಮುದು ಎಂದರೆ ಅಮೃತವೆಂಬ ಹೆಸರುಳ್ಳ ಅನು ಗ್ರಹಮಯಳಾಗಿ ಅಜ್ಞಾತನಿಗ್ರಹಳಾಗಿರುವ ಲಕ್ಷ್ಮಿಯು ; ಆಕೆಯು ಯಾವಾಗಲೂ ಅನಪಾಯಿನಿಯಾಗ ವಿಲಕ್ಷಣ ವಿಶೇಷಣವಾಗಿರುವದರಿಂದ ಆಕೆಯ ಸಾನ್ನಿಧ್ಯದಲ್ಲಿ ಮಾಡಿದ ಶರಣಾಗತಿಯ ಮಹಿಮೆಯು ಎಂತಹ ಕ್ರೂರವಾದ ಪ್ರಾರಬ್ಧಕರ್ಮ ಮೂಲಕ ಸರ್ವಶಾಸ್ತ್ರವಿನ ಕೋಪಕ್ಕೆ ಗುರಿಯಾಗಿರುವವನನ್ನೂ ಅನುಗ್ರಹಕ್ಕೆ ಪಾತ್ರನನ್ನಾಗಿ ಮಾಡುವದರಿಂದ, ಆಕೆಯು ಸಿದ್ಧೋಪಾಯಳೆಂಬುವವರಲ್ಲಿ ಸಂದೇಹ ವಿಲ್ಲವು. ಎಲ್ಲಕ್ಕೂ ಆಕೆಯೇ ಮೂಲೋಪಾಯಭೂತಳೆಂಬುವದನ್ನು ರಾಮಾವ ತಾರದಲ್ಲಿ ಮಾಯಾ ಮೃಗವನ್ನಪೇಕ್ಷಿಸಿ, ರಾವಣನಿಂದ ಪಹೃತಳಾಗಿ ಸರ್ವರಾಕ್ಷಸ ನಾಶಕ್ಕೂ ಸರ್ವಋಷಿಸಂಘದ ರಕ್ಷಣೆಗೂ ಕಾರಣಭೂತಳೆಂಬುವದು ಸುವ್ಯಕ್ತವು. ಹಾಗೆಯೇ ಕೃಷ್ಣಾವತಾರದಲ್ಲಿ ಶಿಶುಪಾಲನಿಂದ ವರಿಸಲ್ಪಡುವ ಹಾಗೆ ಮಾಡಿ ಕೊಂಡು, ಕಡೆಗೆ ಆತನನ್ನು ವರ್ಜಿಸಿ, ಶ್ರೀ ಕೃಷ್ಣನಿಗೆ ಪತ್ರ ಬರೆದು ಗುಪ್ತವಾಗ ಬರಮಾಡಿಕೊಂಡು ವಿವಾಹಿತಳಾದುದರಿಂದ ಪ್ರಬಲದ್ವೇಷಗಳಿಗೆ ಕಾರಣಭೂತ ಳಾಗಿ ಶಿಶುಪಾಲ ಜರಾಸಂಧಾದಿಗಳೆಲ್ಲಾ ಹತರಾಗಲು ಕಾರಣವಾದಳೆಂಬುದೂ ಸುವ್ಯಕ್ತವು. ಆದುದರಿಂದ ದ್ವಯಮಂತ್ರದ ಶ್ರೀಶಬ್ದವು ವಿಶೇಷಣವೇ ವಿನಾ ಉಪಲಕ್ಷಣವಲ್ಲವೆಂದು ತಿಳಿಸುವದಕ್ಕಾಗಿ ಅಮುದಾಲ್ ಇರಙ್ಗುವರ್ ಎಂಬ ಪ್ರಯೋಗವು, "ಲಕ್ಷ್ಮ್ಯಾ ಸಹಹೃಷೀಕೇಶೋ" ಎಂಬ ಲಕ್ಷ್ಮೀತಂತ್ರ ಪ್ರಮಾಣಾರ್ಥವೂ ಸೂಚಿಸಲ್ಪಟ್ಟಿತು. ಅಮುದತ್ತಮುದಾಲ್ ಎಂಬ ಪ್ರಯೋ ಗದಿಂದ ಲಕ್ಷ್ಮಿಯೂ ಅಮೃತತ್ವವನ್ನುಂಟುಮಾಡುವ ಸಾಮರ್ಥ್ಯವುಳ್ಳವಳೆಂದೂ

ವಿಶ್ರಾಮ್ಯದ್ಭಿರುಪರ್ಯುಪರ್ಯಪಿ ದಿವಾನಕ್ತಂ ಬಹಿರ್ದರ್ಶನೈ
ರಸ್ಮದ್ದೇಶಿಕ ಸಂಪ್ರದಾಯ ರಹಿತೈ ರದ್ಯಾಪಿ ನಾಲಕ್ಷಿತಃ ।

" ವಿಮುಕ್ತಿ ಫಲದಾಯಿನೀ " (ವಿ ಪು ) ಇತ್ಯಾದಿ ಪ್ರಮಾಣಗಳಲ್ಲವು ಸೂಚಿಸಲ್ಪಟ್ಟಿತು.. ಆದುದರಿಂದ ಇಂತಹ ಲಕ್ಷ್ಮೀಯುಕ್ತನಾದ ನಾರಾಯಣನೇ ಲಕ್ಷ್ಮಿಯಲ್ಲೂ ನಾರಾಯಣನಲ್ಲೂ ಶರಣಾಗತಿಯನ್ನನುಷ್ಠಿಸಿದುವ ಪ್ರಪನ್ನರಾದ ನಮಗೆ ಸಿದ್ಧೋಪಾಯನು ಹೀಗೆ ಸಿದ್ಧೋಪಾಯನಾದರೂ ಅವ್ಯವಸ್ಥನಾದ ಸಿದ್ಧೋಪಾಯನಲ್ಲವು, ಸಾಧ್ಯೋಪಾಯರೂಪವ್ಯಾಜಸಾಪೇಕ್ಷನಾಗಿ ಅನುಗ್ರಹಿಸುವದರಿಂದ, ಸರ್ವಮುಕ್ತಿಪ್ರಸಙ್ಗಕ್ಕೆ ಕಾರಣವಿಲ್ಲವು ಈ ಅಭಿಪ್ರಾಯವು. ಮುಕ್ತ್ಯೋರ್ಪತ್ತಿನ್ರಿ ವರಿಪ್ಸುವರ್ಕ್ಕೀ ಶ್ರಿಯಃಪತಿಯಲ್ಲದೆ ಇನ್ನ್ಯಾರನ್ನೂ ಆಶ್ರಯಿಸದೇ ಇರುವವರಿಗೆ, ಎಂಬುವದರಿಂದ ತೋರಿಬರುತ್ತದೆ.

**ಅವತಾರಿಕೆ**- ಈ ಶ್ಲೋಕದ ಮೂಲಕ ಹೀಗೆ ಸಿದ್ಧೋಪಾಯನು ಶ್ರಿಯಃಪತಿಯೆಂದೂ ಕೆಲವರು ಭಾವಿಸದೆ, ಇತರರು ಮಾತ್ರ ಭಾವಿಸಲು ಕಾರಣವೇನೆಂಬುದನ್ನು ತಿಳಿಸಲುದ್ಯುಕ್ತರಾಗಿ, " ತದ್ಯಥಾ ಹಿರಣ್ಯನಿಧಿಂ " ಎಂಬ ಶ್ರುತ್ಯರ್ಥವನ್ನುಪಪಾದಿಸಿ ತಿಳಿಸುತ್ತಾರೆ.

**ಅರ್ಥ**—**ದಿವಾನಕ್ತಂ**-ಹಗಲೂ ರಾತ್ರಿ ಸಹ ಎಂದರೆ ಯಾವಾಗಲೂ, **ಉಪರ್ಯುಪರಿ** - ಹಿರಣ್ಯನಿಧಿಯ ರೂಪನಾದ ಸರ್ವೇಶ್ವರನ ಮೇಲೆ ಮೇಲೆಯೇ, **ವಿಶ್ರಾಮ್ಯದ್ಭಿರಪಿ**-ವಿಶ್ರಮಿಸಿಕೊಂಡಿರುತ್ತಿದ್ದರೂ ಕೂಡ, **ಅಸ್ಮದ್ದೇಶಿಕ ಸಂಪ್ರದಾಯ ರಹಿತೈಃ** - ನಮ್ಮ ಆಚಾರ್ಯರುಗಳಾದ ನಾಥಮುನಿ, ಯಾಮುನ ಮುನಿ, ಶ್ರೀರಾಮಾನುಜಮುನಿ, ಆಳ್ವಾರ್ ಮೊದಲಾದವರುಗಳ ಸಂಪ್ರದಾಯ ಸಂಬಂಧವಿಲ್ಲದ, **ಬಹಿರ್ದರ್ಶನೈಃ** - ಹೊರಗಿನ ಪದಾರ್ಥಗಳನ್ನುಮಾತ್ರ ನೋಡಲು ಶಕ್ತಿಯುಳ್ಳವರುಗಳಿಂದ, ಅಥವಾ ಶಾಸ್ತ್ರಗಳ ರಹಸ್ಯಾರ್ಥಗಳನ್ನು ಗ್ರಹಿಸದೆ ಮೇಲೆ ಮೇಲೆ ತೋರುವ ಅರ್ಥಗಳನ್ನುಮಾತ್ರ ಗ್ರಹಿಸುವರುಗಳಿಂದ, ಅಥವಾ ವೇದಬಾಹ್ಯರಾದ ಇತರ ಸಿದ್ಧಾಂತಿಗಳಿಂದ, **ಅದ್ಯಾಪಿ** – ಈಗಲೂಕೂಡ, **ನಾಲಕ್ಷಿತಃ** – ಕಾಣದೇ ಇರುವಂಥಾದ್ದು, ಇದು ಶೇವಧಿಃ ಎಂಬುವದಕ್ಕೆ ವಿಶೇಷಣವು. ಇಂತಹ ನಮ್ಮ ಗುರುಪರಂಪರೆಯ ಸಂಪ್ರದಾಯ ವಿಷ್ಟಲ್ಲದವರಿಂದ ಈ ಸಿದ್ಧೋಪಾಯನಾದ ಶ್ರಿಯಃಪತಿಯು ಕಣ್ಣಿಗೆ ಬೀಳುವದಿಲ್ಲವೆಂದು ಹೇಳಿದರು ; ಇನ್ನು ಯ್ಯಾರಿಗೆ ಗೋಚರನು ಎಂದರೆ ಸತ್ಪ್ರಸ್ಥರಿಗೆ ಎಂದು ಉತ್ತರಾರ್ಧದಿಂದ ಹೇಳುತ್ತಾರೆ. ... ಶೇ...ತನನು ಹೊಂದುವದಕ್ಕೆ, **ಸ್ವಯಮೇವ**–ತಾನೆಯೇ **ಸಾಧನ**

**ಸ್ವಪ್ರಾಪ್ತೇ ಸ್ವಯಮೇವ ಸಾಧನತಯಾ ಜೋಘುಷ್ಯಮಾಣಃ ಶ್ರುತೌ**
**ಸತ್ಸ್ವಸ್ಥೇಷು ಭಜೇತ ಸನ್ನಿಧಿಮಸೌ ಶಾಂತಾವಧಿಶ್ಶೇವಧಿಃ ॥ ೫೩ ॥**

**ಇತಿ ಕವಿತಾರ್ಕಿಕಸಿಂಹಸ್ಯ ಸರ್ವತಂತ್ರಸ್ವತಂತ್ರಸ್ಯ ಶ್ರೀಮದ್ವೇಙ್ಕಟನಾಥಸ್ಯ ವೇದಾಂತಾಚಾರ್ಯಸ್ಯ ಕೃತಿಷು, ಶ್ರೀಮದ್ರಹಸ್ಯತ್ರಯಸಾರೇ ಸಿದ್ಧೋಪಾಯ ಶೋಧನಾಧಿಕಾರಸ್ತ್ರಯೋವಿಂಶಃ.**
**ಶ್ರೀಮತೇ ನಿಗಮಾನ್ತ ಮಹಾದೇಶಿಕಾಯ ನಮಃ**

---

**ತಯಾ**-ಸಾಧನವೆಂಬ ಭಾವದಿಂದ, **ಶ್ರುತೌ**- ಶ್ರುತಿಗಳಲ್ಲಿ (ಛಾಂದೋಗ್ಯವಚನವು). **ಜೋಘುಷ್ಯಮಾಣಃ** - ಉದ್ಘೋಷಿಸಲ್ಪಟ್ಟಿರುವ, **ಅಸೌ** – ಈ ಸಿದ್ಧೋಪಾಯನಾದ, **ಶಾಂತಾವಧಿಃ** – ದೇಶಕಾಲವಸ್ತು ಪರಿಚ್ಛೇದರಹಿತನಾದ, **ಶೇವಧಿಃ** – ಹಿರಣ್ಯನಿಧಿ ಎಂದು ಶ್ರುತಿಯಲ್ಲಿ ಹೇಳಲ್ಪಟ್ಟ ಪರಮಾತ್ಮನು, **ಸತ್ಸ್ವಸ್ಥೇಷು** – ಸತ್ಸಂಪ್ರದಾಯನಿಷ್ಠರಾದ ಸಾತ್ವಿಕ ಜನಗಳಲ್ಲಿ, **ಸನ್ನಿಧಿಂ**-ಸಾನ್ನಿಧ್ಯವನ್ನು, **ಭಜೇತ**-ಹೊಂದುವನು, ಎಂದರೆ ಅಂತವರಿಗೆ ಗೋಚರನಾಗುವನೆಂಬ ಭಾವವು.

**ತಾತ್ಪರ್ಯ**—ತಮ್ಮಲ್ಲೇ ಕೆಲವರು ಈ ಸಿದ್ಧೋಪಾಯ ಸ್ವರೂಪವನ್ನು, ಶ್ರುತ್ಯಾದಿ ಶಾಸ್ತ್ರಪ್ರಮಾಣಗಳ ಸರಿಯಾದ ಪರಿಶೀಲನವಿಲ್ಲದಿರುವದರಿಂದಲೂ, ತಮ್ಮ ಗುರುಪರಂಪರೆಯ ಸಂಪ್ರದಾಯಕ್ಕೂ ಬಾಹಿರರಾದುದರಿಂದಲೂ, ತಿಳಿಯದೆ ಹೋದರೆಂದು ತಿಳಿಸುತ್ತಾರೆ, ಶಾಸ್ತ್ರಪ್ರಮಾಣಗಳ ರಹಸ್ಯಾರ್ಥಗಳನ್ನೂ ಕೂಡ ಚನ್ನಾಗಿ ಪರಿಶೀಲಿಸಿ ಉಪದೇಶಹೊಂದಿದವರಾದ ಮತ್ತು ಅಂತವರುಗಳ ಸಂಪ್ರದಾಯವನ್ನರಿತ ಸತ್ಸಂಪ್ರದಾಯನಿರತರಿಗಾದರೋ ಈ ಸಿದ್ಧೋಪಾಯನು ಶ್ರಿಯಃಪತಿ ಎಂಬುದು ಸುವ್ಯಕ್ತವೆಂದು ತಿಳಿಸುತ್ತಾರೆ.

ಹೀಗೆ ಶಾಸ್ತ್ರಪ್ರಮಾಣಗಳ ಮತ್ತು ಸತ್ಸಂಪ್ರದಾಯಗಳ ಸಹಾಯವಿದ್ದರೂ ಏತಕ್ಕೆ ಇವರುಗಳಿಗೆ ಗೋಚರವಾಗಲಿಲ್ಲವು ಎಂಬುದನ್ನು ಒಂದು ಶ್ರುತಿಯ ಮೂಲಕ ಉಪಪಾದಿಸುತ್ತಾರೆ. ಅದು ಯಾವುದೆಂದರೆ:—"ತದ್ಯಥಾ ಹಿರಣ್ಯನಿಧಿಂ ನಿಹಿತಮಕ್ಷೇತ್ರಜ್ಞಾ ಉಪರ್ಯುಪರಿ ಸಂಚರಂತೋ ನವಿಂದೇಯುಃ, ಏವಮೇವೇಮಾಃ ಪ್ರಜಾ ಅಹರಹರ್ಗಚ್ಛಂತ್ಯ ಏತಂ ಬ್ರಹ್ಮಲೋಕಂ ನ್ನವಿಂದಂತಿ, ಅನೃತೇನ ಹಿ ಪ್ರತ್ಯೂಢಾಃ" (ಛಾಂ ೮. ೩ ೨.) ಹೇಗೆ ಕೆಳಗೆ ಗುಪ್ತವಾಗಿರುವ ಹಿರಣ್ಯನಿಧಿಯನ್ನೂ, ಆ ನಿಧಿಯಿರುವ ಕ್ಷೇತ್ರದ ಮಹಿಮೆಯನ್ನೂ ತಿಳಿಯದವರು, ಆ ನಿಧಿಯಮೇಲೆ ಮೇಲೆಯೇ ಸಂಚರಿಸುತ್ತಾ, ಆ ನಿಧಿಯನ್ನು ತಿಳಿಯದೆ ಹೋದಲಾರರೋ, ಹಾಗೆಯೇ ಈ ಸಮಸ್ತರೂ ಸುಷುಪ್ತಿಯಲ್ಲಿ(ನಿದ್ರೆ) ಪ್ರತಿ

ದಿನವೂ ಪರಮಾತ್ಮನೊಂದಿಗೆ ಸೇರಿಯಿದ್ದರೂ, ಅಥವಾ ಅಂತರಾತ್ಮಾವಾಗಿ ಇವರಲ್ಲಿ ಯಾವಾಗಲೂ ಇರುವ ದಹರಾಕಾಶನಾದ ಹಿರಣ್ಯನಿಧಿಯಹಾಗೆ ಪರಮಪುರುಷಾರ್ಥದಾಯಕನಾದ ಪರಬ್ರಹ್ಮನೊಂದಿಗೆ ಇದ್ದರೂ, ದಹರಾಕಾಶಾಖ್ಯನಾದ ಪರಬ್ರಹ್ಮವನ್ನು ಹೊಂದಲಾರರು ಏಕೆಂದರೆ, ಅವಿದ್ಯೆಯಿಂದ ಇವರುಗಳ ಸ್ವಭಾವವು ಆಚ್ಛಾದಿತವಾಗಿ ಬದಲಾಯಿಸಿರುವದರಿಂದ" ಎಂಬುದು ಈ ಶ್ರುತ್ಯರ್ಥವು ಅವಿದ್ಯಾಗೃಹೀತರಾದವರು ಹೇಗೆ ಹೊರಗೆ ಮಾತ್ರ ನೋಡುವರೋ, ಮತ್ತು ಗೂಢವಾಗಿರುವ ಹಿರಣ್ಯನಿಧಿಯನ್ನು ಕಾಣಲಾರರೋ, ಹಾಗೆಯೇ ನಮ್ಮಲ್ಲೇ ಕೆಲವರು ಶಾಸ್ತ್ರಗಳ ಒಳಹೊಕ್ಕು, ಅದರಲ್ಲಿ ಕಾಣಬರುವ ಶ್ರಿಯಃಪತಿತ್ವರೂಪ ಸಿದ್ಧೋಪಾಯತ್ವವನ್ನು ಅರಿಯಲಾರರು. ಅಂತವರು ಯಾರೆಂದರೆ, ಇತರ ಬಾಹ್ಯಕುದೃಷ್ಟಿಸಿದ್ಧಾಂತಿಗಳೂ ಎಂದು ಬಹಿರ್ದರ್ಶನೈಃ ಎಂಬುದರಿಂದ ತಿಳಿಸುತ್ತಾರೆ ಇನ್ನೂ ತಮ್ಮಲ್ಲೇ ಕೆಲವರು ಸಿದ್ಧೋಪಾಯತ್ವವನ್ನು ಅಂಗೀಕರಿಸಿದರೂ, ತನಗೆ ವಿಶೇಷಣಳಾದ ಲಕ್ಷ್ಮಿಯಿಂದ ಸದಾ ಯುಕ್ತನಾಗಿರುವ ಶ್ರಿಯಃಪತಿಯನ್ನು ಸಿದ್ಧೋಪಾಯವೆಂದು ಅಂಗೀಕರಿಸದೇ ಇರುವದರಿಂದ, ಅಸ್ಮದ್ದೇಶಿಕ ಸಂಪ್ರದಾಯರಹಿತೈಃ ಎಂಬುದರಿಂದ ಅವರನ್ನೂ ಸೇರಿಸಿ ಹೇಳಿರುತ್ತಾರೆ. ಈ ಪ್ರಯೋಗದಿಂದ ಶ್ರೀ ದೇಶಿಕರು ಭಿನ್ನಾಭಿಪ್ರಾಯವುಳ್ಳ ಶ್ರೀ ವೈಷ್ಣವರನ್ನು ನಿಂದಿಸಿದರೆಂದು ಹೇಳುವರು; ಇದು ಉದಾರಾಭಿಪ್ರಾಯವಲ್ಲವು. ಇಲ್ಲಿ ಅಪಿ ಶಬ್ದವು ಅದ್ಯ ಎಂಬುದಕ್ಕೆ ಸೇರಿಸಿ, ಅದ್ಯಾಪಿ ಎಂದರ್ಥಮಾಡುವದರಿಂದ, ಇಷ್ಟು ಶಾಸ್ತ್ರಪ್ರಮಾಣವೂ, ಮುಖ್ಯ ದೇಶಿಕರುಗಳಾದ ನಾಥ ಯಾಮುನ ಭಾಷ್ಯಕಾರ ಸಂಪ್ರದಾಯವೂ ಕೂಡ ಅದ್ಯಾಪಿ ನಾಲಕ್ಷಿತಃ-ಇನ್ನೂ ಕೂಡ ಗೋಚರವಾಗಲಿಲ್ಲವೆಂಬ ಪರಿತಾಪ ತೋರುತ್ತದೇ ವಿನಾ ಸರ್ವಾತ್ಮನಾ ನಿಂದೆಯಾಗುವದಿಲ್ಲವು. ಶ್ರೀ ವೈಷ್ಣವರೊಂದಿಗೆ ವಾದಮಾಡಿದರೆ ಭಾಗವತಾಪಚಾರ ಎಲ್ಲಿಯುಂಟಾಗುತ್ತದೋ ಎಂದು ಭೀತರಾಗಿರುವವರು, ಮತ್ತು ಅವಮರ್ಯಾದೆಗಾಗಿ ಪಾದರಕ್ಷೆಗಳು ತಲೆಗೆ ತಾಕುವ ಹಾಗೆ ಮಾಡಿದುದರಿಂದ ಭಾಗವತಪಾದರಜಸ್ಸಿನಿಂದ ತಾವು ಪವಿತ್ರರಾದರೆಂದೂ ಭಾವಿಸಿದವರು, ಎಲ್ಲಿಯಾದರೂ ಶ್ರೀವೈಷ್ಣವರುಗಳನ್ನು ನಿಂದಿಸುವರೇ? ಪರಿತಾಪರೂಪದಲ್ಲೂ, ಉಪದೇಶರೀತಿಯಲ್ಲೂ, ಹೇಳಿ ಅವರುಗಳು ತಮ್ಮ ಅಭಿಪ್ರಾಯವನ್ನು ಅವಲಂಬಿಸಲಿ ಎಂದು ಮಾಡಿದ ಹಿತೋಕ್ತಿಯೆಂದು ಅವರುಗಳು ಭಾವಿಸತಕ್ಕದ್ದು.

ಹಾಗೆ ಹಿತೋಪದೇಶವೆಂಬುದು ಉತ್ತರಾರ್ಧದಿಂದ ಸುವ್ಯಕ್ತವು. ಪೂರ್ವಾರ್ಧದಲ್ಲಿ ತಾವು ಸ್ಥಾಪಿಸಿರುವ ಅಭಿಪ್ರಾಯಕ್ಕೆ "ಅಸ್ಮದ್ದೇಶಿಕ ಸಂಪ್ರದಾಯ"ದ ಬಲವೂ ಮಹಾತ್ಮ್ಯೆಯೂ ಉಂಟೆಂದು ಹೇಳಿದರು ಅವು ಎಲ್ಲಿ ತೋರಿಬರು

ತ್ತದೆ ಎಂದರೆ ಶ್ರೀ ಯಾಮುನೇಯರು ತಮ್ಮ ಸ್ತೋತ್ರದಲ್ಲಿ "ಶ್ರೇಯೋನಹ್ಯರವಿಂದ ಲೋಚನ ಮನಃಕಾಂತಾ ಪ್ರಸಾದಾದೃತೇ ಸಂಸೃತ್ಯಕ್ಷರವೈಷ್ಣವಾಧ್ವಸು ನೃಣಾಂ ಸಂಭಾವ್ಯತೇ ಕರ್ಹಿಚಿತ್" (ದಾಸನ ಚತುಶ್ಲೋಕೀ ವ್ಯಾಖ್ಯಾನವನ್ನು ನೋಡಿ) ಎಂಬಲ್ಲಿ ಲಕ್ಷ್ಮಿಗೆ ಉಪಾಯತ್ವವನ್ನು ಸ್ಪಷ್ಟವಾಗಿ ಬೋಧಿಸಿರುತ್ತಾರೆ. ಹಾಗೆಯೇ ಶ್ರೀ ಬಾಷ್ಯಕಾರರೂ ಶ್ರೀ ಪರಾಶರ ಭಟ್ಟರೂ ಸಹ ಉಪದೇಶಿಸಿರುತ್ತಾರೆ. ಇವೆಲ್ಲಾ ದಾಸನ ಶ್ರೀ ಸ್ತುತಿ ವ್ಯಾಖ್ಯಾನದಲ್ಲಿ ವಿದಿತವು. ಉತ್ತರಾರ್ಧದಿಂದ ಬಹು ಶ್ರುತಿ ಪ್ರಮಾಣಗಳ ಬಲವೂ ಉಂಟೆಂದು ಉಪಪಾದಿಸುತ್ತಾರೆ. ಸ್ವಪ್ರಾಪ್ತಿಗೆ ಸ್ವಯಮೇವಸಾಧನವೆಂದು ಶ್ರುತಿಗಳು ಉದ್ಘೋಷಿಸುತ್ತವೆ ಎಂದು ಹೇಳುತ್ತಾರೆ. ಆ ಶ್ರುತಿಗಳು ಯಾವುವೆಂದರೆ:— "ಅಮೃತಸ್ಯೇಷ ಸೇತುಃ । (ಮುಂ. ೨ ೨ ೫) ಸಂಸಾರ ಸಮುದ್ರದ ಆಚೇ ದಡದಲ್ಲಿರುವ ಮೋಕ್ಷವನ್ನು ಹೊಂದಿಸುವ ಸೇತುವೆಯು ಈತನು, (೨) "ನಾಯಮಾತ್ಮಾ ಪ್ರವಚನೇನ ಲಭ್ಯೋ ನ ಮೇಧಯಾ ನ ಬಹುನಾಶ್ರುತೇನ । ಯಮೇವೈಷ ವೃಣುತೇ ತೇನಲಭ್ಯಸ್ತಸ್ಯೇಷ ಆತ್ಮಾ ವಿವೃಣತೇ ತನೂಂ ಸ್ವಾಂ" (ಮುಂ ೩. ೨. ೩೩) ಪರಮಾತ್ಮನು ಕೇವಲ ಶ್ರವಣ ಮನನ ನಿಧಿಧ್ಯಾಸನಗಳಿಂದಲೇ ಲಭ್ಯನಲ್ಲವು, ಈ ಪರಮಾತ್ಮನು ಯಾವ ಉಪಾಸಕನನ್ನು ತನ್ನನ್ನು ಹೊಂದಲು ಯೋಗ್ಯನೆಂದು ಸಾಧ್ಯೋಪಾಯಕ್ಕೆ ವರಿಸುವನೋ, ಆತನಿಗೆ ಲಭ್ಯನು ಎಂದರೆ ಯಾರನ್ನು ಪರಮಾತ್ಮನು ವಿಶೇಷವಾಗಿ ಪ್ರೀತಿಸುವನೋ ಆತನಿಗೇನೇ ಲಭ್ಯನು ಅಂತಹ ಉಪಾಸಕನಿಗೆ ಈ ಪರಮಾತ್ಮನು ತನ್ನನ್ನು ಪ್ರಕಾಶಗೊಳಿಸಿಕೊಳ್ಳುವನು ಎಂದರೆ ತನ್ನನುಭವವನ್ನುಂಟುಮಾಡುವನು. ಹಾಗೆಯೇ ಶ್ವೇತಾಶ್ವತರದಲ್ಲಿ (೩) "ಅಮೃತಸ್ಯಪರಂ ಸೇತುಮ್ ದಗ್ಧೇನ್ಧನಮಿವಾನಲಂ" ಎಂದಿರುತ್ತದೆ. (೪) "ತಮಕ್ರತುಂ ಪಶ್ಯತಿ ವೀತಶೋಕೋ ಧಾತುಃ ಪ್ರಸಾದಾ ನ್ಮಹಿಮಾನ ಮೀಶಂ" (ಅಂಭಸಿ ತೈ. ೪.೨.೧.) ಇತ್ಯಾದಿಗಳು ಪರಮಾತ್ಮನ ಸಾಕ್ಷಾತ್ಕಾರವು ಗುಣವಿಭವೈಶ್ವರ್ಯಾದಿಗಳ ಮಾಹಾತ್ಮ್ಯಯುಳ್ಳ ಸರ್ವ ನಿಯಾಮಕನ ಅನುಗ್ರಹದಿಂದಲೇ ಉಂಟಾಗುತ್ತದೆಂದು ಹೇಳಲ್ಪಟ್ಟಿರುತ್ತದೆ.

ಇಂತಹ ಸಿದ್ಧೋಪಾಯನಾಗಿ ಕೃಪಾಮಹೋದಧಿಯಾದ ಹಿರಣ್ಯಾನಿಧಿಯು, ಸಾತ್ವಿಕ ಸ್ವಭಾವ ಉಳ್ಳವರು ತನ್ನ ಕೃಪಾವಿಗೆ ವಶರಾಗುವದರಿಂದ, ತಾನೇ ಉಪಾಯಾನುಷ್ಠಾನವನ್ನು ಮಾಡಿಸಿ, ಅವರಿಗೆ ಪ್ರಾಪ್ಯನಾಗುವನೆಂಬ ತಾತ್ಪರ್ಯವು.

ಇಂತು ಶ್ರೀಮದ್ರಹಸ್ಯತ್ರಯಸಾರದ
ಸಿದ್ಧೋಪಾಯ ಶೋಧನಾಧಿಕಾರವೆಂಬ ಇಪ್ಪತ್ತುಮೂರನೆಯ ಅಧಿಕಾರಕ್ಕೆ
ತಿರುನಾರಾಯಣಪುರಂ ವಿಜಯರಾಘವ ಶರ್ಮನ
ಆಚಾರ್ಯಹೃದಯಾನ್ವೇಷಿಣೀ
ಎಂಬ ಪ್ರತಿಪದ ಕನ್ನಡ ಟೀಕಾತಾತ್ಪರ್ಯಗಳು ಸಂಪೂರ್ಣವಾದವು.

---